# ಪ್ರತಿವಾರವೂ ಹೊಸದರಲ್ಲಿ ಹೊಸದು!

ವಿವಿಧ ವಿಷಯಗಳ ಮೇಲೆ ವಿಚಾರ ಪ್ರಚೋದಕ ಲೇಖನಗಳು ನಿಮಗೆ ಬೇಕಲ್ಲವೆ?
ವಿಷಯ ವೈವಿಧ್ಯದೊಂದಿಗೆ ಲೇಖನಗಳು ನಿಮಗೆ ಮನೋರಂಜನೆಯನ್ನೂ ನೀಡಬೇಕಲ್ಲವೆ?

ಹಾಗಾದರೆ

ಶ್ರೀ ವೀರಕೇಸರಿ ಸೀತಾರಾಮಶಾಸ್ತ್ರಿಗಳ ಶ್ರೇಷ್ಠ ಧಾರಾವಾಹಿ ಕಾದಂಬರಿ

"ಧರ್ಮಸಾಮ್ರಾಜ್ಯ"

ಓದಲೇಬೇಕಲ್ಲವೆ?

ಹಾಗಾದರೆ

ಸಚಿತ್ರ ಸಾಪ್ತಾಹಿಕ

# ಕರ್ಮವೀರ

## ನೀವು ಅವಶ್ಯ ಓದಬೇಕು

**ಕೆಲ ವೈಶಿಷ್ಟ್ಯಗಳು :**

ನಾನಾ ವಿಷಯಗಳ ಮೇಲೆ ವಿಚಾರ ಪ್ರಚೋದಕ ಮತ್ತು ಮನೋರಂಜಕ ಲೇಖನಗಳು.

ಮುಂಬಯಿ—ಮದ್ರಾಸಗಳ ನಮ್ಮ ವಿಶೇಷ ಪ್ರತಿನಿಧಿಗಳು ಕಳಿಸುವ ತಾಜಾ ಸಿನೇಮಾ ಸುದ್ದಿಗಳು.

ಮಹಿಳೆಯರಿಗೆ, ಬಾಲಕರಿಗೆ ಪ್ರತ್ಯೇಕ ಪುಟಗಳು. ಬಾಲಕರಿಗಾಗಿ "ಎಳೆಯರ ಬಳಗ"

ಮನೋರಂಜಕವಾಗಿರುವ ಸಚಿತ್ರ ಕಥೆ.

**ಫ್ಯಾಂಟಮನ ಸಾಹಸ**

ದೇಶದ ರಾಜಕಾರಣದ ಪರಿಚಯ ಮಾಡಿಕೊಡುವ ರಾಜ್ಯಗಳ ರಾಜಕಾರಣ, ದಿಲ್ಲಿಯ ಪತ್ರ, ರಾಜ್ಯದ ರಾಜಧಾನಿಯಿಂದ ಮೊದಲಾಗಿ ಸ್ಥಿರಶೀರ್ಷಿಕೆಗಳು.

ರವಿವಾರದ ಸಂಚಿಕೆ ಹಿಂದಿನ ಬುಧವಾರವೇ ನಿಮ್ಮ ಕೈಸೇರುವುದು.

೨೪ ಪುಟಗಳು : ೨೦ ನಯೆ ಪೈಸೆ

**ಲೋಕ ಶಿಕ್ಷಣ ಟ್ರಸ್ಟಿನ ಪ್ರಕಟನೆ**

ಕರ್ನಾಟಕಾದ್ಯಂತ

ನಿಮ್ಮ ನೆಚ್ಚಿನ ಚಿತ್ರಮಂದಿರಗಳಲ್ಲಿ

ಇದೇ ತಿಂಗಳಲ್ಲಿ ಪ್ರದರ್ಶನ

ನಂದಿ ಪಿಕ್ಚರ್ಸ್ ರವರ

ನಾಗಾರ್ಜುನ

(ಕನ್ನಡ)

...ತಾರಾಗಣ...

ರಾಜಕುಮಾರ್ • ಜಿ. ವರಲಕ್ಷ್ಮಿ • ಹರಿಣಿ
ಸಂಧ್ಯಾ • ರಮಾದೇವಿ • ಕಾಂತಾ ರಾವ್
ರಾಜನಾಲ • ನರಸಿಂಹರಾಜು
ಕೆ.ಎಸ್.ಅಶ್ವದ್ • ವಿ ನಾಗಯ್ಯ • ಕುಮಾರಿ ಮೀನ
ಶ್ರೀಕಾಂತ್ • ಮಾಸ್ಟರ್ ಸತ್ಯನಾರಾಯಣ

ನಿರ್ದೇಶಕ... ವೈ.ವಿ.ರಾವ್

ನಿರ್ಮಾಪಕ... ಕೆ.ಎಸ್. ಮಲ್ಲಿಕಾರ್ಜುನ

...DISTRIBUTORS...
OLD MYSORE STATE...
SRI KRUPA PICTURES
BANGALORE-9.
NORTH KARNATAKA...
SABNIS BROTHERS
DHARWAR.

# ಸುಂದರ ಕೇಶ

## ಇರಲು ಅದೃಷ್ಟ ಬೇಕು

## ಎಂದು ಹೇಳಬೇಡಿರಿ...

“ಅದೃಷ್ಟಕ್ಕೂ ಅದಕ್ಕೂ ಸಂಬಂಧವಿಲ್ಲ. ತಲೆಗೂದಲು ಸುಂದರವಾಗಿರಲು ಅದಕ್ಕೆ ಒಳ್ಳೆಯ ಆರೈಕೆ ಬೇಕು” ಎಂದು ಬುದ್ಧಿವಂತೆಯಾದ ಯಾವ ಸ್ತ್ರೀಯೂ ಹೇಳಿಯಾಳು. ನಿಮ್ಮ ಕೂದಲಿನ ವಿಷಯದಲ್ಲಿ ನೀವು ವಿಶೇಷ ಜಾಗರೂಕತೆಯನ್ನು ವಹಿಸಿದರೆ ಮಾತ್ರ ಅದು ಸುಂದರವಾಗುವುದು...ಅದಕ್ಕಾಗಿ ಕೇಶಾದ ಸಹಾಯವನ್ನು ಪಡೆಯಿರಿ. ಕೂದಲಿಗೆ ನವಚೈತನ್ಯವನ್ನಿತ್ತು ಅದನ್ನು ಪುಷ್ಟಿಗೊಳಿಸುವ ಘಟಕಗಳು ಕೇಶಾದಲ್ಲಿ ಇವೆ. ಅವು ಕೂದಲಿನ ಅಂತರ್ಭಾಗಕ್ಕೂ ವ್ಯಾಪಿಸಿ, ಅದು ರೇಶ್ಮೆಯಂತೆ ನುಣುಪಾಗಿಯೂ, ಹೊಳಪುಳ್ಳದ್ದಾಗಿಯೂ, ಸುಂದರವಾಗಿಯೂ ಇರುವಂತೆ ಮಾಡುತ್ತವೆ. ದಿವ್ಯ ಸುಗಂಧವುಳ್ಳ ಕೇಶಾ ನಿಮ್ಮ ಕೂದಲಿಗೆ ಒಂದು ವರದಾನವೇ ಆಗಿದೆ.

**ಕೇಶಾ**



ಸೋಲ್ ಏಜಂಟರು ಮತ್ತು
ಪರದೇಶಗಳಿಗೆ ರಫ್ತು ಮಾಡುವವರು:
**ಎಂ. ಎಂ. ಖಂಭಾತ್‌ವಾಲಾ,**
ಅಹಮದಾಬಾದ್ 1

ಏಜಂಟರು:
**ಸಿ. ನರೋತ್ತಮ್ ಅಂಡ್**
**ಕಂಪೆನಿ,**
ಬೊಂಬಾಯಿ 2



# ಕಸ್ತೂರಿ

**ಕನ್ನಡ ಡೈಜೆಸ್ಟ್**

ಪ್ರತಿತಿಂಗಳ ೧ ನೆ ದಿನಾಂಕ
ಪ್ರಕಟವಾಗುವುದು.

ಮುಖ್ಯ ಸಂಪಾದಕರು :
ರಂಗನಾಥ ದಿವಾಕರ

ಸಹಾಯಕ ಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕ ಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತಕರ್ನಾಟಕಮುದ್ರಣಾಲಯ
ಹುಬ್ಬಳ್ಳಿ

ಮುಖಚಿತ್ರ :
ಅಶ್ವಾರೋಹಿ
ರಂಗವಿಠಲ್

ಚಂದಾ ದರ :

| | |
|---|---|
| ವಾರ್ಷಿಕ (ಅಂಚೆಸೇರಿ). | ರೂ.೮.೦೦ |
| ಅರ್ಧ ವರ್ಷ — | ರೂ.೪.೫೦ |
| ಬಿಡಿಸಂಚಿಕೆ — | ರೂ.೦.೭೫ |

**Kasturi, December 1961**


## ಲೇಖಕರಿಗೆ ಸಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನೂ ಒದಗಿಸಬೇಕು. ಮೂಲ ಲೇಖಕರ ಅನುಮತ್ತಿ ಪಡದೇ ಲೇಖಗಳನ್ನು. ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ ಲೇಖಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡರೆ ಕ್ರಮದಲ್ಲಿ ಪ್ರತಿಫಲವನ್ನು ಆದಷು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂದಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸೂರಿ" ಆಯಾತಿಂಗಳ ೧ನೇ ದಿನಾಂಕದೊಳಗೇ. ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಬಂರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ



ಪುಸ್ತಕವಿಭಾಗ

# ಕಸ್ತೂರಿ



ಸಂಚಿಕೆ ೪ ಡಿಸೆಂಬರ್, ೧೯೬೧ ವರ್ಷ ೬

## ಸಂಯಮದ ಭ್ರಮೆ

ಸಮ್ರಾಟ ಪುಷ್ಯಮಿತ್ರನ ಅಶ್ವಮೇಧಯಾಗ ಸಮಾಪ್ತವಾಗಿತು. ಅಂದು ರಾತ್ರಿ ಅತಿಥಿಗಳಿಗಾಗಿ ಏರ್ಪಡಿಸಿದ್ದ ಸತ್ಕಾರ ಸಮಾರಂಭದಲ್ಲಿ ನೃತ್ಯೋತ್ಸವವಿತ್ತು. ಯಜ್ಞದ ಬ್ರಹ್ಮ ಮಹರ್ಷಿ ಪತಂಜಲಿ ಆ ನೃತ್ಯೋತ್ಸವ ನೋಡಲು ಹೋದದ್ದನ್ನು ಕಂಡು ಅವರ ಶಿಷ್ಯನಾದ ಚೈತ್ರನ ಮನದಲ್ಲಿ ಗುರುಗಳ ಈ ವ್ಯವಹಾರ ಉಚಿತವೇ ಎಂಬ ಸಂದೇಹ ಮೂಡಿತು. ಅಂದಿನಿಂದ ಅವನ ಮನಸ್ಸು ಮಹಾಭಾಷ್ಯ ಮತ್ತು ಯೋಗಸೂತ್ರಗಳ ಅಭ್ಯಾಸದಲ್ಲಿ ರಮಿಸಲಿಲ್ಲ.

ಕೊನೆಗೊಂದು ದಿನ ಮಹರ್ಷಿಗಳು ಚಿತ್ತವೃತ್ತಿ ನಿರೋಧದ ಬಗ್ಗೆ ಪ್ರವಚನ ಮಾಡುತ್ತಿದ್ದಾಗ ಚೈತ್ರ ಕೇಳಿದ "ಸ್ವಾಮಿ, ಚಿತ್ತವೃತ್ತಿ ನಿರೋಧಕ್ಕೆ ನೃತ್ಯ-ಗೀತ ಮತ್ತು ರಸರಂಗಗಳೂ ಸಹಾಯಕವಾಗಿವೆಯೆ?" ಪಾರದರ್ಶಿಯಾದ ಪತಂಜಲಿ ಮುನಿಗಳು ಶಿಷ್ಯನ ಅಭಿಪ್ರಾಯವನ್ನು ಅರಿತು, ಮುಗುಳ್ನಕ್ಕು ಹೇಳಿದರು: "ವತ್ಸಾ, ನೀನು ನಿಜವಾಗಿಯೂ ಕೇಳಬೇಕೆಂದಿರುವುದು ಬೇರೆಯೆ. ಅಂದು ರಾತ್ರಿ ನಾನು ಸಮ್ರಾಟನ ನೃತ್ಯೋತ್ಸವದಲ್ಲಿ ಸಮ್ಮಿಲಿತನಾದದ್ದು ಸಂಯಮವ್ರತಕ್ಕೆ ವಿರುದ್ಧವಲ್ಲವೇ ಎಂದೇ ನಿನ್ನ ಪ್ರಶ್ನೆಯಿದೆಯಲ್ಲವೆ? ಕೇಳು, ಸಂಯಮದ ನಿಜ ಅರ್ಥ ನಿನಗೆ ತಿಳಿದಿಲ್ಲ. ಆತ್ಮದ ಸ್ವರೂಪ ರಸವೇ ಆಗಿದೆ- ರಸೊ ವೈ ಸಃ. ಆ ರಸವನ್ನು ಪರಿಶುದ್ಧವಾಗಿಯೂ ಅವಿಕೃತವಾಗಿಯೂ ಇಡುವುದೇ ಸಂಯಮವೆನಿಸುವುದು. ವಿಕೃತಿಯ ಭಯದಿಂದ ರಸವಿಮುಖನಾಗುವುದೆಂದರೆ ಭಿಕ್ಷುಕರ ಭಯದಿಂದ ಗೃಹಿಣಿಯು ಅಡಿಗೆ ಮಾಡುವುದನ್ನೇ ಬಂದುಮಾಡಿದಂತೆ, ಹಕ್ಕಿ-ಪ್ರಾಣಿಗಳ ಭಯದಿಂದ ರೈತ ಹೊಲದಲ್ಲಿ ಬೀಜವನ್ನು ಬಿತ್ತುವುದನ್ನೆ ಬಿಟ್ಟಂತೆ. ಇದು ಸಂಯಮವಲ್ಲ, ಪಲಾಯನ. ಆತ್ಮಘಾತದ ಎರಡನೆಯ ಸ್ವರೂಪವೇ ಇದು. ಅಗ್ನಿಯನ್ನು: ಕಾವಿನಿಂದ ಬೇರ್ಪಡಿಸುವ ಪ್ರಯತ್ನದಂತೆಯೆ ಆತ್ಮವನ್ನು ರಸ ವರ್ಜಿತವನ್ನಾಗಿ ಮಾಡುವ ಪ್ರಯತ್ನವೂ ಭ್ರಮಪೂರ್ಣವಾಗಿದೆ. ಈ ಭ್ರಮೆಗೆ ನೀನು ಸಿಲುಕದಿರು." *

'ನವ ಪುರಾಣ' ದಿಂದ

ದಕ್ಷಿಣೋತ್ತರ ಮಾರ್ಗಗಳೆರಡರ ಮರ್ಮವನ್ನೂ
ಬಲ್ಲ ಅವರ ಸಂಗೀತದ ಮೆರುಗೇ ಬೇರೆ

# ಸಂಗೀತದ ಸನಾಡಗಾರ :
# ಶ್ರೀ ಬಸವರಾಜ ರಾಜಗುರು

ವಿ. ಜಿ. ಮಣೂರ

ಪ್ರೊಫೆಸರ್ ಬಸವರಾಜ ರಾಜಗುರುಗಳು ಒಂಭತ್ತರಲ್ಲಿ ಪಂ. ಪಂಚಾಕ್ಷರಿ ಗವಾಯಿ, ಪಂ. ಪುಟ್ಟರಾಜ ಗವಾಯಿ ಇವರುಗಳ 'ಸಾಥಿ' ಯಾಗಿ ಸಂಗೀತ ಸಭೆ ನಡೆಯಿಸಿದರು; ಮೂವತ್ತರಲ್ಲಿ ಅಖಿಲ ಭಾರತೀಯ ಕೀರ್ತಿ ಪಡೆದರು; ಇಂದು ಳ೧ ರಲ್ಲಿ ಅವರ ಖ್ಯಾತಿ ದೇಶದ ಸೀಮೆಯನ್ನು ದಾಟಿ ಹೋಗಿದೆ. ಇಂದಿನ ಪ್ರಥಮ ವರ್ಗದ ಭಾರತೀಯ ಗಾಯಕರಲ್ಲಿ ರಾಜಗುರುಗಳದೇ ಆದ ವೈಶಿಷ್ಟ್ಯವೊಂದಿದೆ. ಅವರು ದಕ್ಷಿಣೋತ್ತರ ಸಂಗೀತ ಮಾರ್ಗಗಳೆರಡನ್ನೂ ಅರಗಿಸಿಕೊಂಡವರು ; ಉತ್ತರದ ವಿವಿಧ ಘರಾಣೆಗಳ ಮರ್ಮಗಳನ್ನು ಅಭ್ಯಸಿಸಿದವರು. ಈ ವೈಶಿಷ್ಟ್ಯವು ಅವರ ಸಂಗೀತಕ್ಕೆ ಅನನ್ಯಸದೃಶವಾದೊಂದು ಕಾಂತಿಯನ್ನು ನೀಡಿ ರಾಜಗುರುಗಳದೇ ಒಂದು ಮಾರ್ಗವನ್ನು ಎತ್ತಿತೋರಿಸುವಂತಾಗಿದೆ.

ಸಂಗೀತ ವಿಮರ್ಶಕರೂ ಪತ್ರಿಕೆಗಳೂ ರಾಜಗುರುಗಳ ಮೇಲೆ ಹೊಗಳಿಕೆಯ ಮಳೆಯನ್ನೇ ಕರೆದಿದ್ದಾರೆ. "ಅವರ ಸಂಗೀತದಲ್ಲೊಂದು ಸಂದೇಶ, ಒಂದು ಧ್ಯೇಯ ಇದೆ.... ಸಂಗೀತ ಸಾಮ್ರಾಜ್ಯದಲ್ಲಿ ಅವರೊಂದು ಸ್ಪೃಹಣೀಯವಾದ ಸ್ಥಾನವನ್ನು ಸಂಪಾದಿಸಿದ್ದಾರೆ" ಎಂದು "ಹಿಂದುಸ್ತಾನ" ಪತ್ರಿಕೆ ಹೇಳಿದೆ. "ಅವರ ಕಂಠಸಂಪತ್ತು ಅಪೂರ್ವವಾದುದು.... ಯತ್ನರಹಿತವಾದ ಸಿದ್ಧ ಸ್ಫೂರ್ತಿಯ ಗಾಯನ ಬಸವರಾಜರ ಕಲೆಯ ಅತ್ಯಾಕರ್ಷಕ ಅಂಶ. ಲಯದ ಮೇಲೆ ಅವರಿಗಿರುವ ಪ್ರಭುತ್ವ ಪರಿಪೂರ್ಣವಾದುದು, ಸ್ಪೃಹಣೀಯವಾದುದು," ಎಂದಿದೆ "ಟೈಮ್ಸ್" ಪತ್ರಿಕೆ. "ವಿವಿಧ ಘರಾಣೆಗಳ ಗಮಕಗಳಲ್ಲಿರುವ ಸ್ವರ ಸೂಕ್ಷ್ಮಗಳನ್ನೆಲ್ಲ ವಿನಿಯೋಗಿಸಿದ ಅವರ ಗಾಯನವು ಹೃದಯಕ್ಕೂ ಬುದ್ಧಿಗೂ ಸೇರಿಯೆ ಆಪ್ಯಾಯಮಾನವಾಗಿತ್ತು," ಎಂದು "ಇಂಡಿಯನ್ ಎಕ್ಸ್‌ಪ್ರೆಸ್" ನ ವಿಮರ್ಶಕ ಬರೆದಿದ್ದಾನೆ.

ರಾಜಗುರುಗಳ ಮನೆತನದಲ್ಲಿ ಎರಡೂ ಕಡೆ ಸಂಗೀತದ ಪರಂಪರೆ ಇತ್ತು. ತಂದೆ ವೇ. ಮಹಾಂತ ಸ್ವಾಮಿಗಳು ಕರ್ನಾಟಕ ಸಂಗೀತವನ್ನು ತಂಜಾವೂರಿನಲ್ಲಿ ಹದಿನೈದು ವರ್ಷ ಸಾಧಿಸಿದವರು. ಅಜ್ಜಂದಿರೂ ಸಂಗೀತ ಪ್ರವೀಣರಿದ್ದರು. ತಾಯಿ ರಾಜಮ್ಮನವರ ಕಡೆಯಿಂದ ಇವರ ಅಜ್ಜ ಪುರಾಣಿಕರು, ಸೋದರಮಾವಂದಿರು ಯಕ್ಷಗಾನಕುಶಲರು. ಚಿಕ್ಕಂದಿನಿಂದಲೇ ತಂದೆಯವರು ಕರ್ನಾಟಕ ಸಂಗೀತದ ಪಾಠ ಹೇಳಿ ಮಗನನ್ನು ತರಬೇತುಗೊಳಿಸಿದರು. ಆದರೂ ಹಿರಿಯರ ಇಚ್ಛೆಯಂತೆ ರಾಜಗುರುಗಳ ಭವಿಷ್ಯ ರೂಪುಗೊಳ್ಳುತ್ತಿದ್ದರೆ ಅವರಿಂದು ಸಂಸ್ಕೃತ ವಿದ್ವಾಂಸರಾಗಿ ಧರ್ಮಗುರುವಾಗಬೇಕಾಗಿತ್ತು. ಇವರ ಪೂರ್ವಜರು ಕೆಳದಿಯ ಅರಸರ ಧರ್ಮ

ಗುರುಗಳಾಗಿದ್ದರು. ಅನಂತರ ಟೀಪುವಿನ ಕಾಲದಲ್ಲಿ ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕಿನ ಯಲಿವಾಳಕ್ಕೆ ಅವರು ವಲಸೆ ಬಂದಿದ್ದರೂ, ಆ ಪರಂಪರೆ ಹಾಗೆಯೆ ನಡೆದುಬಂದಿತ್ತು.

ಆದರೆ ಬಸವರಾಜರ ಮನಸ್ಸು ಸಂಸ್ಕೃತಾ-ಭ್ಯಾಸದಲ್ಲಿ ನೆಲೆಗೊಳ್ಳಲಿಲ್ಲ. ಧಾರವಾಡದ ಮುರುಘಾಮಠದ ಶ್ರೀ ಮೃತ್ಯುಂಜಯಸ್ವಾಮಿಗಳ ಹತ್ತಿರ ಕಲಿಯಲು ಹಾಕಿದಾಗ ಅವರು ಅಲ್ಲಿಂದ ಪಲಾಯನ ಮಾಡಿದರು. ದಿ. ವಾಮನರಾವ್ ಮಾಸ್ತರರ ನಾಟಕ ಕಂಪನಿಯಲ್ಲಿ ಅವರ ಪತ್ತೆಯಾಯಿತು! ಈ ನಡುವೆ ಅವರ ತಂದೆ ಅಕಾಲದಲ್ಲೇ ಮೃತ್ಯುವಶರಾದರು. ಚಿಕ್ಕಪ್ಪ ಚನ್ನಬಸವ ಸ್ವಾಮಿಗಳು ನಾಟಕ ಕಂಪನಿಯಿಂದ ಅವರನ್ನು ಬಿಡಿಸಿ ತಂದು ಹುಬ್ಬಳ್ಳಿಯ ಮೂರುಸಾವಿರ ಮಠದಲ್ಲಿ ಮತ್ತೆ ಸಂಸ್ಕೃತಾಭ್ಯಾಸಕ್ಕೆ ನಿಯೋಜಿಸಿದರು ಸಂಸ್ಕೃತ ಈ ಸಲವೂ ಹೆಚ್ಚು ಪ್ರಗತಿ ಹೊಂದಲಿಲ್ಲ. ಈ ಸಂಧಿಯಲ್ಲಿಯೆ ಅವರಿಗೆ ವಿಜಾಪುರ ಜಿಲ್ಲೆಯ ಶಿವಯೋಗಮಂದಿರದಲ್ಲ ನೆಲಸಿದ ಪಂ. ಪಂಚಾಕ್ಷರಿ ಗವಾಯಿಗಳ ದರ್ಶನವಾದುದು. ಬಸವರಾಜರ ಮಧುರ ಕಂಠಕ್ಕೆ ಮಾರುಹೋದ ಆ ಗಾನಯೋಗಿಗಳು ಮನೆಯವರ ಇಚ್ಛೆಯಂತೆ ಇವರನ್ನು ಸಂಗಡ ಕರೆದೊಯ್ದರು.

ಪಂಚಾಕ್ಷರಿ ಗವಯಿಗಳು ಕರ್ನಾಟಕಿ ಹಾಗು ಹಿಂದುಸ್ತಾನಿ ಎರಡೂ ಪರಂಪರೆಗಳ ವಿದ್ವಾಂ-ಸರು. ಹಿಂದುಸ್ತಾನಿ ಸಂಗೀತದ ವಾದಗ್ರಸ್ತ "ಘರಾಣೆ"ಗಳ ಗೊಡವೆ ಇಲ್ಲದೆ ಶುದ್ಧ ಶಾಸ್ತ್ರೀಯ ಮಾರ್ಗದಿಂದ ಸಾಗುತ್ತಿದ್ದ ಅವರು ಕರ್ನಾಟಕ ಸಂಪ್ರದಾಯದ ಸ್ವರಗಳನ್ನು ಹಿತಮಿತವಾಗಿ ಅಳವಡಿಸಿಕೊಂಡು ತಮ್ಮ ಗಾಯನಕ್ಕೊಂದು ಬೇರೆಯೆ ಮೆರುಗನ್ನು ಕೊಟ್ಟಿದ್ದರು. ಬಸವರಾಜರು ಹತ್ತು ವರ್ಷ ಕಾಲ ಶ್ರಮಿಸಿ ಅವರಿಂದ ಎರಡೂ ಸಂಪ್ರದಾಯಗಳ ಒಳಹೊರಗನ್ನು ಅರಿತರು. ಅನಂತರ ಜನರಂಜನೆಯನ್ನೇ ಗುರಿಯಾಗಿರಿಸಿಕೊಂಡ ಹಿಂದುಸ್ತಾನಿ "ಘರಾಣಾ" ಸಂಗೀತದ ತಿರುಳರಿಯುವ ಹಂಬಲದಿಂದ ಗುರುಗಳ ಅನುಜ್ಞೆ ಪಡೆದು ಮುಂಬಯಿಗೆ ಹೋದರು.

ಮುಂಬಯಿಯಲ್ಲಿ ಕಿರಾಣಾಸಂಪ್ರದಾಯವನ್ನು ಕುಂದಗೋಳದವರೇ ಆದ ರಾಮಭಾವು (ಸವಾಯಿ ಗಂಧರ್ವ) ಅವರಲ್ಲಿ ಎರಡು ವರ್ಷ ಕಾಲ, ಅನಂತರ ಪುಣೆಯಲ್ಲಿ ಶ್ರೀ ಸುರೇಶಬಾಬು ಮಾನೆಯವರಲ್ಲಿ ಒಂದು ವರ್ಷ ಕಾಲ ಅಭ್ಯಾಸ ಮಾಡಿದರು. ಅಲ್ಲಿಂದ ಲಾಹೋರಿಗೆ ಹೋಗಿ ಠುಮ್ರಿ ಪದ್ಧತಿಯನ್ನೂ ಅನಂತರ ಗ್ವಾಲಿಯರ್, ಜಯಪುರ, ಆಗ್ರಾ ಸಂಪ್ರದಾಯಗಳ ವೈಶಿಷ್ಟ್ಯಗಳನ್ನೂ ತಿಳಿದುಕೊಂಡರು.

೨೫ ನೇ ವಯಸ್ಸು ದಾಟುವುದರೊಳಗೆ ಹೀಗೆ ಬಸವರಾಜ ರಾಜಗುರುಗಳು ಭಾರತೀಯ ಸಂಗೀತದ ಪರಂಪರೆಗಳಲ್ಲಿ ಅರಿಯಬಹುದಾದ್ದನ್ನೆಲ್ಲ ಅರಿತರು. ಯಾವ ಘರಾಣೆಗೂ ಸೇರದ ಗುರುಗಳಿಂದ ತಮ್ಮ ವಿದ್ಯೆಯ ತಳಪಾಯ ಹಾಕಿಸಿಕೊಂಡದ್ದರಿಂದ ಯಾವ ಪರಂಪರೆಗೂ ಬದ್ಧರಾ-ಗದೆ ಎಲ್ಲವುಗಳ ಗಾಡಿ ಮೋಡಿಗಳನ್ನೂ ತಮ್ಮ ಗಾಯನದಲ್ಲಿ ಹಿತವರಿತು ಸೇರಿಸಿಕೊಂಡು ಅವರು ಅಪೂರ್ವವಾದ ಇಂಪು, ನಾವೀನ್ಯಗಳನ್ನು ಪ್ರಕಟಗೊಳಿಸಲು ಶಕ್ತರಾಗಿದ್ದಾರೆ. ಇದರಲ್ಲಿ ಅವರೆಷ್ಟು ಯಶಸ್ವಿಯಾಗಿದ್ದಾರೆಂಬುದು ಭಾರತದ ಮೂಲೆ-ಮೂಲೆಗಳಲ್ಲಿ—ಸಂಗೀತದ ಆಗರಗಳೆನಿಸಿದ ಲಾಹೋರ್, ಆಗ್ರಾ, ಗ್ವಾಲಿಯರ್, ಜಯಪುರ, ದಿಲ್ಲಿ, ಕಲಕತ್ತಾ, ಮೈಸೂರು, ಮದ್ರಾಸ್ ಮೊದಲಾದೆಡೆಗಳಲ್ಲಿ—ಆಯಾ ಘರಾಣೆಯವರು ಕೂಡ ಇವರ ಗಾನ ವೈಖರಿಗಳಿಗೆ ಮೆಚ್ಚಿ ಹೊಗಳಿದುದರಿಂದ ವ್ಯಕ್ತವಾಗುತ್ತದೆ. ಭಾರತದ ಚತುರ್ದಿಕ್ಕುಗಳಲ್ಲಿರುವ ಹೆಚ್ಚು ಕಡಿಮೆ ಎಲ್ಲ ಮುಖ್ಯ ಆಕಾಶವಾಣಿ ಕೇಂದ್ರಗಳೂ ಅವರ ಸಂಗೀತವನ್ನು ಬಿತರಿಸಿವೆ.

ಮಧ್ಯಮ ನಿಲುವು, ಹರವಾದ ಹಣೆ, ಕಾಂ-ತಿಯ ಕಣ್ಣುಗಳು, ಗೌರವರ್ಣ, ನಗುಮುಖದ ಬಸವರಾಜ ರಾಜಗುರುಗಳು ನಿರಾಡಂಬರ, ನಿರ

ಹಂಕಾರಿ ಜೀವಿಗಳು. ದೋತರ, ಮೇಲೊಂದು ಅಂಗಿ, ಕಾಫಿಪುಡಿ ಬಣ್ಣದ ಕೋಟು, ಕೊರಳಿಗೆ ಸ್ಕಾರ್ಫ್, ಸಾಮಾನ್ಯ ಮೆಡವುಗಳು, ಕೈಗೊಂದು ಕೊಡೆ—ಇಲ್ಲಿಗೆ ಅವರ ಅಲಂಕಾರ ಮುಗಿಯಿತು. ಅನೇಕ ಕಲಾವಿದರ ವೈಯಕ್ತಿಕ ಜೀವನದಲ್ಲಿ ಬೀಡುಬಿಟ್ಟ ದುರ್ವ್ಯಸನಗಳಿಂದ ಬಸವರಾಜರು ಸಂಪೂರ್ಣ ಅಲಿಪ್ತರಾಗಿದ್ದಾರೆ. ಪ್ರತಿಭಾಯುಕ್ತ ಕಲೆಗೆ ಚರಿತ್ರ್ಯವೈಕಲ್ಯಗಳು ಅನಿವಾರ್ಯವಲ್ಲೆಂಬುದಕ್ಕೆ ಅವರೊಂದು ನಿದರ್ಶನಯಾಗಿದ್ದಾರೆ.

ಕರ್ನಾಟಕದಲ್ಲಿ ಕಲೆಗೆ ಪುರಸ್ಕಾರವಿಲ್ಲೆಂದು ನೆರೆ ಪ್ರಾಂತಗಳಿಗೆ ಹೋಗಿ ನೆಲಸುವುದು ಕನ್ನಡಿಗ ಕಲಾವಿದರಲ್ಲನೇಕರ ದೌರ್ಭಾಗ್ಯವಾಗಿದ್ದರೆ ಬಸವರಾಜರು ಮಾತ್ರ ತಮ್ಮ ಹುಟ್ಟೂರಾದ ಯಲಿವಾಳದಲ್ಲೇ ಇದ್ದುಕೊಂಡು ತಮ್ಮ ಯಶಸ್ಸನ್ನು ಹಬ್ಬಿಸುತ್ತಿದ್ದಾರೆ. ಇದು ಪಂಚಾಕ್ಷರಿ ಗವಯಿಗಳ ಶಿಷ್ಯವರ್ಗದ ಒಂದು ಹಿರಿಮೆಯೆಂದೇ ಹೇಳಬಹುದು. ಒಳ್ಳೆಯ ಸಂಗೀತಗಾರ ಎಲ್ಲಿದ್ದರೂ ಅವನಿಗೆ ಮನ್ನಣೆ ದೊರೆಯುತ್ತದೆಂಬ ದೃಢವಿಶ್ವಾಸ ಅವರದು. ಅವರ ವಿಶ್ವಾಸ ಸಾರ್ಥಕವೂ ಆಗಿದೆ.

ಶ್ರೀ ರಾಜಗುರುಗಳನ್ನು ಅವರ ಗೆಳೆಯರು ಹಾಸ್ಯಕ್ಕಾಗಿ "ರಾಗಗುರು"ಗಳೆನ್ನುತ್ತಾರೆ. ಇದು ಚೇಷ್ಟೆಯಾದರೂ ಅವರ ಕಂಠಶ್ರೀ ಇದನ್ನು ಸತ್ಯವಾಗಿ ಮಾಡಿದೆ. ಮೇಲಿನ ಸ್ಥಾಯಿಗಳಲ್ಲಿ ಅತಿ ಲೀಲಾಜಾಲವಾಗಿ ವಿಹರಿಸುವ ಇವರ ನುಡಿಕಾರ ಚಾಕುವಿನ ಹರಿತದ್ದು, ಗಂಟೆಯಂತೆ ಖಚಿತ ಮತ್ತು ತಂಬೂರಿಯ ತಂತಿಗಳಂತೆ ಸ್ಫುಟ ಯಾವುದೇ ಪಂಥ ಹಿಡಿದು ಹಾಡಿದರೂ ನಾದ ಸೌಖ್ಯಕ್ಕೆ ಕೊರತೆಯಾಗದು, ಕಲ್ಪನಾಸ್ಫೂರ್ತಿಗೆ ಅಡ್ಡಿಯಾಗದು. ಮಂದ್ರ-ಸ್ಥಾಯಿಯಲ್ಲಿ ಕೆಲವರಿಗಿರುವ ಗಡುಸುತನ, ಗಾಂಭೀರ್ಯ ಇವರ ದನಿಯಲ್ಲಿ ಹೆಚ್ಚಾಗಿಲ್ಲವಾದರೂ ಇವರು ಎತ್ತಿದ ಕೃತಿಗಳಲ್ಲಿ ಎಲ್ಲಿಗಾದರೂ ಧ್ವನಿ ಮುಟ್ಟಿ ಸೈಯೆನಿಸುವುದು ಖಂಡಿತ.

ಬಸವರಾಜರ ಸಂಗೀತದ "ಶಿಶುರ್ವೇತ್ತಿ ಪಶುರ್ವೇತ್ತಿ" ಪವಾಡದ ಬಗ್ಗೆ ಹಲವಾರು ಕಥೆಗಳೇ ಇವೆ. ಇನ್ನೂ ವಿದ್ಯಾರ್ಥಿಯಾಗಿದ್ದಾಗೊಂದು ಸಲ ಅವರು ಕೆರೆಯ ದಂಡೆಯ ಮೇಲೆ ಹಾಡುತ್ತ ಕುಳಿತಾಗ ಎರಡು ಚಿಗರೆಗಳು ತನ್ಮಯವಾಗಿ ಆಲಿಸುತ್ತ ನಿಂತಿದ್ದವಂತೆ. ಬಾದಾಮಿ ಮುಕ್ಕಾಮಿನಲ್ಲೊಂದು ಸಲ ಅವರು ಹಾಡುತ್ತಿದ್ದಾಗ ಮಂಗಗಳ ಗುಂಪೇ ಪ್ರೇಕ್ಷಕರಂತೆ ಕುಳಿತು ಕೇಳುತ್ತಿದ್ದವಂತೆ; ಹಾಡು ಮುಗಿದ ನಂತರವೇ ಅವು ಅಲ್ಲಿಂದ ಹೊರಟವಂತೆ!

ರಾಜಗುರುಗಳಿಗೆ ಸಂಗೀತದ ಅಗಾಧ ಮಹಿಮೆಯ ಬಗ್ಗೆ ತುಂಬ ನಂಬಿಕೆ. ಒಂದು ಸಲ ಅವರು ಮನೆಯಲ್ಲಿ ಬೆಳಗಿನ ಜಾವದಲ್ಲಿ ತೋಡಿ ರಾಗವನ್ನು ಯಾವುದೋ ಮನೋಧರ್ಮ ವಿಶೇಷದಿಂದ ಆಲಪಿಸುತ್ತಿದ್ದರು. ಅದೇ ಹೊತ್ತಿಗೆ ಅವರ ತಾಯಿ ಆಕಳು ಹಿಂಡಲು ಹೋದವರು ಹಸು ಮಂತ್ರಮುಗ್ಧವಾದಂತೆ ನಿಂತು ಕರೆದಷ್ಟೂ ಹಾಲಿಳಿಸುತ್ತಿದ್ದುದನ್ನು ಕಂಡು ಆಶ್ಚರ್ಯಗೊಂಡರು. ಯಾವಾಗಲೂ ಒಂದು ತಂಬಿಗೆ ಹಾಲು ಕೊಡುತ್ತಿದ್ದ ಹಸು ಅಂದು ಎರಡು ತಂಬಿಗೆ ಹಿಂಡಿದರೆ ಮತ್ತೂ ಹಾಲಿಳಿಸುತ್ತಿತ್ತು. ಈ ಅದ್ಭುತವನ್ನು ತಾಯಿಯಿಂದ ಕೇಳಿದ ರಾಜಗುರುಗಳಿಗೆ ಅದು ತಾವು ಹಾಡುತ್ತಿದ್ದ ತೋಡಿರಾಗದ ಮಹಿಮೆಯೆಂದು ಭರವಸೆ. ತಾಯಿ ಅದನ್ನು ನಂಬಿಯಾರೇ? ರಾಜಗುರುಗಳು ಪರೀಕ್ಷಿಸೋಣವೆಂದು ಪಟ್ಟು ಹಿಡಿದರು. ಎರಡು ದಿನಗಳ ನಂತರ ಮತ್ತೆ ಬಸವರಾಜರು ಅದೇ ಹುರುಪಿನಿಂದ ತೋಡಿಯನ್ನು ಆಲಪಿಸಿದರು. ಮತ್ತೆ ಅದೇ ಪವಾಡದ ಪುನರಾವೃತ್ತಿಯಾಯಿತು. ತಾಯಿ ಈಗ ಒಪ್ಪಲೇಬೇಕಾಯಿತು. ಮೊನ್ನೆಮೊನ್ನಿನವರೆಗೆ ಅಂಥ ವಿಶ್ವಾಸವೆನಿಸುತ್ತಿದ್ದ ಈ "ಸಂಗೀತ ಮಹಿಮೆ" ಈಗ ಹಾಗೆನಿಸುತ್ತಿಲ್ಲ. ಪಂ. ಓಂಕಾರನಾಥ, ಪ್ರೊ. ಟಿ. ಸಿ. ಎನ್. ಸಿಂಗ್ ಮೊದಲಾದ ವಿದ್ವಾಂಸರೂ ವಿಜ್ಞಾನಿಗಳೂ ಪ್ರಾಣಿಗಳ ಮತ್ತು

ಸಸ್ಯಗಳ ಮೇಲೆ ಸಂಗೀತದ ಪ್ರಭಾವವನ್ನು ವೈಜ್ಞಾನಿಕ ಪ್ರಯೋಗಗಳ ಮೂಲಕ ಸಿದ್ಧಪಡಿಸುತ್ತಿದ್ದಾರೆ. ವಿದೇಶಗಳಲ್ಲಿಯೂ ಸಂಗೀತವು ಹಸುಗಳ ಹಾಲು ಕೊಡುವ ಶಕ್ತಿಯ ಮೇಲೆ ಒಳ್ಳೆ ಪರಿಣಾಮ ಮಾಡುತ್ತದೆಂಬುದಕ್ಕೆ ವೈಜ್ಞಾನಿಕ ಸಮರ್ಥನೆ ದೊರೆತಿದೆ.

ಬಸವರಾಜರು ತುಂಬ ನಿರಹಂಕಾರ ವೃತ್ತಿಯವರು. ಯಾರೊಡನೆಯೂ ಅವರು ಹೃತ್ಪೂರ್ವಕ ಸಂಭಾಷಣೆಯಲ್ಲಿ ತೊಡಗುವರು. ಸಂಗೀತ ಜಗತ್ತಿನ ಮಾತು ಪ್ರಾರಂಭವಾದರೆ ವೇಳೆಯ ಎಚ್ಚರವಿಲ್ಲದೆ ಮಾತು ಸಾಗುತ್ತದೆ. ತಮ್ಮ ಮಾತನ್ನು ಸೋದಾಹರಣವಾಗಿ ಪ್ರತಿಪಾದಿಸಲು ಅವರು ನಡುನಡುವೆ ಹಾಡಿಯೂ ತೋರಿಸುತ್ತಾರೆ.

ಬೆಂಗಳೂರಿಗೆ ಒಮ್ಮೆ ಸಂಗೀತ ಕಚೇರಿಗೆಂದು ಹೋದ ರಾಜಗುರುಗಳಿಗೆ ಪತ್ರಿಕೋದ್ಯಮಿಗಳು ಸಂಗೀತ ಶೈಲಿಗಳ ಬಗ್ಗೆ ನಾನಾ ತರಹದ ಪ್ರಶ್ನೆಗಳನ್ನು ಕೇಳಿದರು. ರಾಜಗುರುಗಳು ಆ ಪ್ರಶ್ನೆಗಳಿಗೆ ಉತ್ತರವೀಯಲು ಅಂದು ರಾತ್ರಿ ಕಾರ್ಯಕ್ರಮವನ್ನೇ ಯೋಜಿಸಿದರು. ಖ್ಯಾತ ಪತ್ರಿಕೋದ್ಯಮಿಗಳು ನೆರೆದ ಆ ಸಭೆಯಲ್ಲಿ ರಾಜಗುರುಗಳು ಶುದ್ಧ ಕಲ್ಯಾಣವನ್ನೆತ್ತಿಕೊಂಡು ಕಿರಾಣಾ ಶೈಲಿಯನ್ನು ಉದಾಹರಿಸುತ್ತ ನಿದಾನವಾಗಿ, ಗುಚ್ಛಗುಚ್ಛವಾಗಿ, ಅಲೆಯಲೆಯಾಗಿ ತೇಲಿ ಬರುವ ಗಮಕಗಳಿಂದ ಆ ಶೈಲಿಯ ವೈಶಿಷ್ಟ್ಯವನ್ನು ಪ್ರದರ್ಶಿಸಿದರು. ಅನಂತರ ಜಯಪುರ ಪರಂಪರೆಯನ್ನು ಲಲಿತ ಗೌರಿ ರಾಗದ ಆಲಾಪನ ವಿಧಾನ, ತಾನಗಳ ವೈಶಿಷ್ಟ್ಯ, ತಿರುವುಗಳನ್ನು ತೋರಿಸಿ ವಿವರಿಸಿದರು. ಬಳಿಕ ದೇಸ ರಾಗದಲ್ಲಿ ಗ್ವಾಲಿಯರ್ ಶೈಲಿಯನ್ನೂ ಖಮಾಜಿನಲ್ಲಿ ಠುಮ್ರಿ ಶೈಲಿಯನ್ನೂ ಪ್ರತಿಪಾದಿಸಿದರು. ಕರ್ನಾಟಕ ಶೈಲಿಯಲ್ಲಿ ಲಾಗಿ-ಲಾಗಿ ಕೃತಿಯನ್ನು ಹಾಡಿದರು.

ಎಲ್ಲ ಸಂಪ್ರದಾಯ ಶೈಲಿಗಳಲ್ಲಿಯೂ ಪರಿಣತಿ ಸಂಪಾದಿಸಿದ್ದರಿಂದ ರಾಜಗುರುಗಳು ಭಾರತೀಯ ಸಂಗೀತದ ಮೇಲೆ ಅಧಿಕಾರವಾಣಿಯಿಂದ ಮಾತಾಡುತ್ತಾರೆ. ಭಾರತೀಯ ಸಂಗೀತದ ದಕ್ಷಿಣೋತ್ತರ ಉಭಯ ಪದ್ಧತಿಗಳ ಉಗಮ ಸ್ಥಾನ ಕರ್ನಾಟಕವೇ! ಆದ್ದರಿಂದಲೇ ಕರ್ನಾಟಕದ ಕಲಾವಿದರು ಉತ ರದ ನಾಲ್ಕು ಘರಾಣೆಗಳಲ್ಲಿ ಇಂದು ಖ್ಯಾತಿಯನ್ನು ಸಂಪಾದಿಸಿದ್ದಾರೆಂದೂ ಎರಡೂ ಪದ್ಧತಿಗಳ ಸಚೇತನ ಸ್ವರೂಪ ಕರ್ನಾಟಕದಲ್ಲಿದೆಯೆಂದೂ ಬಸವರಾಜರ ಮತ.

ವಾಸ್ತವವಾಗಿ ಈ ಎರಡು ಪದ್ಧತಿಗಳಲ್ಲಿ ಶೈಲಿ ಭೇದವಿದ್ದರೂ ಮೂಲತಃ ಎರಡೂ ಒಂದೇ ಶಾಸ್ತ್ರದಿಂದ ಉಗಮಿಸಿದವು. ಎರಡರಲ್ಲಿ ಸಮಾನ ಧರ್ಮ ಸಾಕಷ್ಟಿದೆ. ಉದಾಹರಣೆಗೆ ಕರ್ನಾಟಕ ಸಂಗೀತದ ರಾಗಮಾಲಿಕೆಯೆ ಹಿಂದುಸ್ತಾನಿಯ ರಾಗಸಾಗರ. ಎಂಟು, ಇಪ್ಪತ್ತೊಂದು, ಅರುವತ್ತ ನಾಲ್ಕು ರಾಗಗಳ ರಾಗಸಾಗರ ಹಾಡುವುದು ಮೊದಲಿನಿಂದ ನಡೆದುಬಂದಿತ್ತು. ಆದರೆ ಬಹುಕಠಿನವಾಗಿರುವುದರಿಂದ ರಾಗ ಸಾಗರಗಳನ್ನು ಈಗ ಹಾಡುವುದು ವಿರಳ ಎಂದು ರಾಜಗುರುಗಳು ಹೇಳುತ್ತಾರೆ. ಸ್ವತಃ ಅವರಿಗೆ ೬೪ ರಾಗಗಳ ಒಂದು, ೨೧ ರಾಗಗಳ ನಾಲ್ಕು, ಎಂಟು ರಾಗಗಳ ಎಂಟೊಂಭತ್ತು ಸಾಗರಗಳು ಬರುತ್ತವೆ.

ಅವರಿಗೆ ಘರಾಣೆವಾದದಲ್ಲಿ ವಿಶ್ವಾಸವಿಲ್ಲ. ಅವುಗಳಲ್ಲಿ ಇದು ಮೇಲು ಇದು ಕೀಳು ಎಂಬ ಆಯಾ ಶೈಲಿಯ ಅನುಯಾಯಿಗಳ ಹೇಳಿಕೆಯಲ್ಲಿ ಯಾವ ಅರ್ಥವೂ ಇಲ್ಲೆಂದು ಅವರು ಸಾರುತ್ತಾರೆ. ರಾಜರನ್ನು ರಂಜಿಸಲು ಹುಟ್ಟಿಕೊಂಡ ಈ ಘರಾಣೆ ವಾದವನ್ನು ಕೊನೆಗೊಳಿಸುವುದೇ ಒಳಿತು. ಒಂದೊಂದು ಘರಾಣೆಯಲ್ಲೂ ಒಂದೊಂದು ಹಿರಿಮೆಯಿದೆ. ಜಾಣರು ಈ ವೈಶಿಷ್ಟ್ಯಗಳಿಂದ ತಮ್ಮ ಗಾಯನವನ್ನು ನಿರ್ಮಿಸಿಕೊಳ್ಳುತ್ತಾರೆ.

ಕರ್ನಾಟಕ ಸಂಗೀತದ ಬಗ್ಗೆ ರಾಜಗುರುಗಳು ಅದರ ವಾದ್ಯ ಭಾಗ, ತಾನ ಪ್ರಸ್ತಾರ, ಸ್ವರಲಯ ಭಾಗಗಳನ್ನು ಮೆಚ್ಚಿದರೂ ಸಂಗೀತದ ಪ್ರಾಣಸ್ಥಾನವಾದ ಶ್ರುತಿಗೆ ಅದರ ಸಾಧಕರು

ಹೆಚ್ಚಿನ ಗಮನ ಕೊಡದಿರುವುದಕ್ಕಾಗಿ ವಿಷಾದ ವ್ಯಕ್ತಪಡಿಸುತ್ತಾರೆ. ಸಂಗೀತದ ದಕ್ಷಿಣೋತ್ತರ ಎರಡು ಸಂಪ್ರದಾಯಗಳೂ ಮೂಲತಃ ಒಂದೇ ಆಗಿದ್ದರೂ ಅವೆರಡೂ ಸ್ವತಂತ್ರವಾಗಿ ಬೆಳೆದು ರೂಪುಗೊಂಡಿರುವುದರಿಂದ ಅವೆರಡನ್ನೂ ಮಿಶ್ರ ಮಾಡಿ ಒಂದೇ ಸಂಪ್ರದಾಯ ರಚಿಸಬೇಕೆಂಬುದಕ್ಕೆ ಅವರ ಸಮ್ಮತಿಯಿಲ್ಲ. ಎರಡೂ ತಮ್ಮ ವೈಶಿಷ್ಟ್ಯಗಳನ್ನುಳಿಸಿಕೊಳ್ಳುವುದೇ ಉಚಿತವೆಂದವರು ಹೇಳುತ್ತಾರೆ. ಆದರೆ ಹಿಂದುಸ್ತಾನಿ ಸಂಗೀತದ ನಾಲ್ಕು ಘರಾಣೆಗಳನ್ನೂ ಸಂಯೋಜಿಸಬೇಕೆಂದು ಅವರು ನಂಬಿದ್ದಾರೆ.

ಪ್ರೊ. ರಾಜಗುರುಗಳೆಂದರೆ ಸಂಗೀತದ ಮಹಾಕೋಶವಿದ್ದಂತೆ. ಅವರ ಚೀಜಿನ ಸಂಗ್ರಹ ಬಲು ದೊಡ್ಡದು; ಐದು ಸಾವಿರಕ್ಕೂ ಮೇಲ್ಪಟ್ಟ ಗೀತಗಳು ಅವರಿಗೆ ಬರುತ್ತವೆ. ಅವರ ಬಾಯಲ್ಲಿ ವಚನಗಳೂ ಹೇರಳವಾಗಿವೆ. ಹಾಡಿದ ರಾಗವನ್ನೇ ಮತ್ತೆ ಹಾಡುವುದು ಇವರಿಗೆ ಒಪ್ಪದು. ಗಾನದಲ್ಲಿ ವೈವಿಧ್ಯವಿಲ್ಲದಿದ್ದರೆ ಅದು ರಂಜಿಸಲಾರದು ಎಂದವರು ಹೇಳುತ್ತಾರೆ. ತಮ್ಮ ಗೀತ ಸಂಗ್ರಹಕ್ಕೆಲ್ಲ ಸ್ವರ ಪ್ರಸ್ತಾರ ಹಾಕಿ ಪ್ರಕಟಿಸಬೇಕೆಂಬ ಅವರ ಆಸೆ ಸಫಲವಾದರೆ ಅದು ಸಂಗೀತ ಪ್ರಪಂಚಕ್ಕೊಂದು ಅಮೂಲ್ಯ ಕೊಡುಗೆಯಾದೀತು.

ಬಸವರಾಜರಿಗೆ ಅನೇಕ ಪ್ರಶಸ್ತಿಗಳು ದೊರಕಿವೆ. ೧೯೩೮ರ ರಲ್ಲಿ ಜಮಖಂಡಿ ಸಾಹಿತ್ಯ ಸಮ್ಮೇಲನದಲ್ಲಿ ಕವಿವರ್ಯ ಬೇಂದ್ರೆಯವರ "ಕರುಳಿನ ಕೂಗ" ನ್ನು ಇವರು ಹಾಡಿ ಜನರನ್ನು ಮೋಹಗೊಳಿಸಿ "ಗಾನಕೋಕಿಲ" ಬಿರುದನ್ನು ಸಂಪಾದಿಸಿದರು. ೧೯೪೧ ರಲ್ಲಿ ಹೈದರಾಬಾದಿನಲ್ಲಿ ಸೇರಿದ್ದ ನಿಜಾಂ ಪ್ರಾಂತ ಸಂಗೀತ ಸಮ್ಮೇಳನದಲ್ಲಿ "ಸಂಗೀತ ಸುಧಾಕರ" ಎಂದವರಿಗೆ ಬಿರುದು ಬಂತು. ೧೯೫೮ ರಲ್ಲಿ ಬೆಂಗಳೂರಿನ ಪುರಪ್ರಮುಖರ ಸಮ್ಮುಖದಲ್ಲಿ ಮುಖ್ಯಮಂತ್ರಿ ಬಿ. ಡಿ, ಜತ್ತಿಯವರ ಹಿರಿತನದಲ್ಲಿ ನಡೆದ ಕಚೇರಿಯಲ್ಲಿ ಇವರನ್ನು "ಸಂಗೀತ ಸುಧಾಕರ" ಎಂದು ಕರೆದರು.

ಕೆಲ ಕಾಲ ಹಿಂದೆ ಧಾರವಾಡಕ್ಕೆ ಬಂದಿದ್ದ ಅಮೇರಿಕನ್ ಪ್ರೊಫೆಸರರೊಬ್ಬರು ರಾಜಗುರುಗಳ ವಚನ, ಗಾಯನಗಳ ಟೇಪ್ ರಿಕಾರ್ಡ್ ಮಾಡಿಕೊಂಡು ಅಮೇರಿಕಕ್ಕೆ ಒಯ್ದವರು ಅಲ್ಲಿ ಅವನ್ನು ಕೇಳಿದವರು ಬಹಳವಾಗಿ ಮೆಚ್ಚಿಕೊಂಡರೆಂದು ಪತ್ರ ಬರೆದಿದ್ದಾರೆ. ರಾಜಗುರುಗಳು ಅಮೇರಿಕಕ್ಕೆ ಹೋಗಿ ತಮ್ಮ ಗಾನವೈದಗ್ಧ್ಯ ಮೆರೆಸುವ ದಿನವೂ ಬೇಗನೆ ಬರಬಹುದು. *

---

## ಇದು ಸೋಜಿಗ . . . .

ಒಂದು ನಾಯಿ ನುಡಿದದ್ದು — ಈ ಮನುಷ್ಯನ ವರ್ತನೆಯೇ ನನಗೆ ಅರ್ಥವಾಗುತ್ತಿಲ್ಲ. ನಾನವನನ್ನು ಹೆದರಿಸಿದರೆ ಜೀವ ಹಿಡಿದು ಓಡುತ್ತಾನೆ. ನಾನು ಅವನಿಗೆ ಹೆದರಿದರೆ ನನ್ನನ್ನೇ ಓಡಿಸಿಕೊಂಡು ಬರುತ್ತಾನೆ.

* * *

ಪ್ರಾಚೀನ ಮನುಷ್ಯ ನುಡಿದದ್ದು — ಈಗಿನ ಮನುಷ್ಯನ ಕ್ರಮವೇ ನನಗೆ ಅರ್ಥವಾಗುವುದಿಲ್ಲ. ಯಾವಾಗ ನೋಡಿದರೂ ತನ್ನನ್ನಾವರಿಸಿಕೊಂಡ ಬಟ್ಟೆಯೆಂಬ ವಸ್ತುವಿನಿಂದ ಹೊರಬರಲು ಹವಣಿಸುತ್ತಿರುತ್ತಾನೆ. ಮೇಲೊಂದು ರಂಧ್ರಮಾಡಿ, ಕುತ್ತಿಗೆಯನ್ನು ಹೊರಕ್ಕೆ ತಂದು ಇಣುಕುತ್ತಿರುತ್ತಾನೆ. ಮತ್ತೊಂದಿಷ್ಟು ತೂತು ಮಾಡಿ ಕೈಕಾಲುಗಳನ್ನು ಹೊರ ತೂರಲು ಪ್ರಯತ್ನಿಸುತ್ತಿದ್ದಾನೆ. ಇಷ್ಟೆಲ್ಲಾ ಕಷ್ಟಕ್ಕಿಂತ ನನ್ನ ಹಾಗೆ ಬಟ್ಟೆ ಹಾಕದೇ ಇದ್ದರೇನಾಗುವುದೋ ನಾ ಕಾಣೆ.

—"ಕೀರ್ತಿ" ಕುಂದಾಪುರ

# ಮಾನವನನ್ನು ಮೀರಿಸುವ ಯಂತ್ರಗಳು?

ವಿಜ್ಞಾನದ ಈ ವಿಜಯ ಕೊನೆಗೆ
ಮಾನವನಿಗೇ ಮುಳುವಾದೀತೇ?

ಜೆಕೊಸ್ಲೊವಾಕಿಯದ ಸಾಹಿತಿ ಕಾರ್ಲ್ ಕೊಪೆಕನ ಒಂದು ಕಾದಂಬರಿಯಲ್ಲಿ ವಿಜ್ಞಾನಿಗಳು ಯಾಂತ್ರಿಕ ಮನುಷ್ಯರನ್ನು-ರಾಬಟ್‌ರನ್ನು-ನಿರ್ಮಿಸುತ್ತಾರೆ. ರಾಬಟರು ತಮ್ಮ ಗುಲಾಮರಾಗಿರುತ್ತಾರೆಂದು ಅವರು ಭಾವಿಸಿದ್ದರು. ಆದರೆ ಈ ಯಾಂತ್ರಿಕ ಮನುಷ್ಯರು ತಮ್ಮನ್ನು ಸೃಷ್ಟಿಸಿದವರಿಗಿಂತಲೂ ಬುದ್ಧಿವಂತರಾಗಿ ಪರಿಣಮಿಸಿದರು. ಅವರಿಗೆ ವಿಧೇಯರಾಗಿರುವ ಬದಲು ಅವರ ಮೇಲೆ ಪ್ರಭುತ್ವ ಸ್ಥಾಪಿಸಿ ಕೊನೆಗೆ ತಾವೇ ಆಳಲಾರಂಭಿಸುತ್ತಾರೆ.

೩೯ ವರ್ಷಗಳ ಹಿಂದೆ ವ್ಯಕ್ತವಾದ ಕಾರ್ಲ್ ಕೊಪೆಕನ ಈ ಕಲ್ಪನಾ ವಿಲಾಸ ಸತ್ಯಸೃಷ್ಟಿಗಿಳಿಯಬಹುದೇ ಎಂಬ ಸಂಶಯ ಹುಟ್ಟಿಸುವ ಅದ್ಭುತ ಯಂತ್ರಗಳೀಗ ವಿಜ್ಞಾನಿಗಳ ಯಂತ್ರಶಾಲೆಯಿಂದ ಹೊರಬರುತ್ತಿವೆ. ಈ ಯಂತ್ರಗಳು ದಿನವೂ "ಬುದ್ಧಿಶಾಲಿ"ಗಳಾಗುತ್ತ ಹೋಗುತ್ತಿವೆ. "ಬುದ್ಧಿಶಾಲಿ" ಎಂದರೇನು? ಅನುಭವದಿಂದ ಕಲಿಯುವುದು ಬುದ್ಧಿಶಾಲಿಯ ಪ್ರಥಮ ಲಕ್ಷಣ. ವಿಜ್ಞಾನಿಗಳು ಈಗಾಗಲೇ ಒಂದೇ ತಪ್ಪನ್ನು ಎರಡು ಸಲ ಮಾಡದಿರುವ ಯಂತ್ರಗಳನ್ನು ನಿರ್ಮಿಸಲು ಸಮರ್ಥರಾಗಿದ್ದಾರೆ. (ಅನೇಕ ಮಾನವರಲ್ಲಿ ಈ ಗುಣ ಸಾಲದೆಂದು ನಮಗೆ ಗೊತ್ತಿದೆ!)

ವಿಜ್ಞಾನ ಪ್ರಗತಿಯಲ್ಲಿ ಆಸ್ಥೆಯುಳ್ಳವರೆಲ್ಲರೂ ಪ್ರಚಂಡ ವೇಗದಿಂದ ಗಣಿತದ ಜಟಿಲ ಸಮಸ್ಯೆಗಳನ್ನು ಬಿಡಿಸಬಲ್ಲ ಯಂತ್ರಗಳ ವಿಚಾರ ಕೇಳಿದ್ದಾರೆ. "ವಿದ್ಯುತ್ ಮಸ್ತಿಷ್ಕ" ಎಂದು ಕರೆಯಲ್ಪಡುವ ಈ ಯಂತ್ರಗಳು ಲೆಕ್ಕಗಳನ್ನು ವಿದ್ಯುದ್ವೇಗದಿಂದ ಮಾಡಬಲ್ಲವಲ್ಲದೆ ಬಂದ ಉತ್ತರಗಳನ್ನು "ಜ್ಞಾಪಕ"ದಲ್ಲಿಟ್ಟುಕೊಂಡು, ಅದೇ ಲೆಕ್ಕ ಇನ್ನಾವಾಗಾದರೂ ಯಾವುದಾದರೂ ಸಮಸ್ಯೆಯ ಅಂಗವಾಗಿ ಬಂದರೆ ಪುನಃ ಬುಡದಿಂದ ಎಣಿಸದೆ ನೇರವಾಗಿ ನೆನಪಿನ ನಿಧಿಯಿಂದ ಉತ್ತರವನ್ನೆತ್ತಿಕೊಂಡು ಮುಂದೆ ಸಾಗುತ್ತವೆ.

ಒಮ್ಮೆ ವಿಧಾನವನ್ನು ಹೇಳಿ ಕೊಟ್ಟರೆ ವಿಮಾನವನ್ನು ಸ್ವತಂತ್ರವಾಗಿ ನಡೆಸಬಲ್ಲ "ಯಾಂತ್ರಿಕ ವೈಮಾನಿಕ"ಗಳು ಇವೆ. ಸಂಗೀತವನ್ನು ನಿರ್ಮಿಸಬಲ್ಲ, ಯಂತ್ರಗಳಾಗಿವೆ. ಒಂದು ಭಾಷೆಯಿಂದ ಇನ್ನೊಂದಕ್ಕೆ (ತುಸು ಅವ್ಯವಸ್ಥಿತವಾಗಿದ್ದರೂ) ಅನುವಾದ ಮಾಡುವ ಯಂತ್ರಗಳಾಗಿವೆ. ಎಲ್ಲಕ್ಕೂ ಹೆಚ್ಚಾಗಿ ಪರಸ್ಪರ ವಿಸಂಗತವಾದ ಅಪ್ಪಣೆಗಳನ್ನಿತ್ತರೆ ಈ ಯಂತ್ರಗಳು ಗಲಿಬಿಲಿಗೊಂಡು ಮನುಷ್ಯನಂತೆಯೆ "ನರ ವೈಕಲ್ಯ"-ಕ್ಕೊಳಗಾಗುತ್ತವೆ ಕೂಡ.

ಅಮೇರಿಕದ ಇಂಟರ್ ನ್ಯಾಶನಲ್ ಬಿಸಿನೆಸ್ ಮೆಶೀನ್ ಕಾರ್ಪೋರೇಶನ್ನಿನ ವಿಜ್ಞಾನಿ ಆರ್ಥರ್

ಸ್ಯಾಮ್ಯುವೇಲರು ಒಂದು ಯಂತ್ರಕಟ್ಟಿ ಅದಕ್ಕೆ ಚದುರಂಗ ಆಡಲು ಕಲಿಸುತ್ತಾರೆ. ಅದು ತನ್ನ ತಪ್ಪುಗಳಿಂದ ಪಾಠ ಕಲಿ ಕಲಿತು ಎಷ್ಟು "ಬುದ್ಧಿಶಾಲಿ" ಯಾಗಿದೆಯೆಂದರೆ ಈಗ ಚದುರಂಗದಾಟದಲ್ಲಿ ತನ್ನ ನಿರ್ಮಾತನನ್ನೇ ಸೋಲಿಸುತ್ತಿದೆ.

"ಎರಡನೆಯ ಔದ್ಯಮಿಕ ಕ್ರಾಂತಿ" ಯನ್ನೇ ಪ್ರಾರಂಭಿಸಿರುವ ಈ ವಿದ್ಯೆಗೆ "ಸೈಬರ್‌ನೆಟಿಕ್ಸ್" ವಿದ್ಯೆಯೆಂದು ಹೆಸರು. ಈ ವಿದ್ಯೆಯ ಪ್ರತಿಪಾದಕರು ಪ್ರಾಣಿಗಳ ಮತ್ತು ಮಾನವರ ವರ್ತನೆಯ ವಿಧಾನಗಳನ್ನು ಗಣಿತಾತ್ಮಕ ವಿಶ್ಲೇಷಣೆಗೊಳಪಡಿಸಿ, ಜೀವಂತ ಅವಯವಗಳು, ನರಗಳ, ಸ್ನಾಯುಗಳ ಮತ್ತು ಮಿದುಳಿನ ವರ್ತನೆಯನ್ನು ಯಂತ್ರಗಳಲ್ಲಿ "ನಕಲು ತೆಗೆ" ಯುವ ಯತ್ನ ಮಾಡುತ್ತಿದ್ದಾರೆ. ಅರ್ಥಾತ್ ಯಂತ್ರಗಳು ಜೀವಿಗಳಂತೆ ವರ್ತಿಸುವ ಹಾಗೆ ಮಾಡುವುದೇ ಅವರ ಉದ್ದೇಶ.




ಸೈಬರ್‌ನೆಟಿಕ್ಸ್ ವಿಶಾರದರು ಉತ್ಪಾದಿಸಿರುವ ಅದ್ಭುತಗಳಲ್ಲಿ ಬ್ರಿಟನ್ನಿನ ಪ್ರೊಫೆಸರ್ ಡಬ್ಲ್ಯು ಗ್ರೇ ವಾಲ್ಟರರು ನಿರ್ಮಿಸಿದ ಎರಡು "ಯಾಂತ್ರಿಕ ಪಶು"ಗಳು ಅತ್ಯದ್ಭುತವಾಗಿವೆ. ಆತ ಈ "ಪಶು"ಗಳಿಗೆ "ಎಲ್ಮರ್" ಮತ್ತು "ಎಲ್ಸಿ" ಎಂದು ಹೆಸರಿಟ್ಟಿದ್ದಾರೆ. ಸಂತಾನೋತ್ಪತ್ತಿಯೊಂದನ್ನು ಹೊರತು ಪ್ರಾಣಿಗಳು ಮಾಡುವ ಎಲ್ಲ ಕೆಲಸಗಳನ್ನೂ ಇವು ಮಾಡುತ್ತವೆನ್ನಬಹುದು. ಅವಕ್ಕೆ "ಹಸಿವೆ"ಯಾಗುತ್ತದೆ, "ಹಸಿವು" ತೀರಿಸಿಕೊಳ್ಳಲು ಅವು "ಆಹಾರ" ಹುಡುಕುತ್ತವೆ, "ಉಂಡ" ನಂತರ ಅವು ವಿಶ್ರಮಿಸುತ್ತವೆ.

ಜಗತ್ತಿನ ಪ್ರಥಮ ವರ್ಗದ ನರತಜ್ಞರೂ ಸಂಗಡಲೇ ಕುಶಲಯಂತ್ರ ವಿದ್ಯಾವಿಶಾರದರೂ ಆದ ಡಾ. ವಾಲ್ಟರರು ಪ್ರಾಣಿಗಳ "ಸ್ವಯಂ-ಪ್ರೇರಿತ" ಪ್ರತಿಕ್ರಿಯೆಗಳು ನಿಜವಾಗಿ ನಾವೆಣಿಸುವಷ್ಟು ಜಟಿಲವಾಗಿಲ್ಲವೆಂದು ತೋರಿಸಲು ಈ ಯಂತ್ರಗಳನ್ನು ಕಟ್ಟಿದರು. ದೊಡ್ಡ ಕುಂಬಳಕಾಯಿಯ ಆಕಾರದ "ಎಲ್ಮರ್" ಯಂತ್ರಪಶುವಿನಲ್ಲಿ ಫೋಟೋ-ವಿದ್ಯುತ್ ಕೋಶವೊಂದು ಕೀಟಗಳಲ್ಲಿ ಮೀಸೆಗಳಂತೆ ಬಾಹ್ಯಪ್ರಪಂಚದೊಡನೆ ಸಂಬಂಧ ಏರ್ಪಡಿಸುತ್ತದೆ. ಅದರ ಗರ್ಭದಲ್ಲಿರುವ ಬ್ಯಾಟರಿಯು ಅದಕ್ಕೆ ಸ್ನಾಯುಗಳಂತೆ ಚಲನಶಕ್ತಿಯನ್ನೊದಗಿಸುವುದಲ್ಲದೆ ಜಠರದಂತೆಯೂ ವರ್ತಿಸುತ್ತದೆ. ಅದರ ಅನ್ನವೆಂದರೆ ಪ್ರಕಾಶ. ಪ್ರಕಾಶ ಎಲ್ಲಿದೆಯೆಂದು ಅದರ ಫೋಟೋ ವಿದ್ಯುತ್‌ಕೋಶ ಅದಕ್ಕೆ ತಿಳಿಸುತ್ತದೆ.

ಎಲ್ಮರನ ಚರ್ಯೆ ನೋಡಿದವ ಮೂಗಿಗೆ ಬೆರಳು ಹಚ್ಚಬೇಕಾಗುತ್ತದೆ. ಬ್ಯಾಟರಿಯ ಶಕ್ತಿ ಕಡಿಮೆಯಾದೊಡನೆ ಅದು "ಹಸಿವೆ" ಯಿಂದ ಚಡಪಡಿಸಿ "ಅನ್ನ"ವಾದ ಪ್ರಕಾಶದ ಕಡೆ ಧಾವಿಸುತ್ತದೆ. ಹಸಿವೆ ಹೆಚ್ಚಾದಷ್ಟೂ ಅದು ಹೆಚ್ಚು ಪ್ರಕಾಶಮಾನವಾದ ಬೆಳಕಿನ ಕಡೆ ಸಾಗುತ್ತದೆ. ಅಲ್ಲಿ ಅದಕ್ಕೆ ಕಡಿಮೆಬಿದ್ದ ಶಕ್ತಿಯು ಪುನಃ ಸ್ವಯಂಚಾಲಿತವಾಗಿ "ಚಾರ್ಜ್" ಆಗುತ್ತದೆ. ವಿಶೇಷವೆಂದರೆ ತನಗೆ ಬೇಕಾದಷ್ಟು "ಅನ್ನ" ಸಿಗಲು ಯಾವ ಮಾನದ ಪ್ರಕಾಶ ಬೇಕೋ ಅಷ್ಟೇ ಮಾನದ ಪ್ರಕಾಶದ ವರೆಗಷ್ಟೇ ಅದು ಹೋಗುತ್ತದೆ. ಅದೆಂದೂ ಕೂಳುಬಾಕನಂತೆ "ತಿನ್ನು"ವುದಿಲ್ಲ. ಇದು ಪ್ರಾಣಿಗಳಲ್ಲಿ ಮಾತ್ರ ಕಾಣ ಬರು

ತ್ತದೆಂದೆಣಿಸಲಾದ ಅಂದಾಜಿನ ಶಕ್ತಿಯ ಒಂದು ರೂಪವಲ್ಲವೆ?

"ಎಲ್ಸಿ"ಯ ರುಚಿಗಳು ಇದಕ್ಕಿಂತಲೂ ಸೂಕ್ಷ್ಮ. ಕತ್ತಲಿದ್ದಾಗ ಅದು ಏನನ್ನೋ ಹುಡುಕುವವರಂತೆ ತಲೆಯನ್ನು ತಿರುಗಿಸುತ್ತ ಚಡಪಡಿಸುತ್ತದೆ. ಆದರೆ ದೀಪ ಹಚ್ಚಿದೊಡನೆ ಚಟ್ಟನೆ ಅತ್ತ ಓಡದು. ಹೋಗಲೋ ಬೇಡವೋ ಎಂದು ಯೋಚಿಸುವವರಂತೆ ತಡೆದು, ಆಮೇಲೆ ಪ್ರಕಾಶದತ್ತ ಸಾಗುತ್ತದೆ. ಆದರೂ ಸಂದಿಗ್ಧ ಇನ್ನೂ ಸುವ್ಯಕ್ತವೇ ಆಗಿರುತ್ತದೆ.ಬಳಿಕ ತನಗೆ ಬೇಕಾದ್ದು ಇದೇ ಎಂಬಂತೆ ವೇಗದಿಂದ ಸಾಗಿ, ಪ್ರಕಾಶದ ಮೂಲದ ಬಳಿ ಪರಿಶೀಲಿಸುವವರಂತೆ ಸುಳಿದಾಡುತ್ತದೆ. ಪ್ರಕಾಶದ ಗುಣ ಅದರ ರುಚಿಗೆ ಒಪ್ಪುವಂತಿದ್ದರೆ ಮಾತ್ರವೇ ಅದು ಕೊನೆಗೆ ಅದರ ಸಾಮೀಪ್ಯವನ್ನು ಸೇರುವುದು. ಏನಾದರೂ ಕೊರತೆ ಕಂಡರೆ ಅದು ಮುಖ ತಿರುವಿ ಹೊರಟು ಹೋಗುತ್ತದೆ.

ಡಾ. ವಾಲ್ಟರ್ ಈಚೆಗೆ ಕಟ್ಟಿದ "ಕೋರಾ" ಎಂಬ ಇನ್ನೊಂದು ಯಂತ್ರ ಇನ್ನಷ್ಟು ಸೋಜಿಗದ್ದು. ಅದು ಪೌಲೋವನ ನಾಯಿಯ ಪ್ರತೀಕವಾಗಿದೆ (ನಾಯಿಗೆ ಪೌಲೋವನು ಆಹಾರ ಕೊಡುವಾಗ ನಿತ್ಯ ಗಂಟೆ ಬಾರಿಸುತ್ತಿದ್ದ. ಕೆಲ ಕಾಲಾನಂತರ ಆಹಾರ ಕೊಡದೆ ಬರಿ ಗಂಟೆ ಬಾರಿಸಿದರೂ ಅದರ ಬಾಯಿ ನೀರೂರುತ್ತಿತ್ತು) ಇದಕ್ಕೆ ಅಭ್ಯಸ್ತ ಕ್ರಿಯೆ conditioned reflex ಎಂದಾತ ಹೆಸರಿಟ್ಟ.)

ಡಾ. ವಾಲ್ಟರ್ ಕೋರಾಕ್ಕೂ ಅಭ್ಯಸ್ತ ಕ್ರಿಯೆಯ ತರಬೇತಿ ಕೊಡಲು ಸಮರ್ಥರಾಗಿದ್ದಾರೆ. "ಹಸಿ"ದಾಗ ಕೋರಾದ ಮುಂದೆ ಬೆಳಕು ಹಾಯಿಸಿ ಸಂಗಡಲೇ ಒಂದು ವಿಸಲ್ ಊದುತ್ತ ಹೋದರು. ಕಡೆಗೆ ಕೋರಾ ಬೆಳಕಿಲ್ಲದೆ ಕೇವಲ ವಿಸಲ್ ಊದಿದರೂ ಅತ್ತ ಓಡಲು ಪ್ರಾರಂಭಿಸಿತು.

ಜಡಪದಾರ್ಥಗಳಿಗಿಲ್ಲದ ಜೀವ ವೈಶಿಷ್ಟ್ಯಗಳಲ್ಲಿ ಒಂದೆಂದರೆ ಸ್ವಯಂನಿಯಮನ. ಮಾನವನ ಶರೀರ ಉಷ್ಣತೆ ಚಳಿಯಿರಲಿ ಬಿಸಿಲಿರಲಿ ಯಾವಾಗಲೂ ಸಾಧಾರಣ ೯೮ ಅಂಶ ಫೆರನ್ ಹೀಟಿನಲ್ಲಿರುವುದು ಸ್ವಯಂನಿಯಮನದ ಒಂದು ಉದಾಹರಣೆ. ಹಾಗೆಯೆ ಮಾನವನ ಮಿದುಳು ತನ್ನನ್ನು ತಾನೇ ನಿಯಂತ್ರಿಸಿಕೊಳ್ಳುತ್ತದೆ ಮತ್ತು ಇತರ ಅವಯಗಳಿಗೂ ನಿರ್ದೇಶನವೀಯುತ್ತದೆ. ಯಾವುದಾದರೊಂದು ಕೆಲಸ ಸಾಧಿಸುವ ಅನೇಕ ರೀತಿಗಳನ್ನು ತೂಗಿ ನೋಡಿ ಅದು ಅತ್ಯಂತ ಯೋಗ್ಯವೆನಿಸಿದ ಮಾರ್ಗವನ್ನು ಅನುಸರಿಸುತ್ತದೆ.

ಪ್ರಸಿದ್ಧ ಬ್ರಿಟಿಶ್ ವಿಜ್ಞಾನಿ ವಿಲಿಯಂ ಆಶ್ಬಿಯವರು ನಿರ್ಮಿಸಿದ "ಹೊಮೊಸ್ಟಾಟ್" ಎಂಬ ವೈದ್ಯುತ ಯಂತ್ರ ಈ ಬಗೆಯ ಆತ್ಮನಿಯಂತ್ರಣ ಮತ್ತು ನಿರ್ಣಯ ಶಕ್ತಿಯನ್ನು ಪ್ರದರ್ಶಿಸುತ್ತದೆ. ಅವರು ಈ ಯಂತ್ರಕ್ಕೆ ಒಂದು ನಿಶ್ಚಿತ ಗುರಿಯನ್ನು ಕೊಟ್ಟು ಅದನ್ನು ಸಾಧಿಸಲು ಒಂದಲ್ಲ ಹಲವಾರು ಮಾರ್ಗಗಳಿರುವಂತೆ ವ್ಯವಸ್ಥೆ ಮಾಡಿ ಬೇಕಾದ್ದನ್ನಾರಿಸಿಕೊಳ್ಳಲು ಸ್ವಾತಂತ್ರ್ಯವಿತ್ತಿದ್ದಾರೆ. ಈ ಯಂತ್ರ ತಪ್ಪುಗಳಿಂದ ಪಾಠ ಕಲಿಯುತ್ತ ಗುರಿ ಸಾಧಿಸುವ ಅತಿ ಸುಗಮ ಉಪಾಯವನ್ನೇ ಕಡೆಗೆ ಕಂಡುಹಿಡಿಯುತ್ತದೆ. ಇಷ್ಟೇ ಅಲ್ಲ, ಗುರಿ ಸಾಧಿಸಲು ಅದೆಷ್ಟು ಕಾತರವಾಗಿರುತ್ತದೆಂದರೆ ಅಗತ್ಯ ಬಿದ್ದಂತೆ ತನ್ನ ಆಂತರಿಕ ರಚನೆಯನ್ನೇ ಬದಲು ಮಾಡಿಕೊಳ್ಳುತ್ತದೆ. ಈ ಯಂತ್ರಕ್ಕೆ ವಿದ್ಯುತ್ ಗಣಿತ ಯಂತ್ರವನ್ನು ಜೋಡಿಸಿದರೆ ಅದು ಮಾನವನ ನೆರವಿಲ್ಲದೆ "ವಿಚಾರ" ಮಾಡಿ ಕೆಲಸ ಮಾಡಬಲ್ಲದೆಂದು ಬಲ್ಲವರ ಅಭಿಮತ. ಆಗಲೆ ಅಗಾಧ "ಜ್ಞಾಪಕ ಶಕ್ತಿ" ಯಿರುವ ಗಣಕ ಯಂತ್ರಗಳು ಇವೆ; ಈಗ ಮನುಷ್ಯನಿಗಷ್ಟೇ ಸಾಧ್ಯವೆನಿಸುವ "ವಿಚಾರ ಶಕ್ತಿ"ಯುಳ್ಳ ಯಂತ್ರದ ಸೃಷ್ಟಿಯಾಗಿರುವುದರಿಂದ ಈ ಯಂತ್ರಗಳು ಸಾಮರ್ಥ್ಯದಲ್ಲಿ ಮಾನವನಿಗೆ ಹತ್ತಿರ ಬಂದಂತಾಗಲಿಲ್ಲವೆ?

ಅತ್ಯಾಧುನಿಕ ವಿಮಾನ ನಿರೋಧಕ ತೋಫುಗಳು ಮಾನವ ಬೇಟೆಗಾರನೊಬ್ಬ ಗುರಿ ಹೊಡೆಯಲು ಉಪಯೋಗಿಸುವ ಎಲ್ಲ ಮಾನಸಿಕ

ಶಾರೀರಿಕ ವಿಧಾನಗಳನ್ನು ತಾವೇ ಪೂರೈಸುತ್ತಿವೆ. ಹಾರುವ ವಿಮಾನವನ್ನದು ರೇಡಾರ್ ಮೂಲಕ "ಕಾಣು"ತ್ತದೆ; ಅದರ ವೇಗವನ್ನೂ ದಿಕ್ಕನ್ನೂ "ಲೆಕ್ಕ" ಮಾಡುತ್ತದೆ; ಇನ್ನು ಇಂತಿಷ್ಟು ಹೊತ್ತಿನಲ್ಲಿ ಅದು ಎಲ್ಲಿರಬಹುದೆಂದು ಅಂದಾಜು ಮಾಡುವುದಲ್ಲದೆ ತಾನು ಹೊಡೆಯುವ ಗುಂಡು ಕ್ರಮಿಸುವ ಮಾರ್ಗವನ್ನೂ ಗತಿಯನ್ನೂ ಗಣಿಸುತ್ತದೆ; ಈ ಎರಡು ಮಾರ್ಗಗಳು ಒಂದಾಗುವ ಕ್ಷಣದಲ್ಲಿ ಗುಂಡು ಅಲ್ಲಿ ತಲುಪುವಂತೆ ತೋಫು ಹಾರಿಸುತ್ತದೆ; ಗುರಿ ತಪ್ಪಿದರೆ ಎಷ್ಟು ತಪ್ಪಿತು ಏಕೆ ತಪ್ಪಿತು ಎಂದು ತಾನೇ "ಯೋಚಿಸಿ" ಕೊಂಡು ಅಂದಾಜನ್ನು ತಿದ್ದಿ ಮತ್ತೊಮ್ಮೆ ಹೊಡೆಯುತ್ತದೆ. ಇಷ್ಟೆಲ್ಲ ಕಾರ್ಯ ಕೆಲವೇ ಸೇಕೆಂಡುಗಳಲ್ಲಿ ನೆರವೇರುತ್ತದೆ.

ವೈದ್ಯುತ ಗಣಕ ಯಂತ್ರಗಳಲ್ಲಿದ್ದ ಒಂದು ಕೊರತೆಯೆಂದರೆ, ಅವುಗಳಿಗೆ ಅವು ಮಾಡಬೇಕಾದ ಕೆಲಸವನ್ನು ಅವುಗಳ "ಭಾಷೆ"ಯಲ್ಲೇ (ಟೇಪಿನ ಮೇಲೆ ತೂತುಗಳ ಮೂಲಕ) ಕೊಡಬೇಕಾಗುತ್ತಿತ್ತು. ಈ ಭಾಷಾಂತರ ಕಾರ್ಯ ಮಾಡಲು ತಜ್ಞರಾದ ಯಂತ್ರದಾಳುಗಳಿಗೆ ಅನೇಕ ದಿನ—ಕೆಲ ವೇಳೆ ತಿಂಗಳುಗಳೇ—ಬೇಕಾಗುತ್ತಿದ್ದವು. ಈಚೆಗೆ ಅಮೇರಿಕದ ಬರೋಸ್ ಕಾರ್ಪೊರೇಶನ್ನಿನವರು ಕಟ್ಟಿದ B–೫೦೦೦ ಯಂತ್ರವು ಇಂಗ್ಲೀಷ್ ಭಾಷೆ ಮತ್ತು ಬೀಜಗಣಿತ ರೂಪದಲ್ಲಿ ಆದೇಶಗಳನ್ನು ತೆಗೆದುಕೊಂಡು ಕಾರ್ಯ ಮಾಡಬಲ್ಲದು. ಅಂದರೆ ಮಾನವತೆಗೆ ಇನ್ನೂ ಒಂದು ಹೆಜ್ಜೆ ಹತ್ತಿರ!

ಕೇವಲ ಇಪ್ಪತ್ತು ವರ್ಷಗಳ ಹಿಂದೆ ತಲೆಯೆತ್ತಿದ ಈ "ಸೈಬರ್ನೆಟಿಕ್ಸ್" ಶಾಸ್ತ್ರದ ಅಧ್ವರ್ಯು ಅಮೇರಿಕದ ಪ್ರೊ. ನಾರ್ಬರ್ಟ್ ವೀನರರಾದರೂ ಇಂಗ್ಲಂಡ್, ಫ್ರಾನ್ಸ್‌ಗಳಲ್ಲಿ ಕೂಡ ಅದು ಅಸಾಧಾರಣವಾದ ಪ್ರಗತಿಯನ್ನು ಹೊಂದಿದೆ. ಈಗ


41 ವರ್ಷಗಳ ಭದ್ರ ಹಾಗೂ ಸಮರ್ಥ ಬ್ಯಾಂಕಿಂಗ್ ಸೇವೆ

ದಿ ಪಾಂಗಾಳ ನಾಯಕ್ ಬ್ಯಾಂಕ್ ಲಿ.,

ರಿಜಿಸ್ಟರ್ಡ ಆಫೀಸು : [ ಸ್ಥಾಪನೆ : 1920 ] ಉಡುಪಿ, ದ. ಕನ್ನಡ

ನಮ್ಮ ೩ ವರ್ಷ ವ್ಯಾದೆಯ ಕ್ಯಾಷ್ ಸರ್ಟಿಫಿಕೇಟುಗಳಲ್ಲಿ ಠೇವಣಿ ಮಾಡಿರಿ;

ಬಡ್ಡಿ ಶೇಕಡಾ 5 ರಂತೆ

ರೂ. 87-00, 3 ವರ್ಷಗಳ ಅಂತ್ಯದಲ್ಲಿ ಬಡ್ಡಿ ಕೂಡಿ ರೂ. 100-00 ಒದಗಿಸುವುದು.

ಕರೆ, ಚಿಕ್ಕವ್ಯಾದೆ, ನಿರಖು ಠೇವಣಾತಿಗಳ ಮೇಲೆ ಆಕರ್ಷಣೀಯ ಶರ್ತುಗಳು.

ಬಡ್ಡಿ ಸೇಕಡಾ $5\frac{1}{4}$ ರ ವರೆಗೆ

ತಾ. 1-4-1961 ರಿಂದ ಸೇವಿಂಗ್ಸ್ ಬ್ಯಾಂಕ್ ಖಾತೆಗಳ ಮೇಲೆ ಬಡ್ಡಿ ಸೇಕಡಾ 3 ರಂತೆ.

THE PANGAL NAYAK BANK LTD.

ಪರಮಾಣು ಶಕ್ತಿಯ ನೆರವೂ ಸಿಕ್ಕಿದ್ದರಿಂದ ಅದರ ಭವಿಷ್ಯ ಊಹಿಸಲಾರದಷ್ಟು ಸಂಭವ ಪೂರ್ಣವಾಗಿದೆ.

ಈ ಶಾಸ್ತ್ರವು ಜನೋಪಕಾರ ಜನಹತ್ಯೆ ಇವೆರಡು ರಂಗಗಳಲ್ಲಿಯೂ ಆಶ್ಚರ್ಯಗಳನ್ನು ಸಾಧಿಸಬಲ್ಲದು. ಇಂಗ್ಲಂಡಿನ ಪ್ರೊ. ವಾಲ್ಟರರು ಮಾನವ ಹಿತಕ್ಕಾಗಿ ಅದನ್ನುಪಯೋಗಿಸುವ ಮಾರ್ಗಗಳನ್ನು ಸೂಚಿಸುತ್ತಿದ್ದಾರೆ. ಚಿಕಿತ್ಸಾ ಶಾಸ್ತ್ರದಲ್ಲಿ ಅದು ಬಹಳ ನೆರವಾಗಬಲ್ಲದು. ರೋಗದ ಸ್ಥಿತಿ ಮತ್ತು ರೋಗಿಯ ಅವಸ್ಥೆಯನ್ನು ಕುರಿತ ಹತ್ತಾರು, ಕೆಲವೊಮ್ಮೆ ಇನ್ನೂ ಹೆಚ್ಚು ಅಂಶಗಳನ್ನು ಗಮನಿಸಿ ಇಂದು ವೈದ್ಯರು ಚಿಕಿತ್ಸೆಯ ಅತ್ಯುಪಯುಕ್ತವಿಧಾನವನ್ನು ಅಂದಾಜು ಮಾಡಬೇಕಾಗುತ್ತದೆ. ಆದರೆ ಅಂದಾಜು ಕಟ್ಟಬಲ್ಲ ಯಂತ್ರವೊಂದಿದ್ದರೆ ಎಲ್ಲ ವಿಷಯಗಳನ್ನು ಅದಕ್ಕೆ ತಿಳಿಸಿ ಅದರ ನಿರ್ಣಯವನ್ನು ಪಡೆದು ಸುಲಭವಾಗಿ, ಖಚಿತವಾಗಿ ಹೆಜ್ಜೆಯಿಡಬಹುದು. ಅಂತೆಯೆ ಅಂಗಹೀನರಿಗೆ ಈ ಯಂತ್ರಗಳು ದೇವ ನಿರ್ಮಿತ ಅಂಗಗಳ ಸ್ಥಾನದಲ್ಲಿ ಕೆಲಸ ಕೊಡಬಲ್ಲವು. ಅತ್ತ ಯುದ್ಧ ವಿದ್ಯಾವಿಶಾರದರು ಕ್ಷಿಪಣಿ, ವಿಮಾನ ನಿರೋಧ ಮೊದಲಾದ ಕಾರ್ಯಗಳಿಗೆ ಅದನ್ನು ವಿನಿಯೋಗಿಸುತ್ತಿದ್ದಾರೆ.

ಮಾನವನ ಕೆಲಸಗಳನ್ನೆಲ್ಲ ಮಾಡಬಲ್ಲ ಯಂತ್ರಗಳಾದರೆ ಅನೇಕ ಸಮಸ್ಯೆಗಳು ಕೂಡ ಹುಟ್ಟದಿರವು. ಅವುಗಳಲ್ಲಿ ಕೆಲವಂತೂ ನೆನೆದರೇ ಹೆದರಿಕೆ ಹುಟ್ಟಿಸುವಂಥವು. ಇಡೀ ಕಾರಖಾನೆಗಳನ್ನು ಕೆಲಸಗಾರರು, ಯಂತ್ರಕುಶಲರು, ಕಾರಕೂನರು, ಮೆನೇಜರರು ಕೂಡ ಇಲ್ಲದೆ ನಡೆಸುವ ಸಂಭವ ಇಲ್ಲದಿಲ್ಲ. ಇವುಗಳಿಂದ ಹುಟ್ಟಬಹುದಾದ ಸಾಮಾಜಿಕ ಸಮಸ್ಯೆಗಳನ್ನು ತರ್ಕಿಸುವುದೂ ಕಷ್ಟ.

ಇತರ ವಿಜ್ಞಾನಿಗಳು ಇದಕ್ಕೂ ಕಕ್ರಾಂತವಾದ ಊಹೆಗಳನ್ನು ಮಾಡುತ್ತಾರೆ. ಯಂತ್ರಗಳು ಮನುಷ್ಯರಂತಾದರೆ—ಯೋಚಿಸಿ ನಿರ್ಣಯಿಸುವ ಶಕ್ತಿ ಅವಕ್ಕೆ ಬಂದರೆ—ಮಾನವರಂತೆ ಅವುಗಳಿಗೆ "ಭಾವನೆ"ಗಳೂ ಉಂಟಾಗುವುದಿಲ್ಲೆಂದು ಹೇಗೆ ಹೇಳೋಣ?

ಮಿಚಿಗಾನ್ ವಿಶ್ವವಿದ್ಯಾಲಯದ ವಿಜ್ಞಾನಿಯೊಬ್ಬರು, ಯಂತ್ರಗಳು ತಮ್ಮಿಂದ ತಾವೇ ತಮ್ಮಂಥವೇ ಯಂತ್ರಗಳನ್ನು ನಿರ್ಮಿಸಿಕೊಳ್ಳುವ—ಅಂದರೆ ಸಂತಾನೋತ್ಪತ್ತಿ ಮಾಡಿಕೊಳ್ಳುವ— ದಿನವೂ ಬರಬಹುದೆನ್ನುತ್ತಾರೆ. ಹಾಗಾದರೆ ಅವು ಸದಾ ಮಾನವನ ಇಚ್ಛೆಯಂತೆ ನಡೆದಾವೆ? ತಮ್ಮ ಕೃತಿಗಳ ಪರಿಣಾಮವನ್ನು ಅನೇಕವೇಳೆ ಮಾನವರೂ ಊಹಿಸಲಾರರು. ರೋಮನ್ನರು ಗ್ರೀಕರನ್ನು ಗೆದ್ದು ಗ್ರೀಕ್ ವಿದ್ಯಾವಂತರನ್ನು ಹಿಡಿದು ಗುಲಾಮರಾಗಿ ಕರೆತಂದರು. ಆದರೆ ಈ ಗುಲಾಮರು ಬುದ್ಧಿಶಕ್ತಿಯಲ್ಲಿ ತಮ್ಮ ಯಜಮಾನರಿಗಿಂತ ಚುರುಕಾಗಿದ್ದುದರಿಂದ ಬಲು ಬೇಗನೆ ಯಜಮಾನರ ಮನಸ್ಸಿನ ಮೇಲೆ ತಮ್ಮ ಪ್ರಭುತ್ವ ಸ್ಥಾಪಿಸಿ ಬಿಟ್ಟರು. ಯಂತ್ರಗಳು ಮಾನವರಿಗೆ ಹೀಗೆಯೆ ಮಾಡವೆ? —ಇದು ಅವರ ಪ್ರಶ್ನೆ. *



ಬೇಕು ಎನ್ನುವವರಿಗೆ ಯಾವುದೂ ಲಭಿಸದು. ಸಾಕು ಎನ್ನುವವರ ಪಾದಡಡಿ ಲೋಕದ ಸಂಪತ್ತು ಬಂದು ಬೀಳುತ್ತದೆ. ಧರ್ಮ ಎಂದು ನಾವೆಲ್ಲ ಹೇಳುವುದು ಈ ಬೇಕು ಸಾಕುಗಳ ಅಂತರವನ್ನು ನಿರ್ದೇಶಿಸುವ ಸಾಧನ. —ಅಜ್ಞಾತ

*   *   *

ಆದರ್ಶ ವಾಸ್ತವಗಳೆರಡೂ ಭಾವನೆ ಕ್ರಿಯೆಗಳು. ಇಂಥದು ಮಾಡಬೇಕು ಎಂದುಕೊಂಡರೆ ಅದು ಆದರ್ಶ, ಅದನ್ನು ಮಾಡಿಬಿಟ್ಟರೆ ವಾಸ್ತವ. —ಮಹಾಭಾರತ

ಅವರ ಸ್ವಾತಂತ್ರ್ಯಸಮರ
೭ ಶತಮಾನ ಕಾಲ ನಡೆಯಿತು

# ನಾಚಾಳಿಗಳ ನಾಡು ಅಯರ್ಲಂಡ್



ಮುರಲೀಧರ

ಅಯರ್ಲಂಡಿನಲ್ಲಿ ಯುರೋಪಿನಲ್ಲೆಲ್ಲ ಸುಂದರವಾದ ಕೆಲ ನೈಸರ್ಗಿಕ ದೃಶ್ಯಗಳನ್ನು ಕಾಣಬಹುದು; ಹಾಗೆಯೆ ಅದು ಯುರೋಪಿನ ಅತಿ ಬಡ ದೇಶಗಳಲ್ಲೊಂದಾಗಿದೆ. ಐರಿಶರು ತಮ್ಮ ಇತಿಹಾಸದ ಬಗ್ಗೆ ಅಭಿಮಾನವನ್ನು ತಾಳಿದ್ದಾರೆ. ರೋಮನ್ ಸಾಮ್ರಾಜ್ಯ ಉರುಳಿ ಬೀಳುತ್ತಿದ್ದಾಗ, ಬ್ರಿಟಿಶ್ ದ್ವೀಪ ಇನ್ನೂ ಅನಾಗರಿಕವಾಗಿದ್ದಾಗ, ಅಯರ್ಲಂಡಿನ ಅರಸರು ಪಟ್ಟವೇರುತ್ತಿದ್ದ "ತಾರಾಪರ್ವತ"ವನ್ನವರು ತೋರಿಸುತ್ತಾರೆ; ಆದರೆ ಅಯರ್ಲಂಡು ತೀರ ಇತ್ತೀಚೆಗೆ ತಲೆಯೆತ್ತಿದ ರಾಷ್ಟ್ರಗಳಲ್ಲೊಂದಾಗಿದೆ. ೭೦೦ ವರ್ಷ ಕಾಲ ಬ್ರಿಟಿಶ್ ಪ್ರಭುತ್ವಕ್ಕೊಳಪಟ್ಟು ಅದರ ವಿರುದ್ಧ ಹೋರಾಟದಲ್ಲಿ ನೆತ್ತರು ಕಣ್ಣೀರುಗಳ ಊಟೆಯನ್ನೇ ಹರಿಸಿ ೧೯೨೨ ರಲ್ಲಿ ಅಯರ್ಲಂಡು ಸ್ವಾತಂತ್ರ್ಯ ಸಂಪಾದಿಸಿತಷ್ಟೆ.

ಸ್ವಾತಂತ್ರ್ಯ ಕೊಡುವ ಮೊದಲು ಧರ್ಮಾನುಗುಣವಾಗಿ ಬ್ರಿಟಿಶರು ವಿಭಜನೆ ಮಾಡಿದ ದೇಶ ಭಾರತವೊಂದೇ ಅಲ್ಲ, ಮೊದಲನೆಯದೂ ಅಲ್ಲ. ಅಯರ್ಲಂಡನ್ನು ಕೆಥೋಲಿಕ್, ಪ್ರೊಟೆಸ್ಟೆಂಟ್ ಪ್ರಧಾನವೆಂದು ವಿಂಗಡಿಸಿ ಉತ್ತರ ಪ್ರೊಟೆಸ್ಟೆಂಟ್ ಭಾಗವನ್ನು ತಾವೇ ಇಟ್ಟುಕೊಂಡು ದಕ್ಷಿಣದ ಕೆಥೋಲಿಕ್ ಪ್ರಧಾನ ಭಾಗಕ್ಕಷ್ಟೇ ಸ್ವಾತಂತ್ರ್ಯವಿತ್ತರು. ಉದ್ದಿಮೆ ಕೈಗಾರಿಕೆಗಳಲ್ಲಿ ಸಮೃದ್ಧವಾಗಿದ್ದ ಉತ್ತರ ಭಾಗವನ್ನು ಕಳೆದುಕೊಂಡ ಅಯರ್ಲಂಡಿನ ಸ್ವಭಾವಸಿದ್ಧ ಬಡತನಕ್ಕೆ ಪುಟವಿಟ್ಟಂತಾಯಿತು.

ಅಯರ್ಲಂಡು ಚಿಕ್ಕ ದೇಶ ಮತ್ತು ಅದರ ನೈಸರ್ಗಿಕ ಸಂಪತ್ತು ಅತಿ ಕಡಿಮೆಯೆಂಬ ಮಾತನ್ನು ಐರಿಶರು ಒತ್ತಿ ಹೇಳುತ್ತಾರೆ. ಅದರ ಸದ್ಯದ ಜನಸಂಖ್ಯೆ ೩೦ ಲಕ್ಷಕ್ಕೂ ಕಡಿಮೆ. ಆದರೆ ಅದು ಇಂಗ್ಲೀಷ್ ಭಾಷೆಯ ಈಚೆಗಿನ ಅತಿ ಪ್ರಸಿದ್ಧ ಸಾಹಿತಿಗಳಲ್ಲಿ ಕೆಲವರನ್ನು ಹಡೆದಿದೆ. ಬರ್ನಾರ್ಡ್ ಶಾ, ಆಸ್ಕರ್ ವೈಲ್ಡ್, ಡಬ್ಲ್ಯು. ಬಿ. ಯೇಟ್ಸ್—ವಿಶ್ವಸಾಹಿತ್ಯದ ಮೇಲೆ ತಮ್ಮ ಮುದ್ರೆಯೊತ್ತಿ ಹೋದ ಐರಿಶರಲ್ಲಿ ಇವರು ಕೆಲವರು.

ಗತ ಶತಮಾನಗಳು ವರ್ತಮಾನ ಶತಮಾನದೊಡನೆ ಸಮಾಂತರ ರೇಖೆಗಳಲ್ಲಿ ಹರಿಯುವ ಯುರೋಪಿಯನ್ ದೇಶವನ್ನು ಕಾಣಬೇಕಾದರೆ ಅಯರ್ಲಂಡಿಗೆ ಹೋಗಬೇಕು. ಕುದುರೆ ಸವಾರಿ ಮಾಡುತ್ತ ಬರುವವರನ್ನು ರಾಜಧಾನಿ ಡಬ್ಲಿನ್‌ನಲ್ಲೇ ಕಾಣಬಹುದು; ಕುದುರೆ ಗಾಡಿಯಲ್ಲಿ

ಕುಳಿತೇ ಅಯರ್ಲಂಡಿನ ವಿಶ್ವಮೋಹಕ ಕಿಲರ್ನಿ ಸರೋವರಗಳ ದರ್ಶನವನ್ನು ಪ್ರವಾಸಿಕ ಪಡೆಯುತ್ತಾನೆ; ಹುಲ್ಲು ಹೊಚ್ಚಿದ ಹೊಸ ಮನೆಗಳೂ ಇಂದಿಗೂ ಅಲ್ಲಿ ಹಳ್ಳಿಗಳಲ್ಲಿವೆ; ವೈಕಿಂಗ್ ಕಡಲುಗಳ್ಳರ ದಾಳಿಗಳಿಂದ ರಕ್ಷಣೆ ಪಡೆಯಲು ಕಟ್ಟಿದ ಶತಮಾನಗಳ ಹಿಂದಿನ ಕಲ್ಲುಕೋಟೆಗಳೂ ನಿರೀಕ್ಷಾಗೋಪುರಗಳೂ ದೇಶದ ತುಂಬೆಲ್ಲ ಇನ್ನೂ ನಿಂತಿವೆ.

ಇದು ಅಯರ್ಲಂಡಿಗೆ ಪ್ರವಾಸಿಕರನ್ನು ಆಕರ್ಷಿಸುತ್ತದೆ. ನೂರಕ್ಕೆಪ್ಪತ್ತರಷ್ಟು ಜನ ಕೃಷಿಕರಾಗಿರುವ "ಹಿಂದುಳಿದ" ಈ ದೇಶದಲ್ಲಿ ಆಹಾರ ವಿಹಾರದ ವೆಚ್ಚ ಬಲು ಅಗ್ಗವಾಗಿರುವುದು ಪ್ರವಾಸಿಕರನ್ನು ಪ್ರೋತ್ಸಾಹಿಸುತ್ತದೆ. ಪ್ರವಾಸಿ ಉದ್ಯಮದಿಂದಲೇ ಅಯರ್ಲಂಡು ವರ್ಷಕ್ಕೆ ರೂ. ೪೮೦ ಕೋಟಿ ಗಳಿಸುವುದೆಂದರೆ ಪ್ರವಾಸಿಕರ ವಿಪುಲತೆಯನ್ನೂಹಿಸಬಹುದು.

ಅಯರ್ಲಂಡಿಗೆ ಬರುವವರ ಕಣ್ಣು ಕಿವಿ ಮನಗಳೆಲ್ಲವೂ ತಣಿಯುವವೆಂದು ಭರವಸೆಯಿದೆ. ನೆಲ ಕಠೋರವಾದರೂ ಶ್ಯಾಮಲವಾದದ್ದು. ನಿಸರ್ಗದಲ್ಲಿ ಅಲ್ಲಿ ಹಸುರು ಪ್ರಧಾನ ವರ್ಣ. ಜನರ ಮೆಚ್ಚಿಕೆಯ ಬಣ್ಣವೂ ಅದೇ. ಟಪಾಲು ಡಬ್ಬಿಗಳಿಗೂ ಅವರು ಹಸುರು ಬಣ್ಣ ಬಳಿಯುತ್ತಾರೆ. ನಗರಗಳಲ್ಲಿ ಹದಿನೆಂಟನೇ ಶತಮಾನದ ಮನೋಹರ ವಾಸ್ತುಶಿಲ್ಪದ ಹೆಗ್ಗುರುತುಗಳಿನ್ನೂ




ಇವೆ. ಡಬ್ಲಿನ್ನಿನ ಟ್ರಿನಿಟಿ ಕಾಲೇಜ್ ಪುಸ್ತಕಾಲಯದಲ್ಲಿ ೯,೦೦,೦೦೦ ಗ್ರಂಥಗಳೂ ೩,೦೦೦ ಅಪರೂಪ ಹಸ್ತಲಿಖಿತ ಮಾತೃಕೆಗಳೂ ಅಸಂಖ್ಯ ಅಪರೂಪ ವಸ್ತು ಸಂಗ್ರಹವೂ ಇವೆ. ಇಲ್ಲಿರುವ "ಬುಕ್ ಆಫ್ ಕೆಲ್ಸ್" ಜಗತ್ತಿನ ಸುಂದರತಮ ಪುಸ್ತಕ ಎನಿಸಿದೆ. ಒಂಭತ್ತನೆ ಶತಮಾನದಲ್ಲಿ ಅತಿ ಜೋಕೆಯಿಂದ ಬರೆದ ಬೈಬಲಿನ ಈ ಕೈಬರಹದ ಪ್ರತಿ ಅಪ್ರತಿಮವಾದ ಚಿತ್ರಗಳಿಂದಲಂಕೃತವಾಗಿದೆ.

ನಿಸರ್ಗವು ಅಯರ್ಲಂಡಿಗಿತ್ತ ಕೊಡುಗೆಗಳಲ್ಲಿ ಕಿಲರ್ನಿ ಸರೋವರಗಳಿಗೆ ಸರಿದೂಗುವಂಥವು ಇಡಿ ಯುರೋಪಿನಲ್ಲೇ ವಿರಳ. ಇಲ್ಲಿ ಒಂದಲ್ಲ ಹತ್ತಾರು ಸೌಂದರ್ಯಸ್ಥಾನಗಳಿವೆ. ೩,೦೦೦ ಅಡಿ ಎತ್ತರಕ್ಕೆ ನೆತ್ತಿ ಉಗ್ಗಡಿಸಿದ ಪರ್ವತಾಪಳಿಯ ಪಕ್ಕದಲ್ಲಿ ನರುಬಿಸಿಲಲ್ಲಿ ತಳತಳಿಸುವ ಕಡು ನೀಲ ಕನ್ನಡಿಯ ಹಾಗಿರುವ ಸರೋವರದ ಮೇಲ್ಗಡೆ ಗಳಿಗೆ ಗಳಿಗೆಗೆ ಬಣ್ಣ ಬದಲಿಸುವ ಮೋಡಗಳ ಮಾಲೆಯ ವೈಭವವನ್ನು ಹೇಳಲೇನು? ಡನ್ಲೋ ಘಟ್ಟದ ಮೂಲಕ ಗಾಡಿಯಲ್ಲಿ ಸಾಗಿ, ನೇರಾಗಿ ಮೇಲೇರಿದ ಕಗ್ಗಲ್ಲ ಗೋಡೆಯಿಂದ ಜಿನುಗುವ ಝರಿಗಳ ನೋಟ ನೋಡುತ್ತ, ಅಣಿಯಾದ ದೋಣಿಯಲ್ಲಿ ಕುಳಿತು ನಡುಗಡ್ಡೆಗಳ ಎಡೆಯಲ್ಲಿ ನುಸುಳುತ್ತ ವಿಹರಿಸುವುದೊಂದೇ ಅನುಭವದಿಂದ ಅಯರ್ಲಂಡಿನ ಯಾತ್ರಾಸಾಫಲ್ಯವಾಯಿತೆಂದು ಯಾತ್ರಿಕ ಭಾವಿಸುತ್ತಾನೆ.

ದಕ್ಷಿಣೋತ್ತರ ೩೦೦ ಮೈಲಿಗಿಂತ ಹೆಚ್ಚಿರದ ಅಯರ್ಲಂಡಿನ ಅಂಕುಡೊಂಕು ಕಡಲ ಕರೆ ೨,೦೦೦ ಮೈಲುದ್ದವಾಗಿದೆ. ಪಶ್ಚಿಮ ಕರಾವಳಿಯಲ್ಲಿರುವ ಕೆರಿ ಭೂಶಿರದ ನೊರೆ ತೆರೆಗಳ ಮಳಲೊಟ್ಟಿಲ ಸೊಬಗು, ಮಹೇರಿನ ೭೦೦ ಅಡಿ ನೆಟ್ಟಗೆ ಮೇಲೇರಿದ ಶಿಲಾಭಿತ್ತಿಯ ಬುಡವನ್ನು ತೊಳೆಯುವ ಉಗ್ರವಾದ ಸಾಗರದ ಭವ್ಯತೆ-ಒಂದೇ, ಎರಡೇ; ಅಯರ್ಲಂಡಿನ ಜಿಲ್ಲೆ ಜಿಲ್ಲೆಯಲ್ಲೂ ಒಂದರಂತೆ ಒಂದಿರದ ನಿಸರ್ಗದ ಬೆಡಗು ಹಬ್ಬಿದೆ.

ಪ್ರತಿಯೊಬ್ಬ ಪ್ರವಾಸಿಯೂ ನೋಡಿಯೇ

ತೀರುವ ಒಂದು ಪದಾರ್ಥವೆಂದರೆ ಬ್ಲಾರ್ನಿ ಶಿಲೆ. ಅಯರ್ಲಂಡಿನ ಎರಡನೇ ನಗರವಾದ ಕಾರ್ಕಿನಿಂದ ಐದು ಮೈಲು ದೂರದಲ್ಲಿರುವ ಪ್ರಾಚೀನ ದುರ್ಗಸೌಧದ ಗೋಡೆಯಲ್ಲಿ ಅಳವಡಿಸಲ್ಪಟ್ಟ ಈ ಕಲ್ಲನ್ನು ಮುತ್ತಿಟ್ಟವರಿಗೆ ವಾಕ್‌ಸಿದ್ಧಿಯಾಗುತ್ತದೆಂದು ಪ್ರತೀತಿಯಿದೆ. ಅದು ಗೋಡೆಯ ಮೇಲೆ ೮೩ ಅಡಿ ಎತ್ತರದಲ್ಲಿದೆ. ಗೋಡೆಯನ್ನೇರಿ ಮೇಲೆ ಸರಳು ಹಿಡಿದು ಅಂಗಾತವಾಗಿ ಅಂತರಾಳದಲ್ಲಿ ಬೆನ್ನು ಬಾಗಿಸಿ ಈ ಕಲ್ಲನ್ನು ಮುತ್ತಿಡಬೇಕಾಗುತ್ತದೆ.

ಈ ವಿಚಿತ್ರ ವಿಧಿಯನ್ನು ಪೂರೈಸಿದವರಿಗೆ ವಾಕ್ಸಿದ್ಧಿಯಾಗಲಿ ಬಿಡಲಿ, ಐರಿಶ್ ಜನಾಂಗಕ್ಕಂತೂ ವಾಕ್ಸಿದ್ಧಿಯಾಗಿಬಿಟ್ಟಿದೆ. ಏಕೆಂದರೆ ಪ್ರಪಂಚದ ಅತಿ ವಾಚಾಳಿ ಜನಾಂಗ ಎಂಬ ಬಿರುದು ಐರಿಶ್ ಜನಕ್ಕೆ ಸೇರಬೇಕು. ಮಾತು ಸಿಕ್ಕಿದರೆ ಮೂಲೋಕ ಸಿಕ್ಕಿದಂತೆ ಅವರಿಗೆ. ಮೃತ ಅಧ್ಯಕ್ಷರೊಬ್ಬರ ಪತ್ನಿಗೆ ಸಮಾಧಾನ ಹೇಳಲು ಹೋದ ವಕೀಲನೊಬ್ಬನ ಕಥೆಯೊಂದಿದೆ. ಆತ ಒಂದು ಗಂಟೆ ಕಾಲ ಎಡೆಬಿಡದೆ ಅವಳೊಡನೆ ಏಕಪಕ್ಷೀಯವಾಗಿ ಸಂಭಾಷಿಸಿ, ಹೊರಗೆ ಬಂದು, "ತುಂಬ ವಾಚಾಳಿ ಹೆಂಗಸು!" ಎಂದು ಆ ಬಡಪಾಯಿಯ ಬಗ್ಗೆ ಹೇಳಿದನಂತೆ. ಮಾತಾಡಿಸಲು ಅಲ್ಲಿ ಗುರುತು ಪರಿಚಯಬೇಕಿಲ್ಲ. ಅಲ್ಲಿ ಯಾರೂ ಯಾವ ಕೆಲಸಕ್ಕೂ ಅವಸರ ಮಾಡರು. ಮಾತಾಡಲು ಯಾರಾದರೂ ಸಿಕ್ಕಿದರೆ ಪ್ರಪಂಚ ಅಷ್ಟು ಹೊತ್ತು ನಿಂತುಹೋಗುವುದು. ಮತ್ತು ಎಂಥ ಮಾತು! ತುಂಬು ಹೃದಯದ, ತಳತಳಿಸುವ ವೈಖರಿಯಿಂದ ಓತಪ್ರೋತವಾದ ವಾಗ್ವಾಹಿನಿ!

ಕೊನೆಮರಾ ಜಿಲ್ಲೆ ಎರಡು ವಿಷಯಗಳಿಗಾಗಿ ಹೆಸರಾಂತಿದೆ. ಗುಡ್ಡ ಬೆಟ್ಟಗಳಿಂದ ತುಂಬಿದ ಈ ಪ್ರದೇಶದಲ್ಲಿ ಜಗತ್ತಿನ ಅತಿ ಚಿಕ್ಕ ಹೊಲಗಳನ್ನು ಕಾಣಬಹುದು. ಅದಕ್ಕೂ ಹೆಚ್ಚಿನದೆಂದರೆ ಇಲ್ಲಿನ ಕಷ್ಟಜೀವಿ ಜನ ಅಯರ್ಲಂಡಿನ ಮೂಲ ಭಾಷೆಯಾದ ಕೆಲ್ಟಿಕನ್ನೇ ಮಾತಾಡುತ್ತಾರೆ. ಕೆಲ್ಟಿಕ್ ಅಯರ್ಲಂಡಿನ ರಾಷ್ಟ್ರಭಾಷೆಯಾಗಿದ್ದು ಪ್ರತಿ ಶಾಲೆಯಲ್ಲೂ ಅದನ್ನು ಕಲಿಸಲಾಗುತ್ತಿದೆ. ಆದರೆ ಏಳು ಶತಕಗಳ ಬ್ರಿಟಿಶ್ ಆಳಿಕೆಯಲ್ಲಿ ಇಂಗ್ಲೀಷು ಎಷ್ಟು ಬೇರೂರಿಬಿಟ್ಟಿದೆಯೆಂದರೆ, ಕೊನೆಮರಾದ ಹೊರಗೆ ಎಲ್ಲಿಯೂ ಕೆಲ್ಟಿಕ್ ಮನೆಮಾತಾಗಿ ಉಳಿದಿಲ್ಲ. ಐರಿಶರ ರಾಷ್ಟ್ರಾಭಿಮಾನ ಅತಿಶಯವಾಗಿದ್ದರೂ ಇಂಗ್ಲೀಷಿನಿಂದ ಅವರು ಮುಕ್ತರಾಗಲು ಶಕ್ತರಾಗಿಲ್ಲ.

ಅಯರ್ಲಂಡಿನ ಜನ ತುಂಬ ಧಾರ್ಮಿಕರು. ಇಂಗ್ಲಂಡಿಗೆ ಕ್ರೈಸ್ತ ಧರ್ಮ ಕಾಲಿಡುವ ಮೊದಲೇ ಇಲ್ಲದು ನೆಲಸಿತ್ತು. ಬಹುಸಂಖ್ಯರು ಕೆಥೋಲಿಕರಾದರೂ ಇತರ ಪಂಥಗಳ ಬಗ್ಗೆ ದ್ವೇಷವಿಲ್ಲ. ಮಧ್ಯಯುಗದ ಯುರೋಪು ಅಂಧಕಾರದಲ್ಲಿ ಮುಳುಗಿದ್ದಾಗ ಐರಿಶ್ ಪಾದ್ರಿಗಳೇ ಅದನ್ನು ಸತ್ಪಥದ ಕಡೆ ತಿರುಗಿಸಿದವರು. ಈ ಇಪ್ಪತ್ತನೇ ಶತಕದಲ್ಲೂ ಕಠೋರ ತಪಶ್ಚರ್ಯೆ ಮಾಡುವ ಯತಿಗಳು ಅಲ್ಲಿದ್ದಾರೆ. ಡೊನೆಗಲ್ ಜಿಲ್ಲೆಯಲ್ಲಿರುವ ಸೆಂಟ್ ಪೆಟ್ರಿಕ್ ತಪೋಗುಹೆಯಲ್ಲಿ ಅನೇಕ ಯುರೋಪಿಯನ್ ತಪಸ್ವಿಗಳು ಬೆಳಕು ಕಂಡಿದ್ದಾರೆ.

ಐರಿಶರ ಸ್ವದೇಶಾಭಿಮಾನವೆಷ್ಟಿದ್ದರೂ ಸ್ವದೇಶದಲ್ಲಿರುವುದಕ್ಕಿಂತ ಇಮ್ಮಡಿ ಐರಿಶರು ವಿದೇಶದಲ್ಲಿರುವುದು ಒಂದು ವಿರೋಧಾಭಾಸ. ಯುರೋಪಿಯನ್ನರು ವಲಸೆ ಹೋದ ಹೆಚ್ಚು ಕಡಿಮೆ ಪ್ರತಿಯೊಂದು ದೇಶದಲ್ಲೂ ಐರಿಶರನ್ನು ಕಾಣಬಹುದು. ವಲಸೆ ಹೋದ ಪ್ರತಿಯೊಂದು ಐರಿಶ್ ಕುಟುಂಬವೂ ತನ್ನ ಐರಿಶ್ ಮೂಲವನ್ನು ತಲೆ ತಲಾಂತರದ ವರೆಗೂ ಅಭಿಮಾನಪೂರ್ವಕ ನೆನೆದುಕೊಂಡಿರುತ್ತದೆ. ಲಕ್ಷಗಟ್ಟಳೆ ಐರಿಶರು ಇಂಗ್ಲಂಡಿನಲ್ಲಿ ದುಡಿದು ಮಾತೃಭೂಮಿಗೆ ಹಣ ತರುತ್ತಾರೆ. ತೊಂದರೆಯ ಮೂಲವೆಂದರೆ ಅಯರ್ಲಂಡಿನ ನೈಸರ್ಗಿಕ ಬಡತನ. ಅಲ್ಲಿ ಯಾವ ಹಿರಿಯ ಉದ್ದಿಮೆಯೂ ಇಲ್ಲ. ವಿದೇಶಗಳಲ್ಲಿ ದುಡಿಯುವ ಪ್ರತಿಯೊಬ್ಬ ಐರಿಶನೂ ತನ್ನ ನೈಸರ್ಗಿಕ ವಾಗ್ವಿಲಾಸದಿಂದ

ಎನ್ನುವುದಿದು: "ಆಹಾ! ಈ ಹಣ ಅಲ್ಲಿ ಸಿಗುತ್ತಿದ್ದರೆ ನಾನು ನನ್ನ ಅಯರ್ಲಂಡಿನಲ್ಲೇ ಇರುತ್ತಿದ್ದೆನಲ್ಲ! ಆದರೆ ಅದು ಸಾಧ್ಯವಿಲ್ಲ. ಪವಿತ್ರ ಅಯರ್ಲಂಡಿನಲ್ಲಿ ಎಲ್ಲ ಪಾಪಗಳ ಮೂಲವಾದ ಪದಾರ್ಥ ಹೇಗಿದ್ದೀತು?"

ಪ್ರತಿ ವರ್ಷ ೪೦,೦೦೦ ಐರಿಶರನ್ನು ವಲಸೆ ಹೋಗುವಂತೆ ಮಾಡುವ ಪರಿಸ್ಥಿತಿಯನ್ನು ಬದಲಿಸಲು ಸರಕಾರ ಯತ್ನಿಸುತ್ತಿದೆ. ಹೊಸ ಕಲ್ಪನಾಪೂರ್ಣವಾದ ಧೋರಣೆಗಳಿಂದ ವಿದೇಶಿ ಬಂಡವಳವನ್ನು ಆಕರ್ಷಿಸಲಾಗುತ್ತಿದೆ. ಶನ್ನಾನ್ ವಿಮಾನ ನಿಲ್ದಾಣ ಇದಕ್ಕೊಂದು ಉದಾಹರಣೆ. ಮಹಾಯುದ್ಧಕಾಲದಲ್ಲಿ ವಿಮಾನ ನಿಲ್ದಾಣವಾಗಿದ್ದ ಈ ಬಂದರವನ್ನು ಸುಂಕಮುಕ್ತವೆಂದು ಸಾರಿದ್ದರಿಂದ ಚಿಲ್ಲರೆ ರೇವಾಗಿದ್ದ ಇದು ಇಂದು ಅತ್ಯಂತ ಸಮೃದ್ಧಸ್ಥಾನವಾಗಿದೆ. ಇಲ್ಲಿನ ಅಂಗಡಿಗಳಲ್ಲಿ ತರತರದ ಸರಕುಗಳು ಅವುಗಳನ್ನು ತಯಾರಿಸಿದ ದೇಶಗಳಿಗಿಂತಲೂ ಅಗ್ಗವಾಗಿ ಮಾರುತ್ತವೆ. ಅಯರ್ಲಂಡಿನ ಗ್ರಾಮೋದ್ಯೋಗದ ಅನುಪಮ ಸರಕುಗಳನ್ನು ವಿದೇಶಗಳಿಗೆ ರಫ್ತು ಮಾಡುವ ಲಾಭದಾಯಕ ಉದ್ಯೋಗವನ್ನು ಇಲ್ಲಿ ಬೆಳೆಸಲು ಸಾಧ್ಯವಾಗಿದೆ.

ವಿದೇಶೀ ಬಂಡವಳ ಮೆಲ್ಲನೆ ಒಳಹರಿಯತೊಡಗಿದೆ. ರೇಡಿಯೋ, ಜವಳಿ ಮೊದಲಾದ ಕಾರಖಾನೆಗಳು ತಲೆಯೆತ್ತಿವೆ. ಕಾರ್ಕಿನಲ್ಲೊಂದು ತೈಲಶುದ್ಧೀಕರಣ ಕೇಂದ್ರವಾಗಿದೆ. ಅಲ್ಲೇ ಡಚ್ಚರು ಒಂದು ನೌಕಾನಿರ್ಮಾಣ ಕೇಂದ್ರ ಸ್ಥಾಪಿಸಿದ್ದಾರೆ. ಚಿಕ್ಕ ಚಿಕ್ಕ ಜಲಪಾತಗಳಿಂದಲೂ ವಿದ್ಯುತ್ತನ್ನು ಉತ್ಪಾದಿಸಲಾಗುತ್ತಿದೆ.

ಗ್ರಾಮೋದ್ಯೋಗವನ್ನು ವಿದೇಶಿ ಪೇಟೆಗಳಿಗಾಗಿ ಇಂದಿನ ಪರಿಸ್ಥಿತಿಗನುಗುಣವಾಗಿ ಹೇಗೆ ಬೆಳೆಸಬಹುದೆಂಬುದನ್ನು ನಾವು ಅಯರ್ಲಂಡಿನಿಂದ ಕಲಿಯಬಹುದು. ಡೊನೆಗಲ್ ಟ್ವೀಡ್ ಉಣ್ಣೆಗಾಗಿ ಪ್ರಸಿದ್ಧವಾಗಿದೆ. ಅಲ್ಲಿ ಮನೆ ಮನೆಯಲ್ಲೂ ಕೈಮಗ್ಗ ನಡೆಯುತ್ತದೆ. ಹವೆ ಕೆಟ್ಟು ಹೊಲಕ್ಕೆ ಹೋಗಲಾರದಾಗೆಲ್ಲ ಮಗ್ಗಗಳು ನುಡಿಯತೊಡಗುತ್ತವೆ. ಹಿಂದೆ ಇಲ್ಲಿ ಉತ್ಪಾದಿಸುತ್ತಿದ್ದ ಟ್ವೀಡುಗಳ ಯೋಗ್ಯತೆ ಏಕಪ್ರಕಾರವಾಗಿರುತ್ತಿರಲೂ ಇಲ್ಲ, ವಿದೇಶಗಳ ಅವಶ್ಯಕತೆಗಳನ್ನು ಗಮನಿಸುತ್ತಲೂ ಇರಲಿಲ್ಲ. ಆದರೆ ೩೦ ವರ್ಷಗಳ ಹಿಂದೆ ತಲೆಯೆತ್ತಿದ ಮ್ಯಾಕ್‌ಗೀ ಕಂಪೆನಿ ಮಗ್ಗಗಳಿಗೆ ನಿರ್ದೇಶನವಿತ್ತು ಅದಕ್ಕನುಗುಣವಾಗಿ ಉತ್ಪಾದಿಸಿದ ಟ್ವೀಡನ್ನು ಕೊಂಡು ನಿರ್ಯಾತ ಮಾಡುವ ಕೆಲಸ ಆರಂಭಿಸಿತು. ಇಂದು ಅದು ೧೨೦೦ ಚದರ ಮೈಲು ವಿಸ್ತಾರದಲ್ಲಿ ಗುಡ್ಡ ಬೆಟ್ಟಗಳಲ್ಲಿ ಹುದುಗಿರುವ ರೈತರ ಮನೆಗಳಿಗೆ ಮೋಟಾರ್ ಮೂಲಕ ಉಣ್ಣೆ ನೂಲನ್ನೂ ಅದನ್ನು ನೇಯಬೇಕಾದ ಡಿಜೈನುಗಳ ವಿವರಗಳನ್ನೂ ಪೂರೈಸಿ ಅಣಿಯಾದ ಟ್ವೀಡನ್ನು ಒಯ್ದು ವಿದೇಶಗಳಿಗೆ ಕಳಿಸುತ್ತದೆ. ಹೀಗೆ ಅಯರ್ಲಂಡು ಅಮೇರಿಕದಿಂದ ಆಸ್ಟ್ರೇಲಿಯದ ವರೆಗೆ ದೇಶದೇಶಾಂತರಗಳಿಗೆಲ್ಲ ಆಯಾ ದೇಶದ ಫ್ಯಾಶನ್ನಿಗೆ, ರುಚಿಗೆ ಸರಿದೂಗುವಂಥ ಟ್ವೀಡನ್ನು ರಫ್ತು ಮಾಡಬಲ್ಲುದಾಗಿದೆ. ಟ್ವೀಡ್ ಇಂದು ಅಯರ್ಲಂಡಿನ ಮುಖ್ಯ ರಫ್ತುಗಳಲ್ಲೊಂದು.

ಅಯರ್ಲಂಡು ಪ್ರಜಾರಾಜ್ಯ. ಜೀವಮಾನವೆಲ್ಲ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಈಮನ್ ಡಿವೆಲರಾ ಅದರ ಅಧ್ಯಕ್ಷರಾಗಿ ಡಬ್ಲಿನ್ನಿನಲ್ಲಿ ಹಿಂದೆ ಬ್ರಿಟನ್ ವೈಸರಾಯರು ವಾಸಿಸುತ್ತಿದ್ದ ಅರಮನೆಯಲ್ಲಿ ವಾಸಿಸುತ್ತಾರೆ. ಶತಮಾನಗಳ ಸ್ವಾತಂತ್ರ ಹೋರಾಟ, ಹಿಂಸೆ, ಪ್ರತಿಹಿಂಸೆ, ಉಪವಾಸ, ಸತ್ಯಾಗ್ರಹ ಇವುಗಳ ಮೂಲಕ ಬ್ರಿಟನ್ನಿನೊಡನೆ ಐರಿಶರ ಸಂಬಂಧ ಕಟುವಾಗಿರಲು ಬೇಕಾದಷ್ಟು ಕಾರಣವಿದ್ದರೂ ಐರಿಶರ ಸ್ವಭಾವ ಸಹಜಮಧುರವಾಗಿರುವುದರಿಂದ ಹಳೆಯದನ್ನೆಲ್ಲ ಮರೆತುಬಿಡುವುದು ಅವರಿಗೆ ಸುಲಭವಾಗಿದೆ. ಅಯರ್ಲಂಡಿನಲ್ಲೆಲ್ಲ ಗತಕಾಲದ ಹೆಗ್ಗುರುತುಗಳು ಚದರಿವೆ. ಆದರೆ ಐರಿಶರು ಭವಿಷ್ಯದತ್ತ ನೋಡತೊಡಗಿದ್ದಾರೆ. *



ನೈತಿಕ ಶೌರ್ಯ ದೈಹಿಕ ಶೌರ್ಯವನ್ನು ಪ್ರತಿಭಟಿಸಿದಾಗ

# ಗಾಂಧಿವಾದಿ 'ದರೋಡೆಗಾರ'

ಮೂಲ ಗುಜರಾತಿ :
ಝುವೇರಿಚಂದ ಮೇಘಾಣಿ

ವಾತ್ರಕ ನದಿಯ ದಂಡೆಗುಂಟ ಸಾಗುವ ರಸ್ತೆ, ರಾತ್ರಿಯಲ್ಲಿ ಮಾತ್ರವಲ್ಲ, ಹಗಲಿನಲ್ಲಿ ಕೂಡ ಭಯಾನಕವಾಗಿತ್ತು. ಒಂದಿಷ್ಟು ತಿಳಿವಳಿಕೆಯುಳ್ಳ ಯಾವನೂ ಈ ರಸ್ತೆಯಲ್ಲಿ ಹೊತ್ತಿಲ್ಲದ ಹೊತ್ತಿನಲ್ಲಿ ಹೋಗುವ ಮೂರ್ಖತನವನ್ನು ಮಾಡುತ್ತಿರಲಿಲ್ಲ. ೧೯೩೩ ರ ಒಂದು ಕತ್ತಲೆಯ ರಾತ್ರಿಯಲ್ಲಿ ಈ ಪ್ರದೇಶ ಎಂದಿಗಿಂತಲೂ ಹೆಚ್ಚು ಭೀಕರ ಸ್ವರೂಪವನ್ನು ತಾಳಿತ್ತು. ಬಾಬರ ದೇವ, ನಾಮದಾರಿಯಾ ಮತ್ತು ಡಾಹ್ಯಾಭಾಯಿ ಫೌಜದಾರ ಎಂಬ ಮೂವರು ದರೋಡೆಗಾರರ ತಂಡಗಳು ವಾತ್ರಕ ಮತ್ತು ಮಹಿಯ ನಡುವಿನ ಪ್ರದೇಶದಲ್ಲಿ ಅಂತಕನ ಕೋಲಾಹಲ ನಡೆಸಿದ್ದವು. ಡಾಹ್ಯಾ ಭಾಹರವಟಿಯಾನಂತೂ ತನ್ನನ್ನು ದರೋಡೆಗಾರ ಎನ್ನುವ ಬದಲು ಫೌಜದಾರ ಎಂದು ಕರೆದುಕೊಳ್ಳುತ್ತಿದ್ದ.

ಇಂಥ ಒಂದು ಘನಘೋರ ಕತ್ತಲೆಯ ರಾತ್ರಿಯ ದಿನ ಕಪಡವಂಜ ತಾಲೂಕಿನ ಭರಕಡಾ ಎಂಬ ಊರಿನಿಂದ ಉತ್ತಮ ಧೋತರವನ್ನುಟ್ಟು ತಲೆಗೆ ಗಾಂಧಿ ಟೊಪ್ಪಿಗೆ ಧರಿಸಿದ್ದ ಒಬ್ಬ ಬ್ರಾಹಣ ಹೊರಟಿದ್ದ. ಸುಮಾರು ೪೦



ವರ್ಷ ಪ್ರಾಯದ ಆತ ಬರಿಗಾಲಿನಲ್ಲಿಯೆ ನಡೆದಿದ್ದ. ಆತನಿಗೆ ದಿನಾಲು ನಸುಕಿನಲ್ಲಿ ಎದ್ದು ರಾತ್ರಿ ಮಲಗುವ ಸಮಯ ಬರುವವರೆಗೂ ನಡೆಯುವ ರೂಢಿ ಇತ್ತು. ಹಾದಿಯಲ್ಲಿ ರೈತರು ಕಾಲು ಮುಟ್ಟಿ ನಮಸ್ಕರಿಸಿ ಪ್ರೇಮಾದರಗಳಿಂದ ಮಾತನಾಡಿಸುವುದು ಅವನಿಗೆ ನಿತ್ಯದ ಅನುಭವವಾಗಿತ್ತು. ಆದರೆ ಇಂದು ಹೊಲಗಳಿಂದ ಭರ ಕಡಾ ಊರಿನತ್ತ ಬರುತ್ತಿದ ಜನರ ರೀತಿ-ವರ್ತನೆ ತುಸು ಚಮತ್ಕಾರವೆನಿಸುತ್ತಿತ್ತು. ಸ್ತ್ರೀಪುರುಷರಲ್ಲಿ ಹಿಂದೆಂದೂ ಇದ್ದಿರದ ಒಂದು ಉದ್ವಿಗ್ನತೆ ಕಾಣಿಸುತ್ತಿತ್ತು. ಸಾಮಾನ್ಯವಾಗಿ ಮಹಾರಾಜರು (ಮೇಲೆ ಹೇಳಿದ ಬ್ರಾಹ್ಮಣ)- ಬೇಕಾದಂಥ ಉಗ್ರ ಬಿಸಿಲೇ ಇರಲೊಲ್ಲದೇಕೆ– ಭೆಟ್ಟಿಯಾದೊಡನೆ ತಲೆಯ ಮೇಲಿನ ರುಮಾ-ಲನ್ನು ತೆಗೆದು ನೆಲದ ಮೇಲೆ ಹಾಸಿ ಅದರ ಮೇಲೆ ಅವರನ್ನು ನಿಲ್ಲಿಸಿ ಅವರ ಚರಣ ಧೂಳಿಯನ್ನು ತಲೆಯಲ್ಲಿ ಧರಿಸಿ ಆದರದಿಂದ ಮಾತನಾಡಿಸುವುದು ಜನರ ಕ್ರಮವಾಗಿತ್ತು. ಆದರೆ ಇಂದು ಮಾತ್ರ ಈ ಜನರೆಲ್ಲ ಇಷ್ಟೊಂದು ಅವಸರದಿಂದ ಓಡುತ್ತಿರುವರೇಕೆ?

ಮುಂದೆ ಜನವಸತಿ ಮುಗಿಯಿತು. ಹಾದಿಯಲ್ಲಿ ಜನರ ಭೆಟ್ಟಿಯಾಗದಂತಾಯಿತು. ಒಂದು ಕಡೆ ಪಶ್ಚಿಮಾಭಿಮುಖವಾಗಿ ಹರಿಯುತ್ತಿದ್ದ ಪಾತ್ರಕ ನದಿಯ ದಂಡೆ, ಇನ್ನೊಂದು ಕಡೆ ಹೊಲಗಳ ನಡುವೆ ಹಾಯ್ದು ಹೋಗುತ್ತಿದ್ದ ರಸ್ತೆ ಗಂಭೀರ ನಿಶ್ಶಬ್ದವಾಗುತ್ತ ಹೋಯಿತು. ಕತ್ತಲೆಯೂ ಹೆಚ್ಚತೊಡಗಿತು. ಪಥಿಕನಿಗೆ ತನ್ನ ಕೈಯ ಬೆರಳುಗಳೂ ಕಾಣಿಸುತ್ತಿರಲಿಲ್ಲ. ಅಕ-ಸ್ಮಾತ್ತಾಗಿ ಅವರಿಗೆ ತಮ್ಮ ಎದೆಯ ಮೇಲೆ ಯಾರೋ ಕೈಯಿಟ್ಟು ಹಿಂದಕ್ಕೆ ದಬ್ಬಿದಂತಾಯಿತು. ಅವರು ಕೂಡಲೆ "ಯಾರು?" ಎಂದರು.

"ತಿರುಗಿ ಹೋಗಿ" ಹಿಂದಕ್ಕೆ ದಬ್ಬಿದವ ಹೇಳಿದ.

"ಯಾರು ಪೂಂಜಾ ಏನು ?" ಧ್ವನಿಯ ಪರಿ-ಚಯ ಹತ್ತಿ ಪಥಿಕ ಕೇಳಿದರು.

"ತಿರುಗಿ ಹೋಗಿ" ಮಂದಸ್ವರದಲ್ಲಿ ಪೂಂಜಾ ಪುನಃ ಹೇಳಿದ.

"ಆದರೆ ಯಾಕೆ? ಸಂಗತಿಯೇನು ?"

"ಮುಂದೆ ದರೋಡೆಗಾರರಿದ್ದಾರೆ."

"ಯಾರು ಭಾಹರವಟಿಯಾನೇ ?"

"ಹೌದು. ನಾಮದಾರಿಯಾನೂ ಇದ್ದಾನೆ."

"ಸರಿ. ಹಾಗಾದರೆ ಏನೂ ಅಂಜಿಕೆಯಿಲ್ಲ. ನಾನು ಅವರ ಶೋಧದಲ್ಲಿಯೆ ಇದ್ದೇನೆ. ನಾನು ಅವರನ್ನು ಭೆಟ್ಟಿಯಾಗಬೇಕೆಂದಿದ್ದೇನೆ."

"ಇಲ್ಲ ಮಹಾರಾಜ, ಇಂಥ ಮಾತಾಡಬೇಡಿ. ನಾನು ನಿಮ್ಮನ್ನು ಮುಂದೆ ಹೋಗಗೊಡಲಾರೆ. ನಿಮ್ಮ ಸಂಗಡ ಬರಲೂ ಆರೆ. ಅವರು ನಿಮ್ಮ ಮೇಲೆ ಕೈಯೆತ್ತಿದಾಗ ನಾನು ನಿಮ್ಮನ್ನು ರಕ್ಷಿಸಲಾರದೆ ಹೋದೆನಾದರೆ ನಾನು ಬದುಕಿದ್ದು ಪ್ರಯೋಜನವೇನು? ನೀವು ಹಿಂತಿರುಗಿ ಹೋಗಿ. ಮುಂದೆ ಹೋದರೆ ಅವರು ನಿಮ್ಮನ್ನು ಹಿಡಿದಿಟ್ಟುಕೊಂಡು ಬಿಡುಗಡೆಗಾಗಿ ತುಂಬ ಹಣ ಕೇಳಿಯಾರು."

ದರೋಡೆಗಾರರು ಜನರನ್ನು ಹಿಡಿದು ಅವರ ಬಿಡುಗಡೆಗಾಗಿ ಬಹಳಷ್ಟು ಹಣ ಕೇಳುತ್ತಾರೆ ಎಂದು ಪಥಿಕ ತಿಳಿದುಕೊಂಡರು. ಹೇಳಿದ ಸಮಯಕ್ಕೆ ಹಣ ಸಿಗದಿದ್ದರೆ ಅವರು ಬಂದಿಯ ಪ್ರಾಣಹರಣ ಮಾಡುತ್ತಿದ್ದರು. ಜೀವದ ಭಯವೇನೂ ಪಥಿಕನಿಗಿರಲಿಲ್ಲ. ಆದರೆ ತಾನು ತನ್ನ ಜೀವನವನ್ನು ಬಾರ್ಡೋಲಿ ಸಂಗ್ರಾಮಕ್ಕಾಗಿ ಮುಡಿಪಿಟ್ಟಿರುವುದು ಅವರ ಗಮನಕ್ಕೆ ಬಂತು. ಅವರು ಮಹಾತ್ಮಾಜಿಯವರಿಗೆ ವಚನವಿತ್ತಿದ್ದರು. ಎರಡು ತಿಂಗಳಲ್ಲಿ ಸ್ವರಾಜ್ಯವನ್ನು ಕೊಡದಿದ್ದರೆ ಬಾರ್ಡೋಲಿ ಸಮರವನ್ನು ಪ್ರಾರಂಭಿಸುವೆವು ಎಂದು ಸರಕಾರಕ್ಕೆ ಆಹ್ವಾನ ಹೋಗಿತ್ತು. ಈ ಸಂಗ್ರಾಮದಲ್ಲಿ ಅವರು ಪ್ರಥಮ ಬಲಿದಾನವಾಗಬೇಕಾಗಿತ್ತು. ದೇಶವ್ಯಾಪಿ ಸಂಗ್ರಾಮದ ಪ್ರಾರಂಭ ಬಾರ್ಡೋಲಿಯಲ್ಲಿ ಆಗಲಿತ್ತು. ಸರಕಾರ ಸತ್ಯಾಗ್ರಹಿಗಳ ಮೇಲೆ ಬಂದೂಕು ಹಾರಿಸುವ ಸಂಭವವಿತ್ತು. ಬಂದೂಕಿನ ಗುಂಡು

ಗಳನ್ನು ಎದುರಿಸಲು ಮಹಾತ್ಮಾಜಿಯವರು ೨೦೦೦ ಸ್ವಯಂಸೇವಕರನ್ನು ಬೇಡಿದ್ದರು. ಈ ೨೦೦೦ ಜನರಲ್ಲಿ ಮೋಹನಲಾಲ ಪಾಂಡ್ಯಾ ಮತ್ತು ಈ ಪಥಿಕ ಇಬ್ಬರು ಎದ್ದು ಕಾಣುವವ ರಾಗಿದ್ದರು.

ಮರಣದ ಭೀತಿಯೇನೂ ಇರಲಿಲ್ಲ. ಆದರೆ ರಾಷ್ಟ್ರಹಿತಕ್ಕಾಗಿ ಮಂಗಲಮಯಿ ಮೃತ್ಯುವಿಗೆ ಅರ್ಪಿತವಾಗಿದ್ದ ಜೀವನವನ್ನು ದರೋಡೆಗಾರ ರಿಗೆ ಒಪ್ಪಿಸುವುದು ಯೋಗ್ಯವೆ? ಇಲ್ಲ. ನಾನು ತಿರುಗಿ ಹೋಗಬೇಕು.

ಆ ಕ್ಷಣದಲ್ಲಿ ಮೂರು ದಿನಗಳ ಹಿಂದೆ ನಡೆದ ಸಭೆಯ ನೆನಪಾಯಿತು. ವಸಾಣಾ ಎಂಬ ಹಳ್ಳಿ ಯಲ್ಲಿ ದರೋಡೆಗಾರರ ಸಮ್ಮುಖದಲ್ಲಿ ನಿರ್ಭೀತಿ ಯಿಂದ ಪ್ರಾಣವನ್ನು ಪಣವಾಗಿಟ್ಟು ಹೋರಾಡ ಬೇಕು ಎಂದು ಜನರಿಗೆ ಆಹ್ವಾನವಿತ್ತಾಗ ಮೊ-ಹಮದಾಬಾದ ತಹಸೀಲಿನ ಪಾಟೀಲ ತನ್ನ ಅನುಭವವನ್ನು ಹೇಳಿದ: "ದರೋಡೆಗಾರರು ದೊಡ್ಡ ಸಂಖ್ಯೆಯಲ್ಲಿ ನನ್ನ ಮನೆಗೆ ಬಂದರು. ಓಡಿ ಹೋಗುವುದರಲ್ಲೆ ಸುರಕ್ಷಿತತೆಯಿದೆ ಎಂದು ನಾನು ಯೋಚಿಸಿದೆ. ನನ್ನ ಹತ್ತರ ಬಂದೂಕಿ ದ್ದರೂ ಅದರ ಬಲದಿಂದ ದರೋಡೆಗಾರರನ್ನೆದು ರಿಸುವುದು ಗಂಡಾಂತರದ್ದೆಂದು ತಿಳಿದು ನಾನು ನನ್ನ ಮುದಿ ತಾಯಿ ಮತ್ತು ಹೆಂಡತಿಯನ್ನುಬಿಟ್ಟು ಓಡಿದೆ. ದರೋಡೆಗಾರರು ತಾಯಿ ಮತ್ತು ಹೆಂಡತಿಯನ್ನು ಕೊಂದರೆಂದು ಮರುದಿನ ಕೇಳಿದೆ." ಆಗ ಪಥಿಕ ಹೇಳಿದ್ದರು: "ಏನು, ನಿನಗೆಂದೂ ಸಾವು ಬರುವುದೇ ಇಲ್ಲವೆ? ತಾಯಿ ಮತ್ತು ಹೆಂಡತಿಯನ್ನು ಬಿಟ್ಟುಕೊಟ್ಟು ಓಡಿದೆ ಎಂದು ಹೇಳಲು ನಿನಗೆ ನಾಚಿಕೆಯೆನಿಸುವು ದಿಲ್ಲವೆ?" ಮತ್ತೆ ಜನರನ್ನುದ್ದೇಶಿಸಿ "ಸತ್ತರೂ ಸರಿ, ನಿರ್ಭಯದಿಂದ ದರೋಡೆಗಾರರನ್ನು ಎದು ರಿಸಬೇಕು" ಎಂದು ಹೇಳಿದ್ದರು.

"ಹೀಗಿರುವಾಗ ನಾನೀಗ ತಿರುಗಿ ಹೋದರೆ ಜನರ ಮೇಲೆ ಪರಿಣಾಮವೇನಾದೀತು? ಆ ಪಾಟೀಲ ಏನೆಂದಾನು?" ಬಾರ್ಡೋಲಿ ಸಂಗ್ರಾ ಮದ ಮಾತು ಯಾರಿಗೆ ತಿಳಿದೀತು? ಈ ವಿಚಾರ ಬಂದೊಡನೆ ಅವರು "ಪೂಂಜಾ, ನೀನು ನನ್ನ ಸಂಗಡ ಬರಬೇಡ. ಅವರೆಲ್ಲಿದ್ದಾರೆಂದು ನನಗೆ ಹೇಳು" ಎಂದರು.

"ಅವರು ಸಮೀಪದ ಹೊಲದಲ್ಲಿದ್ದಾರೆ. ಆದರೆ ಮಹಾರಾಜ, ತಾವು ಈ ಮಾತನ್ನು ಯಾರ ಮುಂದೂ ಹೇಳಲಾಗದು. ದರೋಡೆಗಾರರಿಗೆ ಗೊತ್ತಾದರೆ ಅವರು ನನ್ನನ್ನು ಕೊಂದುಹಾಕು ವರು. ಪೋಲೀಸರಿಗೆ ತಿಳಿದರೆ ನನ್ನ ರಕ್ತವನ್ನೇ ಕುಡಿಯುವರು."

"ಒಳ್ಳೇದು. ನೀನಿನ್ನು ಹೋಗು" ಮಹಾರಾ ಜರು ಹೇಳಿದರು.

ಕತ್ತಲೆಯಲ್ಲಿ ಪೂಂಜಾ ಕಣ್ಮರೆಯಾದ. ಮಹಾರಾಜರು ಮುಂದೆ ನಡೆದರು. ಅವರಿಗೆ ಹೊಲದ ರಸ್ತೆ ಕಾಣಿಸಿತು. ಆ ರಸ್ತೆಯಲ್ಲಿ ಕೆಲ ದೂರ ಹೋಗಲು ಅವರಿಗೆ ಒಬ್ಬ ಬಲು ಎತ್ತರ ನಾದ ಮನುಷ್ಯ ಕಾಣಿಸಿದ. ಅವನ ಕೈಲಿ ಬಂದೂಕಿತ್ತು. ಅವನು ನಿಶ್ಚಲನಾಗಿ, ನಿಶ್ಶಬ್ದ ವಾಗಿ ನಿಂತಿದ್ದ.

ಬಂದೂಕುಧಾರಿಯನ್ನು ಕಂಡು ಮಹಾರಾ ಜರು ಗಟ್ಟಿಯಾಗಿ ನಕ್ಕರು. ಇಂಥ ಭಯಂಕರ ಪರಿಸ್ಥಿತಿಯಲ್ಲಿ ನಗು ಹೇಗೆ ಬಂತು? ಅವರಿಗೂ ಅದು ತಿಳಿಯಲಿಲ್ಲ. ಅವರು "ಏನು, ಒಬ್ಬನೇ ಇದ್ದೀಯಾ? ಉಳಿದವರೆಲ್ಲಿ?" ಎಂದು ಬಂದೂಕು ಧಾರಿಯನ್ನು ಕೇಳಿದರು.

ಗಟ್ಟಿಯಾದ ನಗು ಮತ್ತು ಈ ಪ್ರಶ್ನೆ ಬಂದೂಕು ಧಾರಿಯನ್ನು ವಿಸ್ಮಯದಲ್ಲಿ ಕೆಡವಲು ಸಾಕಾ ಗಿತ್ತು. ಆತ ಉತ್ತರ ಕೊಡಲಿಲ್ಲ. ಮಹಾರಾ ಜರು ಹೊಲದ ಬೇಲಿಯ ಬಾಗಿಲು ತೆರೆದು ಒಳಗೆ ನಡೆದರು. ಆ ಬಂದೂಕುಧಾರಿ ಅವರ ಹಿಂದಿಂದೆಯೆ ನಡೆದ.

ತುಸು ಮುಂದೆ ಹೋದ ಬಳಿಕ ಮಹಾರಾಜ ರಿಗೆ ಇನ್ನಿಬ್ಬರು ಬಂದೂಕುಧಾರಿಗಳು ನಿಂತಿರು ವುದು ಕಂಡಿತು. ಅವರೂ ಮೌನವಾಗಿ ನಿಂತಿ

ದ್ದರು. ಮಹಾರಾಜರು ಮತ್ತೂ ನಡೆಯತೊಡಗಿದರು. ಅವರ ಬಲ ಬದಿಗೆ ಒಬ್ಬ, ಎಡಬದಿಗೆ ಒಬ್ಬ, ಹಿಂದೆ ಒಬ್ಬ ಬಂದೂಕುಧಾರಿ ನಡೆದರು. ಅಷ್ಟರಲ್ಲಿ "ಅಲ್ಲೇ ನಿಲ್ಲಿ, ಇಲ್ಲವಾದರೆ ಗುಂಡು ಹಾಕುವೆ" ಎಂಬ ತೀವ್ರ ಸ್ವರ ಕೇಳಿಸಿತು.

ಮಹಾರಾಜರು ನಿಂತರು. ನಿಲ್ಲು ಎಂದವ ಕುದುರೆಯನ್ನೇರಿದ್ದ. ಮೂವರೂ ಬಂದೂಕುಧಾರಿಗಳು ಮಹಾರಾಜರ ಮೂರು ಕಡೆಗಳಲ್ಲಿ ನಿಂತಿದ್ದರು. ಕುದುರೆ ಸವಾರ ಕೇಳಿದ: "ನೀನು ಯಾರು?"

"ನಾನು ವಿದ್ರೋಹಿ."

"ಇಲ್ಲಿ ಹೇಗೆ, ಏಕೆ ಬಂದೆ?"

"ನಿಮ್ಮೊಡನೆ ಮಾತಾಡಲು, ನಿಮ್ಮನ್ನೆಲ್ಲ ಭೆಟ್ಟಿಯಾಗಲು. ಎಲ್ಲರೂ ಎಲ್ಲಿದ್ದಾರೆ?"

ಕುದುರೆ ಸವಾರ ಮಾತಾಡಲಿಲ್ಲ. ಮತ್ತೆ ಎಂಟು ಹತ್ತು ಮಂದಿ ಅಲ್ಲಿಗೆ ಬಂದು ನಿಂತರು... ತುಸುಹೊತ್ತು ಸ್ತಬ್ಧರಾಗಿದ್ದ ಬಳಿಕ ಮಹಾರಾಜರು "ದೂರ ಏಕೆ ನಿಂತಿದ್ದೀರಿ? ಹತ್ತಿರ ಬಂದು ಕುಳಿತುಕೊಳ್ಳಿ" ಎಂದರು.

ಅವರೆಲ್ಲ ಆಜ್ಞಾಧಾರಕರಂತೆ ಬಂದು ಮಹಾರಾಜರ ಎದುರು ನೆಲದ ಮೇಲೆ ಕುಳಿತರು. ಆ ಮೂವರು ಬಂದೂಕುಧಾರಿಗಳು ಮಾತ್ರ ಜಾಗರೂಕತೆಯಿಂದ ಬಂದೂಕುಗಳನ್ನು ಹಿಡಿದುಕೊಂಡು ಮೂರು ದಿಕ್ಕುಗಳಲ್ಲಿ ನಿಂತರು. ಕುದುರೆ ಸವಾರ ತನ್ನ ಸ್ಥಳದಲ್ಲಿ ನಿಶ್ಚಲನಾಗಿ ಆದರೆ ಜಾಗರೂಕನಾಗಿ ಕುಳಿತಿದ್ದ. ಆತ ಪುನಃ ಕೇಳಿದ: "ನೀನು ಯಾರು?"

"ನಾನು ಹೇಳಿದೆನಲ್ಲ, ನಾನು ವಿದ್ರೋಹಿ, ದರೋಡೆಗಾರ ಎಂದು."

"ನೀನು ಯಾವ ತಂಡದವ?"

"ಮಹಾತ್ಮಾ ಗಾಂಧೀಜಿಯ ತಂಡದವ."

ಆಮೇಲೆ ಯಾರೂ ಪ್ರಶ್ನೆ ಕೇಳಲಿಲ್ಲ. ತಂಡದ ಹೆಸರು ಕೇಳಿದೊಡನೆ ಅವರೆಲ್ಲರ ಬಾಯಿ ಬಂದಾಯಿತು. ಮಹಾರಾಜರು ಹೇಳತೊಡಗಿದರು. "ನಾನು ಮಹಾತ್ಮಾ ಗಾಂಧೀಜಿಯ ಸೈನಿಕರಲ್ಲೊಬ್ಬ. ನಿಮಗೆ ನಾನು ನಿಜವಾದ ವಿದ್ರೋಹವನ್ನು ಕಲಿಸಲು ಬಂದಿದ್ದೇನೆ. ಗಾಂಧೀಜಿ ಬ್ರಿಟಿಷರ ವಿರುದ್ಧ ವಿದ್ರೋಹವನ್ನಾರಂಭಿಸಿದ್ದಾರೆ. ನಮ್ಮೆಲ್ಲರ ದುಃಖಕ್ಕೂ ಈ ವಿದೇಶಿ ಪ್ರಭುತ್ವವೇ ಮೂಲ ಕಾರಣವಾಗಿದೆ. ಅದನ್ನೆದುರಿಸುವುದೇ ನಿಜವಾದ ವಿದ್ರೋಹವೆನಿಸುವುದು. ನಿಮ್ಮ ಈ ಚಿಕ್ಕ ವಿದ್ರೋಹದಿಂದ ಏನೂ ಸಾಧಿಸಲಾರದು. ಇಂದಿಗೆ ಎರಡು ತಿಂಗಳ ನಂತರ ಬಾರ್ಡೋಲಿಯಲ್ಲಿ ಸರಕಾರವು ಗುಂಡುಗಳನ್ನು ಹಾರಿಸಲಿದೆ. ನಿಜವಾದ ವಿದ್ರೋಹಿಗಳಾಗಬೇಕೆಂದಿದ್ದರೆ ನಡೆಯಿರಿ ಗಾಂಧೀಜಿಯ ಬಳಿ. ಅವರೊಬ್ಬರೇ ಜನರ ಕಲ್ಯಾಣವನ್ನು ಮಾಡಬಲ್ಲರು"

"ಗಾಂಧಿ ಮಹಾತ್ಮರು ಜನರ ಕಲ್ಯಾಣವನ್ನೇನು ಮಾಡಿದ್ದಾರೆ?" ಕುದುರೆ ಸವಾರ ಕೇಳಿದ.

"ನೀವು ಅಹಮದಾಬಾದಿನಲ್ಲಿ ನೋಡಲಿಲ್ಲವೆ? ಗಿರಣಿ ಮಾಲಿಕರು ಕೂಲಿಕಾರರ ಕೂಲಿ ಹೆಚ್ಚಿಸಲು ನಿರಾಕರಿಸಿದಾಗ ಗಾಂಧೀಜಿ ಉಪವಾಸ ಮಾಡಿ ಕೂಲಿಯು ಹೆಚ್ಚಾಗುವಂತೆ ಮಾಡಿದರು."

"ಇದರಲ್ಲಿ ಗಾಂಧಿ ಮಹಾತ್ಮರು ಜನರ ಕಲ್ಯಾಣವನ್ನೇನು ಮಾಡಿದರು? ಇದರಿಂದ ಜನರಿಗೆ ಹಾನಿಯೆ ಆಯಿತು. ಗಿರಣಿ ಮಾಲಿಕರು ಹೆಚ್ಚಿನ ಕೂಲಿ ಕೊಟ್ಟದ್ದನ್ನು ಬಟ್ಟೆಯ ಬೆಲೆಗೆ ಸೇರಿಸಿ ಬಟ್ಟೆಯನ್ನು ತುಟ್ಟಿ ಮಾಡುವರು."

ಮಹಾರಾಜರು ಒಂದು ಕ್ಷಣ ಸುಮ್ಮನಿದ್ದರು. ದರೋಡೆಗಾರರ ಬಾಯಿಂದ ಬಂದ ಈ ವಾದ ಅವರಿಗೆ ಅರ್ಥವಾಯಿತು. ಅನ್ನ ವಸ್ತ್ರದ ಪ್ರಶ್ನೆಯೆ ಯಾರಿಗೆ ಜೀವಾಳದ ಪ್ರಶ್ನೆಯಾಗಿದೆಯೋ ಅಂಥವರ ಅಂತರ್ವೇದನೆಯನ್ನು ಬಲ್ಲ ಮಹಾರಾಜರು ಹೇಳಿದರು. "ಗಿರಣಿ ಮಾಲಿಕರ ಬಲೆಯಲ್ಲಿ ಜನ ಸಿಗಬಾರದೆಂದು ಮಹಾತ್ಮಾಜಿಯವರು ಚರಖಾ ತೋರಿಸಿದ್ದಾರೆ. ಗಿರಣಿ ಮಾಲಿಕರು ಬೇಕಾದರೆ ಬಟ್ಟೆ ತುಟ್ಟಿ ಮಾಡಲಿ. ನಾವು ಚರಖದಲ್ಲಿ ನೂಲು ತೆಗೆದು ಬಟ್ಟೆ ನೇಯ್ದುಕೊಳ್ಳಬಲ್ಲೆವು. ಎಂಥ ಸರಳ, ಸುಲಭ, ಮಾರ್ಗ!

ನೀವು ನಡೆಯಿರಿ ಗಾಂಧೀಜಿಯ ಬಳಿಗೆ. ನಾನು ನಿಮ್ಮನ್ನು ಕರೆದೊಯ್ಯಲು ಬಂದಿದ್ದೇನೆ. ಅವರು ನಿಮಗೆಲ್ಲ ತಿಳಿಸಿ ಹೇಳುವರು. ನಾನೇನಾದರೂ ಮೋಸ ಮಾಡಿದರೆ ಸೇಡು ತೀರಿಸಿಕೊಳ್ಳಲು ಉಳಿದ ನೀವೆಲ್ಲ ಇದ್ದೇ ಇರುತ್ತೀರಿ."

"ಮಹಾತ್ಮಾ ಗಾಂಧಿಯವರು ಈ ಪ್ರದೇಶಕ್ಕೆ ಬಂದಾಗ ಅವರನ್ನು ಕಾಣುತ್ತೇವೆ, ಈಗಲ್ಲ. ಮತ್ತೆ ನಾವು ಬಡವರನ್ನೆಲ್ಲಿ ಲೂಟಿ ಮಾಡುತ್ತೇವೆ? ಬಡವರ ಮೇಲೆ ಅತ್ಯಾಚಾರ ಮಾಡುವವರು ಮತ್ತು ಶ್ರೀಮಂತರನ್ನು ಬಿಟ್ಟು ಮತ್ತಾರನ್ನು ಲೂಟಿ ಮಾಡಿದ್ದೇವೆ, ನೀವೇ ಹೇಳಿ?"

"ನಿಮಗೆ ಜನರ ನಿಜವಾದ ಕಷ್ಟಗಳೇನು ಗೊತ್ತು? ನಿಮ್ಮ ಆಗಮನದ ಸುದ್ದಿ ಕೇಳಿದೊಡನೆ ಜನ ಗಾಬರಿಯಾಗಿ ಓಡುತ್ತಾರೆ, ಅಡಗಿಕೊಳ್ಳುತ್ತಾರೆ. ಒಕ್ಕಲತನ ಅಥವಾ ಬೇರೆ ಉದ್ಯೋಗವನ್ನು ಮಾಡಲು ಅವರಿಗೆ ಆಗುವುದಿಲ್ಲ. ಸರಕಾರದ ಪೋಲೀಸರು ತೊಂದರೆ ಕೊಡುತ್ತಾರೆ. ಇವೆಲ್ಲ ಕಷ್ಟ ತೊಂದರೆಗಳು ನಿಮ್ಮ ಕಾರಣದಿಂದಲೇ ಬರುತ್ತವೆ ಎಂಬುದು ನಿಮಗೆ ತಿಳಿಯುವುದಿಲ್ಲ."

"ಹೊಟ್ಟೆಗಾಗಿ ಮಾಡಬೇಕಾಗುತ್ತದೆ."

"ಹೊಟ್ಟೆಗಾಗಿ! ನಿಮ್ಮ ಹೊಟ್ಟೆ ಪ್ರತಿ ತಿಂಗಳಿಗೆ ಅರ್ಧ ಮಣ ಧಾನ್ಯವನ್ನು ಬೇಡುತ್ತದೆ. ಆದರೆ ಅದಕ್ಕಾಗಿ ನೀವು ಸಾವಿರಾರು ರೂಪಾಯಿಗಳ ದರೋಡೆ ಹಾಕಬೇಕಾಗುವುದು. ಏಕೆಂದರೆ ನೀವು ನಿಮಗೆ ಆಶ್ರಯವೀಯುವವರಿಗೆ ಮತ್ತು ಪೋಲೀಸರಿಗೆ ಲಂಚ ಕೊಡಬೇಕಾಗುತ್ತದೆ. ಕೇವಲ ನಿಮ್ಮ ಹೊಟ್ಟೆಯನ್ನಷ್ಟೇ ತುಂಬಿಕೊಂಡರೆ ನಡೆಯುವುದಿಲ್ಲ."

ದರೋಡೆಗಾರರು ಇದಕ್ಕೇನೂ ಉತ್ತರ ಕೊಡಲಾರದಾದರು. ತುಸುಹೊತ್ತಿನ ಮೇಲೆ ಅವರಲ್ಲೊಬ್ಬ ಕೇಳಿದ. "ನಿಮ್ಮ ಹತ್ತರ ಕಾಗದ, ಪೆನ್ಸಿಲ್‌ಗಳಿವೆಯೆ?" ಧ್ವನಿಯ ಮೇಲಿಂದ ಅವನೊಬ್ಬ ತರುಣ ಎಂದು ಅನಿಸುತ್ತಿತ್ತು.

"ಇದೆ" ಎಂದರು ಮಹಾರಾಜರು.

"ಅದನ್ನು ಕೊಡುತ್ತೀರಾ? ನಾವು ನಮ್ಮ ಊರಿನ ಬ್ರಾಹ್ಮಣ, ಸೋಮಾ ಮಾಥೂರರಿಗೆ ಪತ್ರ ಬರೆಯಬೇಕಾಗಿದೆ."

"ಏನು ಬರೆಯಬೇಕೆನ್ನುತ್ತೀರಿ??

"ಐದು ನೂರು ರೂಪಾಯಿಗಳನ್ನು ಕೊಡದಿದ್ದರೆ ನಿಮ್ಮ ಕೊಲೆ ಮಾಡುತ್ತೇವೆ. ನೀವು ಈ ಪತ್ರವನ್ನು ಸೋಮಾ ಮಾಥೂರರಿಗೆ ಮುಟ್ಟಿಸಿ."

ಇದುವರೆಗೆ ನಡೆದಿದ್ದ ಮಾತುಕಥೆಗಳು ಪ್ರೇಮಪೂರ್ವಕವಾಗಿ ನಡೆದಿದ್ದವು. ಈ ಕ್ರೂರ ಮಾತನ್ನು ಕೇಳಿದೊಡನೆ ಮಹಾರಾಜರ ಧ್ವನಿ ಏರಿತು. "ಇಂಥ ಪತ್ರ ಬರೆಯಲು ನನ್ನಲ್ಲಿ ಕಾಗದವೂ ಇಲ್ಲ, ಪೆನ್ಸಿಲ್ಲೂ ಇಲ್ಲ. ಇಂಥ ಪತ್ರವನ್ನು ಒಯ್ಯುವ ದೂತನಾಗಲೂ ನಾನಿಲ್ಲಿಗೆ ಬಂದಿಲ್ಲ. ನಾನು ಊರೊಳಗೆ ಹೋಗಿ ಜನರನ್ನು ಎಚ್ಚರಿಸಿ ದರೋಡೆಗಾರರೊಡನೆ ಕಾದಾಡಲು ಹೇಳುತ್ತೇನೆ. ದರೋಡೆಗಾರರು ದಾಳಿ ಮಾಡುವ ಮೊದಲೇ ಅವರ ಮೇಲೆ ಆಕ್ರಮಣ ಮಾಡಿ ಎಂದು ಹೇಳುತ್ತೇನೆ."

ದರೋಡೆಗಾರರಲ್ಲೊಬ್ಬ ಹೇಳಿದ: "ಮಹಾರಾಜ, ಆ ಮೂರ್ಖನ ಮಾತನ್ನು ತೆಗೆದುಕೊಂಡೇನು ಮಾಡುತ್ತೀರಿ? ನಿಮಗೇನು ಹೇಳಬೇಕೊ ಹೇಳಿರಿ. ಈಗ ಹೋಗಬಯಸುವುದಾದರೆ ಹೋಗಿರಿ. ನಾವು ಜೊತೆಗೆ ಬಂದು ....."

"ಜೊತೆಗೆ ಯಾರಾದರೂ ಬೇಕಿದ್ದರೆ ಏಕಾಂಗಿಯಾಗಿ ಇಲ್ಲಿಗೆ ಯಾಕೆ ಬರುತ್ತಿದ್ದೆ? ಒಬ್ಬನೇ ಹೋಗುತ್ತೇನೆ."

ಕೆಲ ಸಮಯದ ಮೇಲೆ ಬಂದೂಕಿನ ಸಪ್ಪಳ ಕೇಳಿಸಿತು. ದರೋಡೆಗಾರರು ಆಕಾಶದಲ್ಲಿ ಗುಂಡು ಹಾರಿಸಿದ್ದರು.

ಮಹಾರಾಜರು ಮಧ್ಯರಾತ್ರಿಗೆ ಊರನ್ನು ಮುಟ್ಟಿದರು. ಜನರನ್ನು ಎಬ್ಬಿಸಿ "ದರೋಡೆಗಾರರು ಇಂದಲ್ಲ ನಾಳೆ ಬಂದಾರು. ಜಾಗರೂಕರಾಗಿರಿ. ಅವರನ್ನೆದುರಿಸಲು ಸಿದ್ಧರಾಗಿರಿ" ಎಂದರು. ಆದರೆ ದರೋಡೆಗಾರರು ಆ ಊರಿನತ್ತ ಎಂದೂ ಹೆಜ್ಜೆ ಇಡಲಿಲ್ಲ. *

# ನಗೆಮಲ್ಲಿಗೆ

ಓರ್ವ ಕವಿ ಕ್ಷೌರದಂಗಡಿ ಹೊಕ್ಕು ಕುಳಿತಿದ್ದ. ಕ್ಷೌರಿಕ ಗಡ್ಡಕ್ಕೆ ಸಾಬೂನು ಹಚ್ಚಿ ಇನ್ನೇನು ಕ್ಷೌರ ಮಾಡಬೇಕು ಎನ್ನು ವಷ್ಟರಲ್ಲಿ ಕವಿಗೆ ಸಾಲವಿತ್ತಿದ್ದ ಮಹಾನು ಭಾವ ಒಳಗೆ ಪ್ರವೇಶಿಸಿ, ಕುತ್ತಿಗೆಯ ಮೇ-ಲೆಯೇ ಕುಳಿತಂತೆ, ಪಟ್ಟು ಹಿಡಿದುಬಿಟ್ಟ. ಕ್ಷೌರಿಕನ ಮಧ್ಯಸ್ಥಿಕೆಯಿಂದಾಗಿ ಒಂದು ಒಪ್ಪಂದವಾಯಿತು. ಕ್ಷೌರವಾಗುವ ತನಕ ಆ ಮಹಾನುಭಾವ ಸುಮ್ಮನಿರಬೇಕು, ಆ ಮೇಲೆಯೇ ಕವಿ ಹಣ ಪಾವತಿಮಾಡ ಬೇಕು ಎಂದು. ಒಪ್ಪಂದವಾದುದೇ ತಡ, ಆ ಕವಿ ಗಡ್ಡಕ್ಕೆ ಹಚ್ಚಿದ್ದ ಸಾಬೂನು ಒರೆಸಿಕೊಂಡು ಅಲ್ಲಿಂದ ಪರಾರಿಯಾದ. ಮತ್ತೆ ತನ್ನ ಜೀವಮಾನವಿಡೀ ಆತ ಗಡ್ಡ ಬೋಳಿಸಲಿಲ್ಲ.

*

ಹೋಟೇಲಿನಲ್ಲಿ ಊಟ ಮುಗಿಸಿ ಮನೆಗೆ ಹೊರಟಿದ್ದರು, ರಾಯರು. ಮಳೆ ಆರಂಭವಾಯಿತು. ಸುತ್ತಲೂ ಕವಿದಿದ್ದ ಕತ್ತಲೆ ಬೇರೆ. ದಾರಿಯಲ್ಲಿ ಬರುತ್ತಿದ್ದ ಟ್ಯಾಕ್ಸಿಯೊಂದನ್ನು ಕೂಗಿ ನಿಲ್ಲಿಸಿದರು. ಅದ ರಲ್ಲಿ ಕುಳಿತು ಹೊರಟಿದ್ದರಷ್ಟೇ, ರಾಯ ರಿಗೆ ತಮ್ಮ ಕಿಸೆಯಲ್ಲಿ ಹಣವಿಲ್ಲ ಎಂಬ ವಿಚಾರ ನೆನಪಿಗೆ ಬಂತು. ಇನ್ನೇನು, ಮನೆ ಹತ್ತಿರವಾಯಿತೆನ್ನುವಾಗ ಒಂದು ಅಂಗಡಿ ಯೆದುರು ಟ್ಯಾಕ್ಸಿ ನಿಲ್ಲಿಸಿದರು ರಾಯರು. ಡ್ರೈವರನೊಡನೆ "ನೋಡಪ್ಪಾ, ಕಾರಿನ ಲ್ಲೆಲ್ಲೋ ಹತ್ತು ರೂಪಾಯಿಯದೊಂದು ನೋಟು ಬಿದ್ದುಬಿಟ್ಟಿದೆ. ಬೆಂಕಿ ಪೆಟ್ಟಿಗೆ ತಂದು ಹುಡುಕಿ ನೋಡುತ್ತೇನೆ. ಸ್ವಲ್ಪ ಇರು" ಎಂದು ಹೇಳಿ ಅಂಗಡಿಯತ್ತ ಹೊರಟರು.

ಮರುಕ್ಷಣದಲ್ಲಿಯೇ ಟ್ಯಾಕ್ಸಿ ಪರಾರಿ ಯಾಗಿತ್ತು!

*

ಪತ್ರಿಕೆಯವನೊಬ್ಬ ಜಾಹೀರಾತಿನ ಬೇಟೆಗೆ ತೊಡಗಿದ್ದ. ಓರ್ವ ಅಂಗಡಿಯಾತ ನಲ್ಲಿಗೆ ಹೋದಾಗ ಆತ ನುಡಿದ "ನೋಡಿ, ೮೦ ವರ್ಷಗಳಿಂದ ಈ ಅಂಗಡಿಯನ್ನು ನಡೆಸಿಕೊಂಡು ಬರುತ್ತಿದ್ದೇನೆ. ಆದ ಕಾರಣ ಜಾಹೀರಾತಿನ ಅಗತ್ಯವೇ ನನ ಗಿಲ್ಲ" ಆದರೆ ಪತ್ರಿಕೆಯ ಆಸಾಮಿ ಸು-ಮ್ಮಗೆ ಬಿಡುವವನಲ್ಲ. ಆತ ಪ್ರಶ್ನಿಸಿದ.

"ಓ ಅಲ್ಲಿ ಕಾಣುತ್ತಿರುವುದೇನು, ಸ್ವಾಮೀ?''

"ದೇವಾಲಯ''.

"ಎಷ್ಟು ಸಮಯವಾಯಿತು ಸ್ವಾಮೀ, ಅದು ಅಲ್ಲಿದ್ದು?''

"ಮುನ್ನೂರು ವರ್ಷಗಳಾಗಬಹುದು."

''ಮತ್ತೆ ನೋಡಿ ಸ್ವಾಮಿ, ಅವರೇಕೆ ದಿನಾ ಘಂಟೆ ಬಾರಿಸುತ್ತಾರೆ?"

*

ಸಂಗೀತ ಕಛೇರಿ ನಡೆಯುತ್ತಿತ್ತು. ಹೆಣ್ಣು ಕಂಠವೊಂದು ಹಾಡುತ್ತಿತ್ತು. ಅತಿಥಿಗಳಲ್ಲೊಬ್ಬ ಬದಿಯಲ್ಲಿದ್ದವನ ಕಿವಿ ಯಲ್ಲಿ ಉಸುರಿದ.

"ಎಂತಹ ಕರ್ಕಶ ಸ್ವರ! ಯಾರಾಕೆ?"

" ಆಕೆ ನನ್ನ ಪತ್ನಿ" ಸಿಡುಕಿನಿಂದ ಉತ್ತರಿಸಿದ ಆತ.

" ಓ, ಕ್ಷಮಿಸಿ, ಆಕೆಯದೇನು ತಪ್ಪು? ಆ ಹಾಡೇ ಹಾಗಿದೆ. ಯಾರಪ್ಪಾ ಅದನ್ನು ರಚಿಸಿದವರು?"

" ನಾನು "— ಇನ್ನಷ್ಟು ಸಿಡುಕಿನಿಂದ ಉತ್ತರಿಸಿದ ಆತ.

ಬಾಡಿಗೆಯ ಮನೆಯಲ್ಲಿರುವವನೊಬ್ಬ ನಗರದ ಹಕ್ಕಿ-ಕೀಟಗಳ ಅಂಗಡಿಗೆ ಬಂದು ನುಡಿದ—

"ಕೂಡಲೇ ನನಗೆ ೩೦,೦೦೦ ಜಿರಳೆಗಳನ್ನು ಕಳುಹಿಸಿ ಕೊಡಿ."

"ಮೂವತ್ತು ಸಾವಿರ ಜಿರಳೆಗಳೇ? ಯಾಕಪ್ಪಾ? . . ."

"ಮತ್ತೇನಿಲ್ಲ. ನಾನು ಈತನಕ ಇದ್ದ ಮನೆಯನ್ನು ಈಗ ಬಿಡಬೇಕಾಗಿದೆ. ಅದನ್ನು ನಾನು ಬರುವಾಗ ಹೇಗಿತ್ತೋ ಹಾಗೇ ಇಟ್ಟು ಹೋಗಬೇಕೆಂದು ಮನೆ ಮಾಲೀಕ ಹೇಳಿದ್ದಾನೆ."

*

ಓರ್ವ ಪೋಲೀಸ್ ಹೇಗೂ ಮಾಡಿ ಒಬ್ಬ ಕಳ್ಳನನ್ನು ಹಿಡಿದಿದ್ದ. ತನ್ನ ಈ ವಿಜಯಕ್ಕಾಗಿ ಭಾರೀ ಹೆಮ್ಮೆ ಆವನಿಗೆ. ಆದರೆ ಆ ಕಳ್ಳ ಬಲು ಚತುರ. ಆತ ಪೋಲೀಸನೊಡನೆ ಬರಲೊಪ್ಪಲಿಲ್ಲ. "ನಾನು ಆ ಹೋಟೇಲಿಗೆ ಹೋಗಿ ನನ್ನ ವಕೀಲರಿಗೆ ಸ್ಟೇಶನಿಗೆ ಬರುವಂತೆ 'ಫೋನ್' ಮಾಡಿ ಬರುತ್ತೇನೆ" ಎಂದ. ಆಗಬಹುದೆಂದು ಆ ಪೋಲೀಸ್ ಆತನನ್ನು ಹೋಗಗೊಟ್ಟ. ಆ ಕಳ್ಳ ಪರಾರಿಯಾದ.

ಆರು ತಿಂಗಳ ತರುವಾಯ ಅದೇ ಕಳ್ಳ ವಜ್ರಗಳನ್ನು ಕದ್ದು ಓಡುತ್ತಿರುವಾಗ ಅದೇ ಪೋಲೀಸನ ಕೈಯಲ್ಲಿ ಸಿಕ್ಕಿಬಿದ್ದ. ಮೊದಲಿನ ಉಪಾಯವನ್ನೇ ಹೇಳಿ ಪಾರಾಗಲು ಆತ ಹವಣಿಸಿದಾಗ ಆ ಪೋಲೀಸ್ ನುಡಿದ— "ಅಹಾ- ಈ ಸಲ ನೀನು ನನ್ನನ್ನು ಮೋಸಗೊಳಿಸಲಾಗುವುದಿಲ್ಲ. ಕೊಂಚ ಹೊತ್ತು ಈ ವಜ್ರಗಳನ್ನು ಹಿಡಿದುಕೊಂಡು ಇಲ್ಲೇ ನಿಂತಿರು. ನಾನೇ ಹೋಗಿ 'ಫೋನ್' ಮಾಡಿ ಬರುತ್ತೇನೆ."

*

ಸ್ಮಶಾನದ ಸುತ್ತಲೂ ಒಂದು ಬೇಲಿ ಹಾಕಬೇಕೆಂಬುದರ ಕುರಿತು ನಗರಸಭೆಯಲ್ಲಿ ನಿರ್ಣಯವೊಂದನ್ನು ಮಂಡಿಸಲಾಗಿತ್ತು. ಎಷ್ಟು ಜನ ಇದಕ್ಕೆ ಪರವಾಗಿರುವರೆಂದು ಕೇಳಿದ ಚೇರ್‌ಮನ್. ಒಬ್ಬನ ಹೊರತಾಗಿ ಉಳಿದವರೆಲ್ಲರೂ ಎದ್ದು ನಿಂತರು.

"ನೀವೇಕೆ ಇದನ್ನು ವಿರೋಧಿಸುತ್ತೀರಿ?" ಚೇರ್‌ಮನ್ ಕೇಳಿದ.

"ಕಾರಣವಿಷ್ಟೇ. ಇದು ಅರ್ಥವಿಲ್ಲದ್ದು. ಸ್ಮಶಾನದಿಂದ ಯಾರೂ ಹೊರಗೆ ಓಡಿ ಹೋಗುವುದಿಲ್ಲ. ಹೊರಗಿನವರಾರೂ ಒಳಗೆ ಹೋಗಲಿಚ್ಛಿಸುವುದಿಲ್ಲ. ಅಂದ ಮೇಲೆ ಬೇಲಿ ಯಾಕೆ ಬೇಕು?"

*

ಹುಚ್ಚಾಸ್ಪತ್ರೆಯನ್ನು ಕಾಲೇಜೆಂದು ಭಾವಿಸಿದ ಓರ್ವ ಆಗಂತುಕ ತನ್ನ ತಪ್ಪು ತಿಳಿದುಕೊಂಡ ನಂತರ ಅಲ್ಲಿನ ಕಾವಲುಗಾರನೊಡನೆ ನುಡಿದ:

"ನೋಡಹೋದರೆ ಕಾಲೇಜಿಗೂ ಹುಚ್ಚರಾಸ್ಪತ್ರೆಗೂ ಹೆಚ್ಚೇನೂ ವ್ಯತ್ಯಾಸವಿಲ್ಲ, ಅಲ್ಲವೆ?"

"ಛೆ, ಛೆ! ಹಾಗೇನಿಲ್ಲ.... ಇಲ್ಲಿ ಆಸ್ಪತ್ರೆಯನ್ನು ಬಿಟ್ಟುಹೋಗುವವರು ಏನಾದರೂ ಸುಧಾರಣೆ ತೋರಿಸಿಯೇ ಹೋಗುತ್ತಾರೆ" ಎಂದ ಆತ.

*

"ಇವತ್ತು ನಮ್ಮ ಕೆಲಸದಾಕೆಯ ರಜತ ಮಹೋತ್ಸವ!"

"ಆಕೆ ನಿಮ್ಮಲ್ಲಿಗೆ ಬಂದು ಇಪ್ಪತ್ತೈದು ವರ್ಷಗಳಾದುವೇ?"

"ಛೆ! ಇಲ್ಲ-ಈಕೆ ನಮ್ಮ ಇಪ್ಪತ್ತೈದನೇ ಕೆಲಸದಾಕೆ."

ಸಂಗ್ರಹ: ಎ. ಶಂಕರನಾರಾಯಣ ಹೆಬ್ಬಾರ

*



# ನೀವು ನೆನಪಿನ ಹೊರೆ ಹೊತ್ತಿದ್ದೀರಾ?

ಜ. ಲಾ. ಶ್ರೀವಾಸ್ತವ

---

**ಮರೆಯುವ ಕಲೆಯನ್ನು ಕಲಿಯು ದಾತನ ಮನಸಿನ ಬೆನ್ನು ಬಾಗುತ್ತದೆ**

---

ಸ್ಮೃತಿ ಅಥವಾ ಸ್ಮರಣ ಶಕ್ತಿ ಮನುಷ್ಯನಿಗೆ ಅಗತ್ಯವೆಂದು ಸಾಮಾನ್ಯವಾಗಿ ಭಾವನೆಯಿದೆ. ಆದರೆ ಸ್ಮೃತಿಯಂತೆ ವಿಸ್ಮೃತಿಯೂ ಶ್ರೇಷ್ಠವಾಗಿರುತ್ತದೆಂಬ ಅಂಶವನ್ನು ತಿಳಿದವರು ಬಹಳ ಕಡಿಮೆ. ಸ್ಮೃತಿಯು ಸಾಕಷ್ಟು ಪ್ರಮಾಣದಲ್ಲಿ ಎಲ್ಲರಲ್ಲಿಯೂ ಇರುತ್ತದೆ. ಆದರೆ ಸರಿಯಾದ ರೀತಿಯಲ್ಲಿ ಮರೆಯಬಲ್ಲವರು ಮಾತ್ರ ಕೆಲವರೇ ಇರುತ್ತಾರೆ.

ಸ್ವಲ್ಪ ಹೊತ್ತು ನಿಮ್ಮ ಸ್ಮೃತಿಭಂಡಾರವನ್ನು ಬಿಚ್ಚಿ ನೋಡಿರಿ. ಏನು ಕಾಣುವುದು? ಅಲ್ಲಿ ಅಮೂಲ್ಯ ವಸ್ತುಗಳನ್ನು ನೀವು ಸಂಗ್ರಹಿಸಿದ್ದೀರಿ. ಆದರೆ ಅಲ್ಲಿಯೆ ಹತ್ತಿರದಲ್ಲಿ ಮುರುಕು ಸಾಮಾನುಗಳ ರಾಶಿಯೂ ಒಂದು ಬಿದ್ದಿದೆಯಲ್ಲವೆ? ಇಂಥ ರಾಶಿಯನ್ನು ಹಳೆಯ ಸಾಮಾನುಗಳನ್ನು ಮಾರುವವನ ಬಳಿಯಲ್ಲೂ ನೋಡಿರಲಾರಿರಿ. ಐದಾರು ತಿಂಗಳ ಹಿಂದೆ ಯಾರೊ ನಿಮಗೆ ಅವಮಾನ ಮಾಡಿರುತ್ತಾರೆ. ಜೇಬಿನೊಳಗಿದ್ದ ಹತ್ತು ಹತ್ತರ ನಾಲ್ಕು ನೋಟುಗಳನ್ನು ಎಲ್ಲಿಯೋ ದಾರಿಯಲ್ಲಿ ಕಳೆದುಕೊಂಡಿದ್ದೀರಿ. ನಾಲ್ಕಾರು ವರ್ಷಗಳ ಹಿಂದೆ ನಿಮ್ಮ ಮಗು ಮರಣಾಸನ್ನವಾಗಿತ್ತು. ಇದೇ ಒಂದೂವರೆ ವರ್ಷದ ಹಿಂದೆ ನಿಮ್ಮ ನೆಂಟರೊಬ್ಬರು ತೀರಿಕೊಂಡರು. ನಿಮ್ಮ ತಾಯಿ ಮತ್ತು ನಿಮ್ಮ ಪತ್ನಿಯ ನಡುವೆ ಪ್ರೇಮ ಸಂಬಂಧವಿಲ್ಲ. ಈ ಅಥವಾ ಇಂಥ ಎಷ್ಟೋ ಸಂಗತಿಗಳ ದುಃಖ, ತಾಪ, ಚಿಂತೆ ಮೊದಲಾದವುಗಳಿಂದ ನೀವು ಬೆಂಡಾಗಬಹುದು.

ನೀವು ಇನ್ನೂ ಹೆಕ್ಕಿ ನೋಡಿದರೆ ಈ ಅನಾವಶ್ಯಕ ಸಂಗ್ರಹದಲ್ಲಿ ಹಲವು ಮಹತ್ವದ ವಸ್ತುಗಳೂ ಹಾಳಾಗುತ್ತಿವೆ ಎಂದು ನಿಮಗೆ ತೋರದಿರದು.

ಈ ವ್ಯರ್ಥದ ದುಃಖ ಕಷ್ಟ ತಾಪಗಳ ರಾಶಿ ಕೂಡಿರದಿದ್ದರೆ ನಿಮ್ಮ ಎಷ್ಟೋ ಅಸಫಲ ಯೋಜನೆಗಳು ಸಫಲಗೊಳ್ಳಬಹುದಾಗಿತ್ತು.

"ಏನು ಮಾಡಬೇಕು? ಬಹಳ ಬೇಜಾರಾಗಿದೆ." "ಇತ್ತೀಚೆಗೆ ವ್ಯವಸಾಯದ ಜಂಜಡದಲ್ಲಿ ಪೂರಾ ಸಿಕ್ಕಿಕೊಂಡಿದ್ದೇನೆ." ಇಂಥ ಉದ್ಗಾರಗಳು ಹೊರಬೀಳಬೇಕಾದರೆ ವ್ಯಕ್ತಿಯ ಸ್ಮೃತಿಕೋಶದಲ್ಲಿ ಮೇಲೆ ಹೇಳಿದಂಥ ಕ್ಷುದ್ರ ಸಂಗತಿಗಳು ಕೂಡಿ ಬಿದ್ದಿರುವುದೇ ಕಾರಣ.

ಇವರು ಒಂದು ವೇಳೆ ವಿಸ್ಮೃತಿಯ ಮಹತ್ವವನ್ನು ಅರಿತವರಾಗಿದ್ದರೆ ಹೀಗೆ ಆಗುತ್ತಿರಲಿಲ್ಲ.

ಮನುಷ್ಯ ಜೀವನದಲ್ಲಿ ಸ್ಮೃತಿ ಅವಶ್ಯಕ ವಸ್ತುವಾಗಿರುವಂತೆ ವಿಸ್ಮೃತಿಯೂ ಒಂದು ವರ

ದ್ದಾನವಾಗಿದೆ. ಹಳೇ ದುಃಖವಾರ್ತೆಯೊಂದನ್ನು ಕೊಂಚ ಕಾಲ ನೆನೆಯಿರಿ. ಏನಾಗುವುದು? ಇಂದು ನಿಮ್ಮ ಹೃದಯ ಹಿಂಡಿದಂತಾಗುವುದಲ್ಲವೆ? ಒಂದು ವೇಳೆ ಇದನ್ನು ನೀವು ಅಂದಿನಿಂದ ಇಂದಿಗೂ ಸ್ಮರಣೆಯಲ್ಲಿ ಜತನವಾಗಿಟ್ಟುಕೊಂಡು ಬರುತ್ತಿದ್ದಿರೆಂದರೆ ಏನಾಗುತ್ತಿತ್ತು ಎಂಬುದನ್ನು ಸ್ವಲ್ಪ ಕಾಲ ಯೋಚಿಸಿರಿ. ಆಗ ವಿಸ್ಮೃತಿದೇವಿಯ ಕೃಪೆಯಿಂದಲೇ ನೀವು ಈ ಶೋಕದಿಂದ ದೂರಾಗಿರುವಿರೆಂದು ನಿಮಗರ್ಥವಾಗುವುದು. ಅಂದಾಗ ವಿಸ್ಮೃತಿ ಉಪಕಾರಕವೆಂದೇ ಆಗಲಿಲ್ಲವೆ?

ಪ್ರತಿನಿತ್ಯದ ಅನೇಕ ಘಟನೆಗಳನ್ನು ನೆನಪಿನಲ್ಲಿಡುವುದು ಅಗತ್ಯದ್ದಿರುವಂತೆ ಅನಾವಶ್ಯಕ ದುಃಖದಾಯಕ ಸಂಗತಿಗಳನ್ನು ಮರೆತುಬಿಡುವುದೂ ಅಷ್ಟೇ ಅಗತ್ಯದ್ದಾಗಿದೆ.

ಪ್ರತಿನಿತ್ಯ ಅನುಭವಿಸುವ ದುಃಖಪೂರ್ಣ ಘಟನೆಗಳು, ಪರಿಚಿತರ ಕೃತಘ್ನತೆ, ಅಪ್ರಿಯ ಪ್ರಸಂಗ, ತಕರಾರುಗಳು ಇವೆಲ್ಲ ನಿಜವಾಗಿಯೂ ಮರೆಯಬೇಕಾದುವೇ. ಆದರೆ ನಮ್ಮ ವ್ಯವಹಾರ ಇದರ ವಿರುದ್ಧವಾಗಿಯೇ ಇರುತ್ತದೆ. ಮಿತ್ರನೊಬ್ಬ ವಿಶ್ವಾಸಘಾತ ಮಾಡುತ್ತಾನೆ. ಅದನ್ನು ನಾವು ದಿನಗಳು, ತಿಂಗಳುಗಳು ವರ್ಷಗಳ ವರೆಗೂ ನೆನಪಿನಲ್ಲಿಡುತ್ತೇವೆ. ಇದರಿಂದ ಸ್ಮೃತಿಕೋಶ ದುಃಖತಾಪಗಳಿಂದ ತುಂಬಿ ಹೋಗಿ ಎಷ್ಟೋ ಒಳ್ಳೇ ವಿಚಾರಗಳು ಅಲ್ಲಿ ಬರದೇ ಹೋಗುವವು.

ಮಿತ್ರರ ಪ್ರೇಮಪೂರ್ಣ ವ್ಯವಹಾರ, ಚಿಕ್ಕ ಬಾಲಕರ ತೊದಲ ಮಾತುಗಳು, ಯಾರೊ ಅಪರಿಚಿತರ ಅಯಾಚಿತ ಸ್ನೇಹ ಮುಂತಾದ ಒಳ್ಳೇ ಸಂಗತಿಗಳು ನಮ್ಮ ಸ್ಮೃತಿಕೋಶದಲ್ಲಿ ಸುರಕ್ಷಿತವಾಗುಳಿಯಬೇಕಾದರೆ ಅದು ಮೊದಲೇ ಘೃಣಾಸ್ಪದ ವಿಚಾರಗಳಿಂದ ತುಂಬಿರಬಾರದು.

ಬೇಡಾದ ಸಂಗತಿಯನ್ನು ಸ್ಮೃತಿಯಲ್ಲಿ ತುಂಬಿಕೊಂಡು ಜೀವನವನ್ನು ದುಃಖಮಯಗೊಳಿಸಿ, ಅದಕ್ಕೆ ಅದೋ ಇದೋ ಇನ್ನಾವುದೋ ಕಾರಣವೆಂದು ನಿರ್ದೇಶಿಸುತ್ತ ಇರುವವರು ಎಷ್ಟೋ ಜನರಿದ್ದಾರೆ. ಲಕ್ಷ್ಯಕೊಟ್ಟು ನೋಡಿರಿ. ನಿಮ್ಮ ಸುತ್ತಮುತ್ತೇ ಅವರಿದ್ದಾರೆ. ಸ್ವಲ್ಪ ಹೊತ್ತು ಅವರು ತಾಪದಾಯಕ ವಿಚಾರಗಳನ್ನು ನೆನಪಿನಿಂದ ಅಳಿಸಿಬಿಟ್ಟರೆ ಅವರ ಚಿತ್ತದಲ್ಲಿ ಸುಖ, ಶಾಂತಿ, ಹರ್ಷದಾಯಕ ವಿಚಾರಗಳ ಉದಯವಾಗಬಹುದು.

ಅಸ್ವಾಸ್ಥ್ಯಕರ, ಅಸುಂದರ, ಅಶಾಂತಿಕರ ಭಾವಗಳಿಗೆ ನಿಮ್ಮ ಸ್ಮೃತಿಯಲ್ಲಿ ಸ್ಥಾನಕೊಡದಿರಿ. ಅವನ್ನು ಮರೆಯಿರಿ ಅಂದರೆ ನಿಮ್ಮ ಜೀವನ ಸುಖಶಾಂತಿಗಳಿಂದ ತುಂಬುವುದು. ಅದರ ಬದಲು ನೀವು ಇವಕ್ಕೆ ಆಶ್ರಯಕೊಟ್ಟಿರಾದರೆ ನಿಮ್ಮ ಜೀವನ ಶೋಕಪೂರ್ಣವಾಗಿ ಬೇಗನೇ ನೀವು ವೃದ್ಧರಾಗುವಿರಿ. ಮೃತ್ಯು ಬೇಗನೆ ನಿಮ ಬಾಗಿಲಿಗೆ ಬರುವುದು.

ಮರಣದ ದಿನ ಹುಟ್ಟಿದಾಗಲೇ ನಿಶ್ಚಯಿಸಲ್ಪಟ್ಟಿರುತ್ತದೆ ಎಂಬ ಕಲ್ಪನೆ ಭ್ರಮೆ ಎಂದು ಈಗಿನ ವೈಜ್ಞಾನಿಕ ಯುಗದಲ್ಲಿ ಸಿದ್ಧವಾಗಿದೆ. ಸಾವು ಏಕೆ ಬರುತ್ತದೆಂಬುದನ್ನೀಗ ವೈಜ್ಞಾನಿಕರು ಕಂಡುಹಿಡಿದಿದ್ದಾರೆ. (ಅದನ್ನು ಹೋಗಲಾಡಿಸಲವರು ಸಮರ್ಥರಾಗಿರಲಿಕ್ಕಿಲ್ಲ. ಆದರೇನಂತೆ?) ನಮ್ಮ ಶರೀರದಲ್ಲಿ ಒಂದು ಯಂತ್ರವಿದೆ. ಅದು ನಮ್ಮ ಶೋಕ, ಬೇಸರ, ತಾಪಗಳ ಲೆಕ್ಕವಿಡುತ್ತದೆ. ನಿಶ್ಚಿತ ಪ್ರಮಾಣಕ್ಕೆ ಮೀರಿ ಈ ಲೆಕ್ಕ ಬಂತೆಂದರೆ ಅದು ಇನ್ನೊಂದು ಯಂತ್ರಕ್ಕೆ ಸೂಚನೆ ಕೊಡುತ್ತದೆ. ಈ ಎರಡನೇ ಯಂತ್ರ ಆಗ ಶರೀರದಲ್ಲಿ ವೃದ್ಧಾಪ್ಯದ ಲಕ್ಷಣಗಳನ್ನು ಮೂಡಿಸಲು ಪ್ರಾರಂಭಿಸುತ್ತದೆ. ನಾವು ವೃದ್ಧರಾಗಿ ಕಡೆಗೆ ಸತ್ತುಹೋಗುತ್ತೇವೆ.

ನಮ್ಮ ನಿತ್ಯ ಜೀವನದಲ್ಲೂ ನಾವು ಈ ವೈಜ್ಞಾನಿಕ ಸತ್ಯವನ್ನು ಕಾಣಬಹುದು. ಚಿಂತೆ, ದುಃಖಗಳಿಂದ ಯಾರ ಜೀವನ ತುಂಬಿರುವುದೊ ಅವರು ೪೦—೫೦ ವರ್ಷಕ್ಕಾಗಲೇ ಮುದುಕರಾಗುತ್ತಾರೆ. ಮತ್ತು ಸ್ವಸ್ಥ ಶಾಂತ ಜೀವನವುಳ್ಳವರು ೬೦ ವರ್ಷ ಕಳೆದರೂ ಇನ್ನೂ ಪ್ರಾಯ

ದವರಾಗಿ ತೋರುತ್ತಾರೆ.

ಇದರ ಮೇಲಿಂದ ದೀರ್ಘಾಯುಗಳಾಗಬೇಕಾಗಿದ್ದರೆ ನಾವು ಈ ಯಂತ್ರದ ಮೇಲೆ ನಮ್ಮ ತಾಪತ್ರಯಗಳ ಪ್ರಭಾವ ಬೀಳದಂತೆ ನೋಡಿಕೊಳ್ಳಬೇಕೆಂದಾಯಿತು. ಹೀಗೆ ಮಾಡಲು ನಾವು ನಮ್ಮ ಸ್ಮೃತಿಯನ್ನು ನಮ್ಮ ಕೈಯಲ್ಲಿಟ್ಟುಕೊಳ್ಳಬೇಕು. ನಮ್ಮ ಬೇಸರವನ್ನು ವಿಸ್ಮೃತಿಗೊಪ್ಪಿಸಬೇಕು. ಸ್ಮೃತಿಯನ್ನು ದಾಟಿಯೆ ಈ ಯಂತ್ರಕ್ಕೆ ಹೋಗಲು ದಾರಿ ಇದೆ. ಆದ್ದರಿಂದ ಅವನು ಸ್ಮೃತಿಯಿಂದ ದೂರವಿಡುವುದೆಂದರೇನೇ ವೃದ್ಧಾಪ್ಯವನ್ನು ಮುಂತಳ್ಳಿದಂತೆ.

ವಿಸ್ಮೃತಿಯು ಒಳ್ಳೆಯದಿರಬಹುದಾದರೂ ಅದನ್ನು ಅಭ್ಯಸಿಸಲು ಹಿಂಜರಿಯುವವರು ಬಹು ಜನರಿರುವರು. ಏಕೆಂದರೆ ವಿಸ್ಮೃತಿಯನ್ನು ಅಭ್ಯಸಿಸುವುದರಿಂದ ಸ್ಮೃತಿಗೆ ಎಂದೂ ಮಾಯದಂಥ ಪೆಟ್ಟುಬೀಳಬಹುದು ಎಂದವರು ತಿಳಿದಿರುತ್ತಾರೆ. ಆದರೆ ವಿಸ್ಮೃತಿ ಎಂದರೆ ಸ್ಮೃತಿಯ ಅಳಿವಲ್ಲ. ವಿಸ್ಮೃತಿಯು ಸ್ಮೃತಿಯ ಸಹಾಯಕ. ಇದು ಅನಾವಶ್ಯಕ ನೋವು ವೇದನೆಗಳನ್ನು ನುಂಗಿ ಸ್ಮೃತಿಯ ಭಾರವನ್ನು ಇಳಿಸುತ್ತದೆ. ಪ್ರಾಪ್ತ ಸೂಚನೆಗಳಲ್ಲಿ ಅವಶ್ಯಕವಾದುವನ್ನಷ್ಟೇ ಇಟ್ಟುಕೊಳ್ಳಬಲ್ಲ ಸ್ಮೃತಿಯೆ ಮೇಲುಮಟ್ಟದ್ದು. ಈ ವಿಷಯದಲ್ಲಿ ವಿಸ್ಮೃತಿ ಸ್ಮೃತಿಗೆ ಸಹಾಯಕವಾಗಿರುತ್ತದೆ

ಚಿಕ್ಕ ಚಿಕ್ಕ ಸಂಗತಿಗಳನ್ನು ಮರೆತೇ ನಾವು ದೊಡ್ಡ ದೊಡ್ಡ ಸಂಗತಿಗಳನ್ನು ನೆನಪಿನಲ್ಲಿಡುತ್ತೇವೆಂಬುದನ್ನು ಮರೆಯಬಾರದು. ಯಾರದೊ ಪತ್ತೆ, ಫೋನ್ ನಂಬರು, ದುಡ್ಡಿನ ಲೆಕ್ಕ ಮುಂತಾದವನ್ನು ಚಿಕ್ಕ ಚಿಕ್ಕ ನೋಟ್‌ಬುಕ್ಕುಗಳಲ್ಲಿ ಬರೆದಿಟ್ಟುಕೊಳ್ಳಬೇಕು. ಏಕೆಂದರೆ ನಿಮ್ಮ ಸ್ಮೃತಿಕೋಶವೆಂದರೇನೂ ವ್ಯಾಪಾರಿಗಳ ಲೆಕ್ಕದ ಪುಸ್ತಕವಲ್ಲ. ಅದನ್ನು ಇಂಥ ತುಚ್ಛ ಸಂಗತಿಗಳಿಂದ ದೂರವಿಡಿ. ಸ್ಮೃತಿಯಲ್ಲಿಡಬೇಕಾದ ವಸ್ತುಗಳು ಮಹತ್ವದವಿರಬೇಕು.

ನೆನಪಿನಲ್ಲಿಟ್ಟುಕೊಳ್ಳುವ ಅಭ್ಯಾಸಕ್ಕೆ ಯಾವ ರೀತಿ ಕೆಲ ನಿಯಮಗಳು ಇವೆಯೋ ಹಾಗೇ ವಿಸ್ಮೃತಿಯನ್ನು ಅಭ್ಯಾಸಮಾಡಲು ಹಲವು ನಿಯಮಗಳಿವೆ. ಅವನ್ನು ಅನುಸರಿಸಿದರೆ ನೀವು ಅನವಶ್ಯಕ ಸಂಗತಿಗಳನ್ನು ಬೇಗನೆ ಮರೆಯುವಿರಿ.

ಒಂದು ವಸು ಮೊಟ್ಟಮೊದಲು ನಿಮ್ಮ ಎದುರು ಬಂದಾಗ ನೀವು ಅದನ್ನು ನಿಟ್ಟಿಸಿ ನೋಡುವುದರಿಂದ ಅದು ನಿಮ್ಮ ಸ್ಮೃತಿಯಲ್ಲಿ ಅಚ್ಚಳಿಯದಂತೆ ಉಳಿಯುತ್ತದೆ. ಇನ್ನು ತದ್ವಿರುದ್ಧ ನಿಮ್ಮ ಮುಂದೆ ಬಂದ ಸಂಗತಿ ಅನವಶ್ಯಕವೆಂದು ನಿಮಗನಿಸಿದರೆ ಆಗ ನೀವು ಅದರತ್ತ ಗಮನ ಕೊಡಬೇಡಿರಿ. ಕೆಲ ಹೊತ್ತಿನ ಮೇಲೆ ಅದು ನಿಮ್ಮ ಸ್ಮೃತಿಯಿಂದ ತೊಲಗಿಬಿಟ್ಟಿರುತ್ತದೆ.

ಶುಭದರ್ಶನವನ್ನೇ ತನ್ನ ಆದರ್ಶವಾಗಿಟ್ಟುಕೊಂಡವರೊಬ್ಬರು ನನಗೆ ಗೊತ್ತು. ಅವರು ಯಾರ ತಪ್ಪನ್ನು ತಾವೆಣಿಸುವುದೂ ಇಲ್ಲ, ಇನ್ನೊಬ್ಬರು ಹೇಳುವುದನ್ನು ಕೇಳುವುದೂ ಇಲ್ಲ. ಮಿತ್ರಪರಿವಾರದಲ್ಲಿ ನಿಂದೆಯ ವಿಷಯ ಬಂದರೆ ಅಲ್ಲಿದ್ದೂ ಆ ಮಾತಿನತ್ತ ಲಕ್ಷವಿಲ್ಲದಂತೆ ಇವರು ಇರುತ್ತಾರೆ. ಉದಾಹರಣೆಗೆ ಒಂದು ಅನುಭವ ಹೇಳಬಹುದು.

ಒಬ್ಬರನ್ನು ನಿಂದಿಸಿ ಇವರಿಂದ ಆ ಮಾತಿಗೆ ಹೌದೆನ್ನಿಸಿಕೊಳ್ಳಬೇಕೆಂದು ಒಮ್ಮೆ ಒಬ್ಬ ಮಿತ್ರರು ಅವರ ಹತ್ತಿರ, "ಆತ ತಾನು ಕಳ್ಳ ವ್ಯಾಪಾರ ಮಾಡಿ ಸುಂಕ ತಪ್ಪಿಸುವೆನೆಂದೂ ಸುಂಕದವರು ತನಗೆ ಇದರಲ್ಲಿ ನೆರವಾಗುವರೆಂದೂ ಹೇಳಿದಾಗ ನೀವೂ ಅಲ್ಲಿದ್ದಿರಲ್ಲ!" ಎಂದು ಕೇಳಿದರು

ಆಗ ಇವರು ಹೇಳಿದರು: "ಇದ್ದೆ. ಆದರೆ ನನ್ನ ಲಕ್ಷ್ಯವಿರಲಿಲ್ಲ. ನಾನು ಹೊರಗೆ ಆಡುತ್ತಿದ್ದ ಹುಡುಗರನ್ನು ನೋಡುತ್ತಿದ್ದೆ" ಎಂದು. ಹೀಗೆ ಹೇಳಿದ್ದನ್ನು ಕೇಳಿ ಉಳಿದವರು ಎಂಥ ವಿಚಿತ್ರ ಆಸಾಮಿ ಎಂದು ನಕ್ಕಿದ್ದರು. (ಆದರೂ ಎದುರಿಗಿಲ್ಲದ ಇನ್ನೊಬ್ಬರನ್ನು ನಿಂದಿಸಿ ಕೇಳು

ವವರು ವಿಚಿತ್ರ, ಅಶಿಷ್ಟ ವ್ಯಕ್ತಿಗಳೊ ಅಥವಾ ಅಂಥ ಮಾತನ್ನು ಗಮನಿಸದೇ ಮಕ್ಕಳಾಟ ನೋಡುತ್ತಿದ್ದ ಇವರು ಅಶಿಷ್ಟರೊ ಎಂಬುದು ವಿಚಾರಣೀಯವಾಗಿದೆ.)

ಈ ರೀತಿ ತನ್ನ ಲಕ್ಷ್ಯವನ್ನು ಬೇರೆ ಕಡೆ ತಿರುಗಿಸಿ ಯಾವ ಮಾತನ್ನಾದರೂ ನಾವು ಮರೆಯಲು ಸಮರ್ಥರಾಗಬಲ್ಲೆವು.

ಮರೆಯುವ ಇನ್ನೊಂದು ಬಗೆ: ಒಂದು ಮಾತನ್ನು ನಿಮಗೆ ಮರೆಯಬೇಕಾಗಿದೆಯಲ್ಲವೆ? ಹಾಗಾದರೆ ಅದರ ಪುನರುಚ್ಚಾರ ಮಾಡಬೇಡಿರಿ. ಮನಸ್ಸಿನಲ್ಲೂ ಪುನಃ ತರಬೇಡಿರಿ. ಒಂದು ಸಂಗತಿ ಮರೆಯಬೇಕೆಂದರೆ ಪೂರ್ಣತಯಾ ಮರೆತುಬಿಡಬೇಕು. ಹಲವರು ತಿರುತಿರುಗಿ ಮರೆಯಬಯಸುತ್ತಾರೆ. ಅಂದರೇನು? ಅದನ್ನು ಪುನಃ ಪುನಃ ನೆನಸಿಕೊಂಡಿರುತ್ತಾರೆಂದರ್ಥ. ಏಕೆಂದರೆ ಮರೆಯಬೇಕೆಂದಾಗ ತಿಳಿಯದಂತೆ ತಾವೇ ಪುನಃ ಆ ಮಾತನ್ನು ತಮ್ಮ ಸ್ಮೃತಿ ಪಟಲದ ಮೇಲೆ ಅವರು ತಂದಿರುತ್ತಾರೆ. ಇದರಿಂದ ಆ ಮಾತಿನ ಪ್ರತಿಕ್ರಿಯೆ ಪುನಃ ಪುನಃ ಮನಸ್ಸಿನ ಮೇಲೆ ಆಗತೊಡಗುತ್ತದೆ. ಫಲಸ್ವರೂಪವಾಗಿ ಮರೆಯಬೇಕಾದ್ದು ಸ್ಮರಣೆಯಲ್ಲಿ ಗಟ್ಟಿಯಾಗಿ ಕೂತುಬಿಡುತ್ತದೆ. ಆಗ ನೀವು ಅದನ್ನು ಮರೆಯಲೆತ್ನಿಸದೆ ಆ ಮಾತನ್ನು ಬಿಟ್ಟು ಬೇರೆ ಯಾವುದಾದರೂ ವಿಚಾರದಲ್ಲಿ ತೊಡಗಬೇಕು.

ಇನ್ನೊಂದು ಮಹತ್ವದ ಮಾತು. ಒಂದು ಮಾತು ನೆನಪುಳಿಯಬೇಕಾದರೆ ಅದರಲ್ಲಿ ನಮಗೆ ಅಭಿರುಚಿ ಇರಬೇಕಾಗುತ್ತದೆ. ನಿಮ್ಮ ಅಭಿರುಚಿಯ ವಿಷಯ ನಿಮ್ಮ ಚಿತ್ತದಲ್ಲಿ ಬೇಗ ಮೂಡುತ್ತದೆ. ಹಾಗೂ ಬೇಗ ಅಳಿಯುವುದಿಲ್ಲ.

ಎಲ್ಲಿಯ ವರೆಗೆ ನೀವು ನಿಮ್ಮ ರುಚಿಯನ್ನು ಸುಧಾರಿಸಿಕೊಂಡು ದೋಷದರ್ಶನ, ನಿಂದೆ, ನಿರಾಶೆ ಮೊದಲಾದವುಗಳನ್ನು ನಿಮ್ಮ ತಲೆಯಲ್ಲಿ ತರುವುದನ್ನು ನಿಲ್ಲಿಸುವುದಿಲ್ಲವೋ ಅಲ್ಲಿಯ ವರೆಗೆ ನೀವು ಇವನ್ನು ಮರೆಯಲಾರಿರಿ. ನಿಮ್ಮ ಎಲ್ಲ ಯತ್ನಗಳು ವಿಫಲವಾಗುವವು. ಮೆದುಳಿನ ಎಷ್ಟೋ ಅದ್ಭುತ ಶಕ್ತಿಗಳಲ್ಲಿ ಸಮಾನ ಭಾವನೆಗಳನ್ನು ಸ್ವೀಕರಿಸುವುದೂ ಒಂದು. ಆದ್ದರಿಂದ ನಿಮ್ಮ ಮೆದುಳಿನಲ್ಲಿ ನೀವು ಎಂಥ ವಿಚಾರಗಳನ್ನು ತುಂಬುವಿರೊ ಅಂಥ ಸಂಗತಿಗಳನ್ನದು ಸ್ವೀಕರಿಸುತ್ತದೆ.

ಆದ್ದರಿಂದ ಯಾವ ವಿಷಯಗಳನ್ನು ನೀವು ಮರೆಯಬಯಸುವಿರೋ ಅಂಥ ವಿಷಯಗಳಲ್ಲಿ ನಿಮ್ಮ ರುಚಿ ಇಲ್ಲದಂತಾಗಬೇಕಾದ್ದು ಇಷ್ಟ. ಮತ್ತು ನಿಮ್ಮ ಲಕ್ಷ್ಯವು ಒಳ್ಳೇ ವಿಚಾರ, ಆಶಾವಾದಿ ದೃಷ್ಟಿಕೋಣ, ಹರ್ಷ, ಸುಖ, ಶಾಂತಿ, ಸಮೃದ್ಧಿ, ಸಾಸ್ಥ್ಯ, ಸಫಲತೆ ಮುಂತಾದವುಗಳ ಮೇಲೆ ಕೇಂದ್ರೀಕೃತವಾಗಬೇಕು. *



## ನಿರುಪಯುಕ್ತ ಮಾಹಿತಿ

ತುರ್ಕಸ್ಥಾನದಲ್ಲಿ ಓರ್ವ ಕುಳ್ಳನಿದ್ದ. ೩೬ ವರ್ಷ ಪ್ರಾಯದಲ್ಲಿ ಆತನ ಎತ್ತರ ಕೇವಲ ೧೪ ಇಂಚು.

* * *

ಕುದುರೆ ತನ್ನ ಬೆನ್ನಮೇಲೆ ೧೫೦೦ ಪೌಂಡ್ ಹಾಗೂ ಒಂಟೆ ೬೦೦ ಪೌಂಡ್‌ಗಳ ವರೆಗೆ ಭಾರವನ್ನು ಹೊರಬಲ್ಲುದು.

* * *

ಪುರುಷರಿಗಿಂತಲೂ ಸ್ತ್ರೀಯರಲ್ಲಿ ಘ್ರಾಣಶಕ್ತಿ ಅಧಿಕವಾಗಿದೆ.

—ಸಂ.: ಚಕ್ರಧಾರಿ



# ಹಜರತ್ ಉಮರ್ : ಇಸ್ಲಾಂ ಪ್ರಭುತ್ವದ ವಿಶ್ವವಿಜಯಿ

ಮೂಲ : ಜಹೂರ್ ಬಕ್ಷ
ಅನುವಾದ : ಬಳ್ಕೂರು ಸುಬ್ರಾಯ ಅಡಿಗ

ಹಜರತ್ ಮುಹಮ್ಮದರು ಇಸ್ಲಾಮ್ ಗಣತಂತ್ರದ ಜನ್ಮದಾತರಾಗಿದ್ದರೆ ಹಜರತ್ ಉಮರ್ ಅದರ ಜೀವನದಾತರು. ಖಲೀಫರಾಗುತ್ತಲೇ ಅವರು ಗಣತಂತ್ರದ ದೃಷ್ಟಿಕೋಣವನ್ನು ಸಾಕಷ್ಟು ವಿಕಾಸಗೊಳಿಸಿದ್ದರು. ಅವರ ಶೌರ್ಯ ಸಾಹಸಗಳಿಂದಲೇ ಮೊದಲು ಅರೇಬಿಯಕ್ಕಷ್ಟೇ ಮಿತವಾಗಿದ್ದ ಇಸ್ಲಾಂ ಸಾಮ್ರಾಜ್ಯ ಇಜಿಪ್ಟಿನಿಂದ ಬಲೂಚಿಸ್ತಾನದ ವರೆಗೆ ವ್ಯಾಪಿಸಿತು. ಅಷ್ಟೇ ಅಲ್ಲ, ಪ್ರಜಾಹಿತಕ್ಕಾಗಿ ಅವರು ಯೋಜಿಸಿದ ಕ್ರಮಗಳು ಸಮಾಜವಾದಕ್ಕೆ ಅತಿ ಸಮೀಪದವೆನಿಸಿದ್ದವು.

ಹಜರತ್ ಮುಹಮ್ಮದರ ಕುರೈಶ್ ಜಾತಿಯಲ್ಲಿ ಉಮರರೂ ಜನ್ಮತಾಳಿದ್ದರು. ಕ್ರಿ. ಶ. ೫೮೧ ರಲ್ಲಿ ಹುಟ್ಟಿದ ಇವರ ಹೆಸರು 'ಅಬೂ ಹಫ್ಸಾ' ಎಂದಿದ್ದರೂ ತಾಯಿ-ತಂದೆಯರು ಪ್ರೀತಿಯಿಂದ ಕರೆದ 'ಉಮರ್' ಎಂಬ ಹೆಸರೇ ಇತಿಹಾಸಪ್ರಸಿದ್ಧವಾಯಿತು.

ಆ ಕಾಲದ ಅರಬೀ ದೇಶವು ಅವಿದ್ಯೆಯ ಅಂಧಕಾರದಲ್ಲಿ ಮುಳುಗಿದ್ದರೂ ತಂದೆ ಖತ್ತಾಬರು ತಮ್ಮ ಮಗನಿಗೆ ಸಾಕಷ್ಟು ಶಿಕ್ಷಣ ಕೊಡಿಸಿದ್ದರು. ತಮ್ಮ ಪೈತೃಕ ಪರಂಪರೆಯಂತೆ ಉಮರರು ಆಡು ಒಂಟೆಗಳನ್ನು ಮೇಯಿಸಲು ಹೋಗುತ್ತಿದ್ದರು ಮತ್ತು ಮನೆಗೆಲಸ ನೋಡಿಕೊಳ್ಳುತ್ತಿದ್ದರು. ಒಟ್ಟಿಗೆ ಧನುರ್ವಿದ್ಯೆ ಹಾಗೂ ಮಲ್ಲಯುದ್ಧದ ಅಭ್ಯಾಸವನ್ನು ನಡೆಸುತ್ತಿದ್ದರು. ಅವರು ಅರಬೀದೇಶದ ಪ್ರಖ್ಯಾತ ವೀರರೆನಿಸಿದ್ದರು.

ಇತರ ಕುರೈಶ್ ಜನರಂತೆ ಉಮರರೂ ಮೊದಲು ಮುಹಮ್ಮದರ ಪ್ರಬಲ ವಿರೋಧಿಗಳಾಗಿದ್ದರು. ಕೆಲವು ಕುರೈಶರು ನೀವು ಮುಹಮ್ಮದರನ್ನು ಕೊಲೆಗೈದರೆ ೩೦ ಸೇರು ಚಿನ್ನವನ್ನೂ ನೂರು ಒಂಟೆಗಳನ್ನೂ ಕೊಡುತ್ತೇವೆಂದು ಹೇಳಿದಾಗ ಉಮರರ ಉತ್ಸಾಹ ಮಿತಿಮೀರಿ ಅವರು ಖಡ್ಗ ಹಿರಿದು ಮುಹಮ್ಮದರ ನಿವಾಸಸ್ಥಾನದತ್ತ ಭರದಿಂದ ಸಾಗಿದರು. ದಾರಿಯಲ್ಲಿ ಕುರೈಶರೊಬ್ಬರು ಅವರೊಡನೆ—

"ಕತ್ತಿ ಹಿರಿದು ಎತ್ತ ಹೊರಟಿರಿ?" ಎಂದರು.

"ಮುಹಮ್ಮದರನ್ನು ಕೊಲೆಗೈಯಲು,"— ಅಭಿಮಾನದಿಂದ ಎದೆ ನೀಡಿ ಉತ್ತರಿಸಿದರು ಉಮರ್. ಅದಕ್ಕೆ ಆ ಕುರೈಶರು ವ್ಯಂಗ್ಯವಾಗಿ, "ಮೊದಲು ನಿಮ್ಮ ಮನೆ ನೋಡಿಕೊಂಡು ಮತ್ತೆ ಮುಹಮ್ಮದರ ಕೊಲೆಗೆ ಕೈ ಹಾಕಿರಿ. ನಿಮ್ಮ ಸೋದರಿ, ಭಾವ— ಇಬ್ಬರೂ ಮುಹಮ್ಮದರ ಅನುಯಾಯಿಗಳೆನಿಸಿ ಕುರಾನ್ ಪಾಠಕ್ಕಾರಂಭಿಸಿದ್ದಾರೆ" ಎಂದರು.

ಹಜರತ್ ಉಮರರು ಕ್ರೋಧಾವಿಷ್ಟರಾಗಿ ಸೋದರಿಯ ಮನೆಗೆ ತಲುಪಿದಾಗ ಸೋದರಿ

ಫಾತಿಮಾ ಹಾಗೂ ಅವಳ ಗಂಡ ಸಯೀದರು ಭಕ್ತಿಪೂರ್ವಕವಾಗಿ ಕುರಾನ್ ಓದುತ್ತಿದ್ದರು. ಉಮರ್ ಕಿಡಿಕಿಡಿಯಾಗಿ ಸಯೀದರನ್ನು ಕಾಲಿನಿಂದ ಒದೆದು ಅವರೆದೆಯನ್ನು ಕತ್ತಿಯಿಂದ ತಿವಿಯಲು ಮುಂದಾದರು. ಫಾತಿಮಾ ಅಡ್ಡ ಬಂದಾಗ ಉಮರ್ ಅವಳನ್ನು ತುಳಿದುಬಿಟ್ಟರು.

ಫಾತಿಮಾ ನೆಲದ ಮೇಲೆ ಬಿದ್ದಳು. ಅವಳ ಬಾಯಿಯಿಂದ ನೆತ್ತರಿನ ಕಾರಂಜಿ ಚಿಮ್ಮತೊಡಗಿತು. ಆದರೂ ಅವಳು ಧೈರ್ಯವಾಗಿ "ನಾನು ಸತ್ಯಸ್ವರೂಪಿ ಭಗವಂತನ ಮೇಲೆ ಭಕ್ತಿಭಾವವನ್ನಿಟ್ಟಿದ್ದೇನೆ. ನೀನೇನೇ ಮಾಡು; ನಾನು ಮುಹಮ್ಮದ ಪೈಗಂಬರರ ಮೇಲಿನ ನಂಬುಗೆ ಬಿಡುವವಳಲ್ಲ. ದೇವರ ಮೇಲಿನ ವಿಶ್ವಾಸ ಎಂದೆಂದೂ ಕುಗ್ಗಲಾರದು. ಇಗೋ, ನೀನು ನಮ್ಮನ್ನು ಕೊಂದು ನಿನ್ನ ಹೃದಯವನ್ನು ತಣಿಸಿಕೋ" ಎಂದಳು.

ಈ ದೃಢವಿಶ್ವಾಸವನ್ನು ಕಂಡು ಉಮರರು ತಡೆದರು. ಅವರು ಭಾವನೊಡನೆ ಕ್ಷಮೆ ಯಾಚಿಸುತ್ತ "ನೀವು ಓದುತ್ತಿದ್ದುದನ್ನು ಇನ್ನೊಮ್ಮೆ ಓದಿ ಹೇಳಿರಿ; ನನಗೂ ಅರ್ಥವಾಗುವುದೋ ನೋಡುವೆ"—ಎಂದರು.

ಫಾತಿಮಾ ಕೈತೊಳೆದು ಕುರಾನ್ ಗ್ರಂಥವನ್ನು ಸೋದರನ ಕೈಯಲ್ಲಿಡುತ್ತ "ನೀನೇ ಓದಿ ನೋಡು"—ಎಂದಳು.

ಉಮರ್ ಕುರಾನಿನ ವಾಕ್ಯಗಳನ್ನು ಓದುತ್ತ ಹೋದಂತೆ ಭಾವಪರವಶರಾದರು. ಖಡ್ಗವನ್ನು ಅಲ್ಲೇ ಬಿಸುಟು ನೇರಾಗಿ ಮುಹಮ್ಮದ ಪೈಗಂಬರರ ಬಳಿಗೋಡಿ ಅವರ ಪಾದಗಳಲ್ಲಿ ತಮಗೂ ಆಸರೆ ನೀಡಬೇಕೆಂದು ವಿನಂತಿಸಿಕೊಂಡರು.

ಅಂದಿನಿಂದಲೇ ಉಮರ್ ಮುಹಮ್ಮದರ ಮೈಗಾವಲಾಗಿ ನಿಂತರು ಮತ್ತು ಶ್ರದ್ಧೆ ಭಕ್ತಿಗಳಿಂದ ಅವರ ಸೇವಾ ಶುಶ್ರೂಷೆ ಮಾಡತೊಡಗಿದರು. ಮೆಲ್ಲಮೆಲ್ಲನೆ ಅವರು ಪೈಗಂಬರರ ಕೃಪಾಪಾತ್ರರಾದರು.

ಒಮ್ಮೆ 'ಹಕ್' ಎಂಬ ಮುಸಲ್ಮಾನನು ಯಹೂದಿಯೊಬ್ಬನೊಡನೆ ರೀತಿಯಿಂದ ಕೆಟ್ಟ ವರ್ತಿಸಿದ. ಯಹೂದಿಯು ಮುಹಮ್ಮದರ ಬಳಿ ಬಂದು ದೂರಿಟ್ಟ. ಮುಹಮ್ಮದರು ವಿಚಾರವನ್ನು ಪರಿಶೀಲಿಸಿ ಹಕ್ ಅಪರಾಧಿಯೆಂದು ಹೇಳಿದರು. ಆಗ ಅವನು ಉಮರರ ಬಳಿ ಬಂದು ತನ್ನ ದುಃಖ ತೋಡಿಕೊಂಡ. ಮುಸಲ್ಮಾನನೆಂಬುದರಿಂದಾದರೂ ಅವರು ತನ್ನ ಪಕ್ಷ ವಹಿಸಬಹುದೆಂದು ಅವನ ಭಾವನೆಯಿತ್ತು. ಆದರೆ ಉಮರರು ಕೂಡಲೇ ಅವನ ತಲೆ ಕತ್ತರಿಸಿ ಹೀಗೆಂದರು— "ಯಾವ ಮುಸಲ್ಮಾನನು ಅನ್ಯಧರ್ಮಾವಲಂಬಿಗಳಿಗೆ ತೊಂದರೆ ಕೊಡುತ್ತಾನೋ ಅಥವಾ ಪೈಗಂಬರರ ನ್ಯಾಯವನ್ನು ಟೀಕಿಸುತಾನೋ ಅವನಿಗೆ ಇಂಥ ಶಿಕ್ಷೆಯೇ ದೊರೆಯುತ್ತದೆ!"

ಉಮರರು ಧಾರ್ಮಿಕ ಭೇದಭಾವನೆಯಿಂದ ಎಷ್ಟರಮಟ್ಟಿಗೆ ದೂರವಾಗಿದ್ದರು ಮತ್ತು ಪೈಗಂಬರರಲ್ಲಿ ಎಂಥ ಭಕ್ತಿವಿಶ್ವಾಸ ಇಟ್ಟಿದ್ದರು—ಎಂಬುದು ಮೇಲಿನ ಘಟನೆಯಿಂದ ವ್ಯಕ್ತವಾಗುತ್ತದೆ.

ಬಹುಶಃ ಈ ಘಟನೆಯಿಂದಲೇ ಅವರಿಗೆ 'ಫಾರೂಕ್' ಎಂಬ ಬಿರುದು ದೊರೆತಿರಬೇಕು.

ಹಿಜ್ರೀ ಶಕವರ್ಷ ೧೩ ರಲ್ಲಿ ಖಲೀಫಾ ಹಜರತ ಅಬೂಬಕರ್ ಸಿದ್ದೀಕರು ತೀರಿಕೊಂಡಾಗ ಪೈಗಂಬರರ ಉಯಿಲಿನಂತೆ ಉಮರರು ಖಲೀಫರಾದರು. ರೂಮ್ ಹಾಗೂ ಈರಾನಿನ ಸಮ್ರಾಟರು ಈ ಸಂದರ್ಭವನ್ನುಪಯೋಗಿಸಿಕೊಂಡು ಹೊಸದಾಗಿ ಹುಟ್ಟಿದ ಈ ಮುಸ್ಲಿಂ ರಾಜ್ಯದ ಮೇಲೆ ದಾಳಿಯಿಟ್ಟರು. ಉಮರರು ಸಾಹಸದಿಂದ ಅವರನ್ನೆದುರಿಸಿ ಸೋಲಿಸಿ ಮುನ್ನುಗ್ಗಿದರು. ಕೆಲ ವರ್ಷಗಳಲ್ಲಿ ಶಾಮ್, ಪೆಲೆಸ್ಟೈನ್, ಇಜಿಪ್ತ್, ಈರಾನ್, ಜುರಜಾನ್, ಅಜರ್ ವಾಯಿಜಾನ್, ಖುರಾಸಾನ್, ಕಿರ್ಮಾನ್‌ಮೊದಲಾದ ಹಲವಾರು ಪ್ರಾಂತಗಳಲ್ಲಿ ಇಸ್ಲಾಮಿನ ವಿಜಯಧ್ವಜ ಹಾರಾಡತೊಡಗಿತು.

ಉಮರರ ಆಳ್ವಿಕೆಯ ವೇಳೆ ಮುಸ್ಲಿಂ

ಸಾಮ್ರಾಜ್ಯವು ಬಲುಚಿಸ್ತಾನದಿಂದ ಹಿಡಿದು ಇಜಿಪ್ತ್ ವರೆಗೂ ಕಪ್ಪು ಸಮುದ್ರದಿಂದಾರಂಭಿಸಿ ಅರಬೀ ಸಮುದ್ರದ ವರೆಗೂ ಸುಮಾರು ೩೦ ಲಕ್ಷ ಚದರ ಮೈಲುಗಳಷ್ಟು ವಿಸ್ತಾರವಾಗಿ ವ್ಯಾಪಿಸಿತ್ತು. ರೈಲು, ತಂತಿ, ವಿಮಾನ ಮೊದಲಾದ ವೈಜ್ಞಾನಿಕ ಸಂಪರ್ಕ ಸಲಕರಣೆಗಳಿಲ್ಲದ ಆ ಕಾಲದಲ್ಲಿ ಇಂಥ ಬೃಹದ್ರಾಜ್ಯವನ್ನು ಆಳಲು ಉಮರರು ಯೋಜಿಸಿದ ಕ್ರಮ ಅವರ ವಿಲಕ್ಷಣ ಪ್ರತಿಭೆಗೆ ಸಾಕ್ಷಿಯಾಗಿದೆ. ಅವರು ಆ ಸಂಪೂರ್ಣ ಸಾಮ್ರಾಜ್ಯವನ್ನು ೧೧ ಪ್ರಾಂತಗಳಾಗಿ ವಿಂಗಡಿಸಿದರು: ಶಾಸನಕಾರ್ಯಕ್ಕಾಗಿ ಪ್ರತಿಯೊಂದು ಪ್ರಾಂತದಲ್ಲೂ ಮುಖ್ಯವಾಗಿ ಆರು ಪ ಧಾನ ಅಧಿಕಾರಿಗಳು ನಿಯುಕ್ತರಾಗಿದ್ದರು. ಇವರನ್ನು ಉಮರರೇ ಸ್ವತಃ ಮಂತ್ರಿ ಮಂಡಳದ ಸಮ್ಮತಿಯಿಂದ ಚುನಾಯಿಸುತ್ತಿದ್ದರು. ಆದರೆ ಕೆಲವೊಮ್ಮೆ ಜನತೆಯಿಂದ ಆರಿಸಲ್ಪಟ್ಟ ವ್ಯಕ್ತಿಗಳಿಗೂ ಈ ಹೊಣೆಗಾರಿಕೆಯ ಸ್ಥಾನವನ್ನು ಕೊಡಲಾಗುತ್ತಿತ್ತು. ಪ್ರತಿಯೊಬ್ಬ ಅಧಿಕಾರಿ ಈ ರೀತಿ ಪ್ರತಿಜ್ಞೆ ಮಾಡಬೇಕಾಗುತ್ತಿತ್ತು:

"ನಾನೆಂದೂ ತೆಳುಬಟ್ಟೆಗಳನ್ನು ಧರಿಸುವುದಿಲ್ಲ. ವಾಹನಕ್ಕಾಗಿ ತುರ್ಕೀ ಕುದುರೆಗಳನ್ನು ಉಪಯೋಗಿಸುವುದಿಲ್ಲ. ಮನೆಯ ಬಾಗಿಲು ಕಾಯುವುದಕ್ಕಾಗಿ ಯಾವ ಪೇದೆಯನ್ನೂ ನೇಮಿಸುವುದಿಲ್ಲ. ದೀನದುಃಖಿತರಿಗೂ ನ್ಯಾಯಾರ್ಥಿಗಳಿಗೂ ನನ್ನ ಮನೆಯ ಬಾಗಿಲು ಯಾವಾಗಲೂ ತೆರೆದಿರುತ್ತದೆ."

ಅಧಿಕಾರಿಗಳ ಪರೀಕ್ಷೆಗಾಗಿ ಹಲವಾರು ಗೂಢಚಾರರನ್ನು ನೇಮಿಸಲಾಗಿತ್ತು. ಅವರು ಮೌನವಾಗಿ ಪ್ರತಿಯೊಬ್ಬ ಅಧಿಕಾರಿಯ ಚಲನವಲನವನ್ನೂ ಕಣ್ಣಿಟ್ಟು ನೋಡುತ್ತಿದ್ದರು ಮತ್ತು ಅದೆಲ್ಲವನ್ನೂ ಉಮರರಿಗೆ ವರದಿ ಮಾಡುತ್ತಿದ್ದರು. ವರ್ಷಕ್ಕೊಮ್ಮೆ ಉತ್ಸವದ ವೇಳೆ ಉಮರರು ಆ ಎಲ್ಲ ಅಧಿಕಾರಿಗಳನ್ನೂ ಮಕ್ಕಾಕ್ಕೆ ಕರೆಯಿಸಿಕೊಂಡು ದೇಶ–ದೇಶಾಂತರಗಳಿಂದ ಬಂದ ಯಾತ್ರಿಕರೆದುರು ಅವರನ್ನು ನಿಲ್ಲಿಸಿ "ಈ ಅಧಿಕಾರಿಗಳ ವಿರುದ್ಧ ಯಾರಿಗೇನಾದರೂ ದೂರುಕೊಡುವುದಿದ್ದರೆ ನಿರ್ಭಯವಾಗಿ ಹೇಳಿರಿ" ಎಂದು ಘೋಷಿಸುತ್ತಿದ್ದರು.

ಉಮರರ ಮೇಲ್ವಿಚಾರಣೆಯಲ್ಲಿ ಆ ಕಾಲದ ವಿಶೇಷಜ್ಞರು ದೇಶದ ಸಾರ್ವತ್ರಿಕ ಉನ್ನತಿಗಾಗಿ ಕೆಲವು ಯೋಜನೆಗಳನ್ನು ತಯಾರಿಸಿದರು. ಈ ಯೋಜನೆಗಳ ಪ್ರಭಾವದಿಂದ ಅಲ್ಪಾವಧಿಯಲ್ಲೇ ಜನತೆಯ ಸ್ಥಿತಿ ಬಹಳ ಸುಧಾರಣೆ ಹೊಂದಿತು. ಉಮರರ ಶಾಸನದ ಮುಖ್ಯ ವೈಶಿಷ್ಟ್ಯವೆಂದರೆ ಅವರ ಕಾಲದಲ್ಲಿ ಇಡೀ ಸಾಮ್ರಾಜ್ಯದಲ್ಲಿ ಪೂರ್ಣ ಶಾಂತಿ ನೆಲೆಸಿತ್ತು. ಅವರ ಆಳ್ವಿಕೆಯಲ್ಲಿ ಮುಸಲ್ಮಾನ, ಕ್ರೈಸ್ತ, ಯಹೂದಿ, ಪಾರ್ಸಿ ಮೊದಲಾದ ಬೇರೆ ಬೇರೆ ಜಾತಿಯ ಜನರು ಸ್ವತಂತ್ರವಾಗಿ ಜೀವನ ಸಾಗಿಸುತ್ತಿದ್ದರು. ಅವರಿಗೆ ಯಾವ ತರದ ಭಯವೂ ಇರಲಿಲ್ಲ.

ಹಜರತ್ ಉಮರರು ಮದೀನಾದಲ್ಲಿ ತಂಗಿದ್ದಾಗ ಒಂದು ದಿನ ಅರ್ಧರಾತ್ರಿಯ ಬಳಿಕ ತಮ್ಮ ಅಂಗರಕ್ಷಕನಾದ ಅಸಲಮನೊಂದಿಗೆ ತಿರುಗಾಡಲು ಹೊರಟರು. ದಾರಿಯಲ್ಲಿ ಒಂದು ಸಣ್ಣ ಮನೆಯತ್ತ ಅವರ ದೃಷ್ಟಿ ಹರಿಯಿತು. ಯಹೂದೀ ಸ್ತ್ರೀಯೊಬ್ಬಳು ಒಲೆಯ ಮೇಲೆ ಪಾತ್ರೆಯಿಟ್ಟು ಕುಳಿತಿದ್ದಳು. ಪಕ್ಕದಲ್ಲೇ ಮೂರು ನಾಲ್ಕು ಮಕ್ಕಳು ಅಳುತ್ತಿದ್ದವು. ವಿಚಾರಿಸಿದಾಗ, ಮನೆಯಲ್ಲಿ ಆಹಾರವೇ ಇಲ್ಲವೆಂದೂ ಹಸಿದು ಕಂಗಾಲಾದ ಮಕ್ಕಳನ್ನು ಸಮಜಾಯಿಸಲೆಂದು ಒಲೆಯ ಮೇಲೆ ಪಾತ್ರೆಯಿಟ್ಟು ಕುಳಿತಿದ್ದಾಳೆಂದೂ ತಿಳಿಯಿತು. "ಉಮರನು ನಿನಗೇನಾದರೂ ಸಹಾಯ ಮಾಡಲಾರನೆ?"— ಎಂದು ಕೇಳಿದರವರು.

"ಉಮರ್ ಸಮ್ರಾಟನಾದರೂ ಮುಸಲ್ಮಾನ. ಅವನು ಯಹೂದಿಗಳಿಗೆ ಸಹಾಯ ಮಾಡಿಯಾನೆ?"— ಎಂದಳವಳು. ಇದನ್ನು ಕೇಳುತ್ತಲೇ ಸಾದಾ ಉಡುಗೆಯಲ್ಲಿದ್ದ ಉಮರ್ ಅರ

ಮನೆಗೆ ಮರಳಿ ಭಂಡಾರದಲ್ಲಿದ್ದ ಆಹಾರ ಸಾಮಗ್ರಿಗಳನ್ನು ಚೀಲದಲ್ಲಿ ತುಂಬಿ, ಅದನ್ನು ತಮ್ಮ ಬೆನ್ನ ಮೇಲಿಡುವಂತೆ ಅಸಲಮನಿಗೆ ಹೇಳಿದರು. ತಾನೇ ಒಯ್ಯುವೆನೆಂದು ಅಸಲಮ್ ಪರಿಪರಿಯಾಗಿ ಬೇಡಿಕೊಂಡರೂ ಅವರೊಪ್ಪಲಿಲ್ಲ. "ವಿಚಾರಣೆ(ಕಯಾಮತ್)ಯ ದಿನವೂ ನೀನು ನನ ಭಾರ ಹೊರಬಲ್ಲೆಯಾ? ತಡಮಾಡದೆ ಈ ಮೂಟೆಯನ್ನು ನನ್ನ ಬೆನ್ನಮೇಲಿಡು."

ಅವರು ಸ್ವತಃ ಮೂಟೆ ಹೊತ್ತು ಆ ಹೆಂಗಸಿನ ಮನೆಗೆ ಬಂದರು. ಅಡುಗೆ ಮಾಡಲಿಕ್ಕೂ ಅವರು ಅವಳಿಗೆ ಸಹಾಯ ಮಾಡಿದರು. ಎಲ್ಲ ಮಕ್ಕಳೂ ಊಟ ಮಾಡಿದ ಬಳಿಕ ಉಮರ ಹೊರಟು ನಿಂತಾಗ ಅವಳು ತೃಪ್ತಿಯಿಂದ ಆಶೀರ್ವದಿಸುತ್ತ "ದೇವರು ನಿನ್ನನ್ನು ಸಮ್ರಾಟನನ್ನಾಗಿ ಮಾಡಲಿ. ಉಮರ್ ಈ ಪದವಿಗೆ ಯೋಗ್ಯನಲ್ಲ" — ಎಂದಳು.

ಉಮರರು ಮೊಲೆಹಾಲು ಮರೆತ ಪ್ರತಿಯೊಂದು ಮಗುವಿಗೂ ಸರಕಾರದ ಕಡೆಯಿಂದ ಹಾಲಿನ ಏರ್ಪಾಡು ಮಾಡಿದ್ದರು. ಒಮ್ಮೆ ಕೆಲ ಯಾತ್ರಿಕರು ಮದಿನಾದ ಹೊರಗೆ ಬಂದಿಳಿದರು. ರಾತ್ರಿ ಅವರ ರಕ್ಷಣೆಗಾಗಿ ಉಮರ್ ಸ್ವತಃ ಕಾವಲಿರಲು ಹೋದರು. ಅಕಸ್ಮಾತ್ ಅವರಿಗೆ ಮಗುವಿನ ಅಳುದನಿ ಕೇಳಿಸಿತು. ವಿಚಾರಿಸಿದಾಗ ತಾಯಿ ಅಳುತ್ತ ಹೀಗೆಂದಳು— "ನಾನೇನು ಮಾಡಲಿ? ಮಗು ಹಸಿದಿದೆ; ಆದರೆ ನನಗೆ ಎದೆಹಾಲಿಲ್ಲ. ಮೊಲೆಹಾಲು ಕುಡಿಯುವ ವಯಸ್ಸು ಮೀರಿದ ಮೇಲೆಯೇ ಮಗುವಿಗೆ ಸರಕಾರದಿಂದ ಹಾಲು ದೊರೆಯುತ್ತದೆ....."ಎಂದಳು. ಆಗಲೇ ಉಮರರಿಗೆ ತಮ್ಮ ತಪ್ಪು ಅರಿವಾಗಿ ಮಕ್ಕಳಿಗೆ ಹುಟ್ಟಿದಾರಭ್ಯ ಪುಕ್ಕಟೆ ಹಾಲು ದೊರೆಯಬೇಕೆಂದು ಅಪ್ಪಣೆ ಹೊರಡಿಸಿದರು.

ಹಜರತ್ ಉಮರರು ಜನರಂಜನೆಯಲ್ಲಿ ಬಹು ಕೋಮಲರಾಗಿದ್ದರೂ ನ್ಯಾಯನಿಷ್ಠೆಯಲ್ಲಿ ಅತಿ ಕಠೋರರಾಗಿದ್ದರು. ಉಮರರ ಏಕಮಾತ್ರ ಮಗನಾದ ಅಬೂ ಸೋಮಾ ಅಮಲಿನಿಂದ ಅರಿವುಗೆಟ್ಟು ಯಹೂದೀ ವಿಧವೆಯೊಬ್ಬಳನ್ನು ಅಡ್ಡ ಹಾದಿಗೆಳೆದ. ದುರ್ದೈವದಿಂದ ಆ ವಿಧವೆ ತಾಯಿಯಾದಳು. ತನ್ನ ಮಗುವನ್ನು ತೆಗೆದುಕೊಂಡು ಅವಳು ಉಮರರ ಬಳಿಗೆ ಹೋಗಿ, ಮಗುವಿನ ಪಾಲನೆಗಾಗಿ ಸರಕಾರದ ಕಡೆಯಿಂದ ನೆರವು ಬೇಡಿದಳು. ಉಮರರಿಗೆ ತಮ್ಮ ಮಗನ ಅಪರಾಧ ತಿಳಿದ ಕೂಡಲೇ ಕಟುಕನನ್ನು ಕರೆಯಿಸಿ ಈ ತಪ್ಪಿಗಾಗಿ ಅಬೂಸೋಮಾನಿಗೆ ನೂರು ಚಾಟಿಯೇಟುಗಳನ್ನು ಕೊಡುವಂತೆ ಆಜ್ಞಾಪಿಸಿದರು. ಸಭಾಸದರು ಇದನ್ನು ತೀವ್ರವಾಗಿ ವಿರೋಧಿಸಿದರೂ ಕೇಳಲಿಲ್ಲ.

ನಿರುಪಾಯನಾದ ಕಟುಕ ತನ್ನ ಕೆಲಸ ಮಾಡಲೇಬೇಕಾಯಿತು. ಅಬೂಸೋಮಾ ಶಕ್ತಿಗುಂದಿ ನೆಲಕ್ಕುರುಳುತ್ತ — "ಅಪ್ಪಾ; ಒಂದು ಗುಟುಕು ನೀರು ಕೊಡಿಸಿರಿ!" ಎಂದು ಆರ್ತಸ್ವರದಿಂದ ಕೂಗಿದ. "ಇಲ್ಲ ಮೊದಲು ಪಾಪಕ್ಕೆ ಪ್ರಾಯಶ್ಚಿತವಾಗಲಿ" ಎಂದರವರು. ೯೦ ಏಟುಗಳನ್ನು ತಿನ್ನುತ್ತಿದ್ದಂತೆಯೇ ಆತ ಸತ್ತುಹೋದ. "ಉಳಿದ ಏಟುಗಳನ್ನು ಹೆಣದ ಮೇಲೆಯೇ ಹೊಡೆದುಬಿಡು"—ಎಂದರು ಉಮರ್.

ಹಜರತ್ ಉಮರರು ಸಾದಾ ಭೋಜನ ಮಾಡುತ್ತಿದ್ದರು. ಚಟ್ನಿ ಮತ್ತು ರೊಟ್ಟಿಗಳು ಇಷ್ಟೇ ಅವರ ಆಹಾರ. ಚಿಂದಿ ಬಟ್ಟೆಗಳನು ತೊಟ್ಟು ಬರಿಗಾಲಲ್ಲೇ ಅವರು ತಿರುಗಾಡಲು ಹೊರಡುತ್ತಿದ್ದರು. ಅವರೆಷ್ಟು ಪರದುಃಖಕಾತರರಾಗಿದ್ದರೆಂದರೆ, ಜೆರುಸಲೇಮ್ ಮುಸ್ಲಿಮರ ಅಧಿಕಾರಕ್ಕೊಳಪಟ್ಟಾಗ ಅವರು ಸ್ವತಃ ಒಬ್ಬ ಸೇವಕನೊಂದಿಗೆ ಅಲ್ಲಿಗೆ ಹೊರಟರು. ವಾಹನವಾಗಿ ಒಂದೇ ಒಂದು ಒಂಟೆಯಿತ್ತು. ಸ್ವಲ್ಪ ದೂರ ಉಮರರು ಒಂಟೆಯೇರುತ್ತಿದ್ದರು. ಆಗ ಸೇವಕನು ಒಂಟೆಯ ಕಡಿವಾಣ ಹಿಡಿದು ಕಾಲ್ನಡೆಯಿಂದ ಸಾಗುತ್ತಿದ್ದ. ಮತ್ತೆ ಸ್ವಲ್ಪ ದೂರ ಸೇವಕನು ಒಂಟೆಯೇರುವಂತೆ ಅವರು ಆಜ್ಞಾಪಿಸಿ ತಾವು ಸ್ವತಃ ಕಡಿವಾಣ ಹಿಡಿದು ಸಾಗು

ತ್ತಿದ್ದರು. ಹೀಗೆ ಸರದಿಯ ಮೇಲೆ ಅವರು ಹೋಗುತ್ತಿದ್ದಾಗ, ಜೆರುಸಲೇಮಿಗೆ ತಲುಪುವ ವೇಳೆ ಒಂಟೆಯೇರುವ ಸರದಿ ಸೇವಕನ ಪಾಲಿಗೆ ಬಂದಿತು ಆ ವೇಳೆ ಉಮರರು ಒಂಟೆಯ ಕಡಿವಾಣ ಹಿಡಿದು ನಡೆಯುತ್ತಿದ್ದರು ಅವರ ಅಂಗಿಗೆ ಒಟ್ಟು ೭೨ ತೇಪೆ ಹಾಕಲಾಗಿತ್ತು! ಈ ದೃಶ್ಯವನ್ನು ಕಂಡು ಜೆರುಸಲೇಮಿನ ಜನರು ನಿಬ್ಬೆರಗಾದರು.

ಬೊಕ್ಕಸದ ಹಣ ಜನತೆಯದೆಂಬ ಭಾವನೆ ಉಮರರದಾಗಿತ್ತು. ಆದ್ದರಿಂದ ಅವರು ತಮಗಾಗಿ ತಿಂಗಳಿಗೆ ಕೇವಲ ೫ ರೂಪಾಯಿ ಸಂಬಳವನ್ನು ತೆಗೆದುಕೊಂಡು ಅದರಿಂದ ತಮ್ಮ ಹಾಗೂ ಪರಿವಾರದ ಪೋಷಣೆ ನಡೆಸುತ್ತಿದ್ದರು. ಅವರ ದೃಢವಾದ ಮೈಕಟ್ಟು, ಪ್ರತಾಪದೀಪ್ತ ಮುಖಕಾಂತಿ, ದಟ್ಟವಾಗಿ ಬೆಳೆದ ಗಡ್ಡ ಮೀಸೆಗಳು, ಕಪ್ಪಾದ ಹೊಳಪು ಕಂಗಳು ಇವೆಲ್ಲವನ್ನು ಕಾಣುತ್ತಲೇ ಎಂತಹನೂ ಭಯದಿಂದ ನಡುಗುತ್ತಿದ್ದ. ಆದರೆ ಅವರ ಗುಣಗಳನ್ನು ನೆನಸುತ್ತಲೇ ಅವನ ತಲೆ ಶ್ರದ್ಧಾಭಕ್ತಿಯಿಂದ ತಾನಾಗಿಯೇ ಬಾಗುತ್ತಿತ್ತು. ಆದರೂ ಫಿರೋಜ್ ಎಂಬ ಕ್ರೈಸ್ತ ಗುಲಾಮನೊಬ್ಬನು ಅವರನ್ನು ಅಕಾಲದಲ್ಲೇ ಕೊಲೆಗೈದುಬಿಟ್ಟನು.

ಹಜರತ್ ಉಮರರು ಹತ್ತೂವರೆ ವರ್ಷ ಕಾಲ ಮಾತ್ರ ಖಲೀಫರಾಗಿದ್ದರೂ ಈ ಅಲ್ಪಾವಧಿಯಲ್ಲಿ ಅವರು ತೋರಿದ ಆದರ್ಶವು ಅನಂತ ಕಾಲದ ವರೆಗೂ ಪ್ರಜಾರಾಜ್ಯದಲ್ಲಿ ವಿಶ್ವಾಸವುಳ್ಳವರಿಗೆ ಹಾದಿ ತೋರಬಲ್ಲುದು. ★



## ಪತ್ನೀಖ್ಯಾತ

ಸಂಸ್ಕೃತದಲ್ಲಿ ಘನ ವಿದ್ವಾಂಸರೂ ಮತ್ತು ಮಹಾ ಮೇಧಾವಿಗಳೂ ಆದ ಅಪ್ಪಯ್ಯ ದೀಕ್ಷಿತರು ಒಮ್ಮೆ ತಮ್ಮ ಮಾವನ ಊರಿಗೆ ಹೋದರು.

"ಯಾರೋ ಆಗಂತುಕರು ನಮ್ಮ ಊರಿಗೆ ಬರುತ್ತಿದ್ದಾರಲ್ಲ!" ಎಂದು ಊರ ಮಹಿಳೆಯರು ತಮ್ಮ ಮನೆಯ ಬಾಗಿಲುಗಳಲ್ಲಿ ನಿಂತು ಅವರನ್ನೇ ಅಚ್ಚರಿಯಿಂದ ನೋಡುತ್ತಿದ್ದರು.

ಒಬ್ಬ ಸ್ತ್ರೀ ಇನ್ನೊಬ್ಬಾಕೆಯೊಡನೆ, "ಯಾರೇ ಇವರು ?" ಎಂದು ಪ್ರಶ್ನಿಸಿದುದಕ್ಕೆ ಆಕೆ, "ಇವರೇ ಕಣೇ ನಮ್ಮ ಅಚ್ಚಾಳ ಯಜಮಾನರು" ಎಂದು ಉತ್ತರವಿತ್ತಳು.

ಈ ಸಂಭಾಷಣೆ ಅಪ್ಪಯ್ಯ ದೀಕ್ಷಿತರ ಕಿವಿಗೂ ಬಿದ್ದಿತು. ಅವರು ತಮ್ಮೊಳಗೇ ನಕ್ಕುಕೊಂಡರು. ತಮ್ಮನ್ನು ಸಂಸ್ಕೃತ ವಿದ್ವಾಂಸರೆಂದೋ, ಕವಿಗಳೆಂದೋ ಹೇಳದೆ ಆಕೆ ತನಗೆ ತಿಳಿದವಳ ಯಜಮಾನರಿವರು, ಎಂದು ಹೇಳಿದಳಲ್ಲ ಎಂದುಕೊಂಡರು. ಆ ಘಟನೆ ಅವರ ಮನದಲ್ಲಿ ಆಳವಾಗಿ ಬೇರೂರಿತು. ಆದ್ದರಿಂದಲೇ,

"ಅಸ್ಮಿನ್ ಗ್ರಾಮೇ ಅಚ್ಚಾ ಪ್ರಸಿದ್ಧಾ"

(ನಮಗೆ ಎಷ್ಟು ಹೆಸರಿದ್ದರೂ ಈ ಗ್ರಾಮದಲ್ಲಿ ಅಚ್ಚಾಳೇ ಪ್ರಸಿದ್ಧಳು) ಎಂದು ಬರೆದರೆಂದು ಕಾಣುತ್ತದೆ.

— ಬಿ. ಆರ್. ಶಂಕರ್

**ಪ್ರಧಾನ ಮಂತ್ರಿ ನೆಹರು ಅವರು ಈಚೆಗೆ ಯಾರೂ ಬಯಸದೆ ಅಕಸ್ಮಾತ್ತಾಗಿ ಪರಮಾಣು ಯುದ್ಧ ಪ್ರಾರಂಭವಾದೀತೆಂಬ ಭಯವನ್ನು ಪುನಃ ಪುನಃ ಪ್ರಕಟಿಸಿದ್ದಾರೆ. ಇಲ್ಲಿವೆ ಅದು ಹೇಗಾಗಬಹುದೆಂಬ ಭಯಾವಹ ವಿವರಗಳು**

# ಅನುದ್ದಿಷ್ಟವಾಗಿ ಪರಮಾಣು ಯುದ್ಧ ಪ್ರಾರಂಭವಾದೀತೆ?

"ಟುಡೇ" ಆಧಾರದಿಂದ



ಮೂರನೇ ಮಹಾಯುದ್ಧ ಒಂದು ಕ್ಷುದ್ರ ಯಾಂತ್ರಿಕ ಅವಘಡದಿಂದ ಪ್ರಾರಂಭವಾಗಿಬಿಡಬಹುದು. ಒಂದು ಗುಂಡಿ ಒತ್ತುವುದರಲ್ಲಿ ತಪ್ಪಾಗಿ, ಒಂದು ಕ್ಷಿಪಣಿ ದಾರಿತಪ್ಪಿ, ಅಥವಾ ಒಂದು ಯಂತ್ರವನ್ನು ನಿಯಂತ್ರಿಸುವಾತನಿಗೆ ಒಮ್ಮೆಲೆ ಹುಚ್ಚುಹಿಡಿದು ಮಹಾಯುದ್ಧದ ಕಿಡಿ ಹಾರಿಸಿಬಿಡಬಹುದು.

ಇಂದು ಒಂದು ಚಿಲ್ಲರೆ ಪ್ರಮಾದದಿಂದ ಜಗತ್ತಿನ ಇತಿಹಾಸದ ಕೊನೆಯ ಅಧ್ಯಾಯ ಬರೆಯಲ್ಪಡಬಲ್ಲದು— ಇದು ಯುದ್ಧತಂತ್ರ ವಿಶಾರದರದೇ ಅಭಿಪ್ರಾಯ. ಇದು ಅಭೂತಪೂರ್ವವಾದ ಪರಿಸ್ಥಿತಿಯಾಗಿದೆ. ಈಗ ರಶಿಯ ಮತ್ತು ಅಮೇರಿಕದ ಹತ್ತಿರ ಇರುವ ಪರಮಾಣು ಅಸ್ತ್ರ

ಗಳ ಶಕ್ತಿಯು ನಮ್ಮ ಇಡೀ ಜಗತ್ತನ್ನು ಒಂಭತ್ತು ಸಲ ನಿರ್ನಾಮ ಮಾಡಲು ಸಾಕು.

ಇಂಥ ಘೋರ ವಿಪತ್ತು ಒದಗುವ ಸಂಭವ ಇದೆಯೆ? "ಹೌದು" ಎಂದೇ ಇದಕ್ಕೆ ಉತ್ತರ ಕೊಡಬೇಕಾಗುತ್ತದೆ. ಅಧ್ಯಕ್ಷ ಜಾನ್ ಕೆನಡಿಯವರು ಈಚೆಗೆ ಸಂಯುಕ್ತರಾಷ್ಟ್ರಸಂಘದಲ್ಲಿತ್ತ ಭಾಷಣದಲ್ಲಿ ಕೊಟ್ಟ ಎಚ್ಚರವಿದು: "ಮುಂದಿನ ಹತ್ತು ತಿಂಗಳಲ್ಲಿ ನಾವು ಮಾಡುವ ನಿರ್ಣಯಗಳಿಂದ ಮಾನವ ಕುಲದ ಮುಂದಿನ ಹತ್ತು ಸಾವಿರ ವರ್ಷಗಳ ಅದೃಷ್ಟ ನಿರ್ಣಯವಾಗಿ ಹೋಗಬಹುದು."

ಆಕಸ್ಮಿಕ ಪ್ರಮಾದದಿಂದ ಪರಮಾಣು ಯುದ್ಧ ಪ್ರಾರಂಭವಾಗುವ ಸಂಭವ ಮುಂದಿನ ಹತು ವರ್ಷಗಳಲ್ಲಿ ಬಹಳವಾಗಿದೆ; ಈ ಸಂಭವ ಮೂರರಲ್ಲಿ ಎರಡು ಭಾಗದಷ್ಟು ಇದೆ ಎಂದು ಕೆನ್ನೆಡಿಯವರ ಅಭಿಪ್ರಾಯವೆಂಬುದಾಗಿ ವಿಶ್ವಸನೀಯವಾಗಿ ತಿಳಿಯುತ್ತದೆ. ಮೂರರಲ್ಲಿ ಎರಡು ಭಾಗ ಸಂಭವ ಎಂದರೆ ಹೆಚ್ಚು ಕಡಿಮೆ ಖಂಡಿತ ಎಂದೇ ಅರ್ಥ.

ಈ ಭಯಂಕರ ಸತ್ಯವನ್ನು ಮರೆಮಾಚಲೆಂದೇ ಬ್ರಿಟಿಶ್ ಸಂರಕ್ಷಣ ಮಂತ್ರಿಶಾಖೆ, "ಭಯದ ಸಮತೋಲ"ದ ಕಲ್ಪನೆಯನ್ನು ಪ್ರತಿಪಾದಿಸುತ್ತದೆ. ಅಂದರೆ ಎರಡೂ ಪಕ್ಷಗಳ ಹತ್ತಿರ ಪರಸ್ಪರರನ್ನು ಸಂಪೂರ್ಣ ನಿರ್ನಾಮ ಮಾಡುವಷ್ಟು ಬಲವಿದ್ದರೆ ಯಾರೂ ಯುದ್ಧ ಪ್ರಾರಂಭಿಸಲಾರರೆಂದು ಇವರ ಕಲ್ಪನೆ.

ಇದು ನಿಜ. ಪ್ರಚಂಡ ಶಕ್ತಿ ಸಂಗ್ರಹದ ದೆಸೆಯಿಂದ ಇಂದು ಕ್ರುಶ್ಚೇವರಾಗಲಿ ಕೆನಡಿಯವರಾಗಲಿ ಬೇಕೆಂದೇ ಯುದ್ಧ ಪ್ರಾರಂಭಿಸಿ ಸಾವಿಗೆ ಆಮಂತ್ರಣವೀಯಲಾರರೆಂಬುದು ಒಪ್ಪತಕ್ಕದ್ದೇ.

ಆದರೆ ಅಸ್ತ್ರಗಳ ಗಾತ್ರ ಬೆಳೆಯುತ್ತಿದೆ; ಅವುಗಳನ್ನು ಪ್ರಯೋಗಿಸುವ ಉಪಾಯಗಳು ಹೆಚ್ಚು ದಕ್ಷವಾಗುತ್ತಿವೆ; ಹೆಚ್ಚು ವಿಸ್ತಾರ ಪ್ರದೇಶದಲ್ಲಿ ಅವುಗಳನ್ನು ಅಲ್ಲಲ್ಲಿ ಇಡಲಾಗಿದೆ. ಸಂಗಡಲೇ ಆಕಸ್ಮಿಕಗಳ ಸಂಭವವೂ ಹೆಚ್ಚಾಗುತ್ತಿದೆ.

"ಇಂದಿನ ಅತ್ಯಂತ ಜಟಿಲವಾದ, ಒಂದಕ್ಕೊಂದು ತಳಕುಬಿದ್ದಿರುವ ಸಂಪರ್ಕ ಮತ್ತು ನಿಯಂತ್ರಣ ಪದ್ಧತಿಯೇ ತಜ್ಞರಿಗೆ ಚಿಂತೆಯುಂಟುಮಾಡಿದೆ. ಸುರಕ್ಷಿತತೆಗಾಗಿ ಯೋಜಿಸಿದ ಉಪಾಯಗಳೇ ಅನಾಹುತಕ್ಕೆಡೆಕೊಡಬಹುದು" ಎಂದು ಲಂಡನ್ನಿನ ಇಂಪೀರಿಯಲ್ ಕಾಲೇಜಿನ ಪ್ರೊ. ಪಿ. ಎಂ. ಎಸ್. ಬಾಕೆಟ್ಟರು ಹೇಳುತ್ತಾರೆ.

"ಉದಾಹರಣೆಗಾಗಿ, ಭೂಗತ ಕ್ಷಿಪಣಿ ಕೇಂದ್ರವೊಂದರಲ್ಲಿ ಅಕಸ್ಮಾತ್ತಾಗಿ ಎಣ್ಣೆಯ ಸಂಗ್ರಹ ಸ್ಫೋಟವಾದರೆ ಸಂಪರ್ಕಸಾಧನಗಳೆಲ್ಲ ಸಿಕ್ಕಾಬಟ್ಟೆಯಾಗಿ ಯಾರೂ ಎಣಿಸದೆನೇ ಒಂದು ಕ್ಷಿಪಣಿ (ವಿರೋಧಿ ದೇಶದ ಮೇಲೆ) ಹಾರಬಹುದು."

ಇಂಥ ಒಂದು ಅಸ್ತ್ರವೇ ಯುದ್ಧವನ್ನು ಸ್ಫೋಟಗೊಳಿಸಬಲ್ಲದು. ರಶಿಯನ್ನರು (ಅಥವಾ ಅಮೇರಿಕನ್ನರು ಎನ್ನಿರಿ) ಇಂಥ ಅಸ್ತ್ರ ತಮ್ಮ ದೇಶದ ಮೇಲೆ ಬಂದು ಬೀಳುವವರೆಗೆ ಕಾಯುತ್ತಿದ್ದು ಆಮೇಲೆ ತತ್‌ಕ್ಷಣ ಪರಮಾಣು ಅಸ್ತ್ರಗಳ ಸುರಿಮಳೆ ಪ್ರಾರಂಭಿಸುವರು.

ರಶಿಯನ್ನರ ಹತ್ತಿರ ಇರುವ ಪರಮಾಣು ಅಸ್ತ್ರಶಕ್ತಿ ಸರಿಯಾಗಿ ಎಷ್ಟೆಂದು ಗೊತ್ತಿಲ್ಲ. ಆದರೆ ಅಮೇರಿಕನ್ನರ ಹತ್ತಿರ ೨,೦೦೦ ಜೆಟ್ ಬಾಂಬರ್, ೪ ಪರಮಾಣು ಜಲಾಂತರ್ಗಾಮಿ (ಪ್ರತಿಯೊಂದೂ ೧೬ ಕ್ಷಿಪಣಿ ಸಹಿತ), ಮತ್ತು (೧೯೬೩ ರೊಳಗೆ) ೧೦೮ ಟೈಟನ್ ಮತ್ತು ೧೨೩ ಆಟ್ಲಾಸ್ ದೂರಗಾಮಿ ಕ್ಷಿಪಣಿಗಳಿವೆಯೆಂದು ಗೊತ್ತಿದೆ.

ಈ ಅಸ್ತ್ರಗಳ ಧ್ವಂಸಶಕ್ತಿ ಅಗಾಧವಾದದ್ದು. ಅಮೇರಿಕದ ಒಂದೇ ಕಿಲೋಮೆಗಾಟನ್ ಶಸ್ತ್ರಾಗಾರದಲ್ಲಿ, ೧೯೪೫ ರಲ್ಲಿ, ನಾಗಾಸಾಕಿಯ ಮೇಲೆ ಇಕ್ಕಿದ ಬಾಂಬಿಗಿಂತ ೧೭,೫೦,೦೦೦ ಪಟ್ಟು ಹೆಚ್ಚು ಧ್ವಂಸಶಕ್ತಿ ಇದೆಯೆಂದು ಎಣಿಸಲಾಗಿದೆ. ಇದರಿಂದ ರಶಿಯದ ೨೧ ಕೋಟಿ ಜನಸಂಖ್ಯೆಯಲ್ಲಿ ಸೇಕಡಾ ೯೬ ರಷ್ಟನ್ನು ಒಂದೇ ಹೊಡೆ

ತಕ್ಕೆ ನಿರ್ನಾಮ ಮಾಡಿಬಿಡಬಹುದು.

ಈ ಎಲ್ಲ ಅಸ್ತ್ರಗಳು ಹಗಲಿರುಳೂ ಪ್ರಯೋಗಕ್ಕೆ ಅಣಿಯಾಗಿವೆಯೆಂಬುದನ್ನು ಕೇಳಿ ಎದೆ ನಡುಗುತ್ತದೆ. ಎಚ್ಚರವಿತ್ತ ಕೆಲವೇ ನಿಮಿಷಗಳಲ್ಲಿ ಇವನ್ನು ಹಾರಿಸಬಹುದು. ಹದಿನೈದು ನಿಮಿಷಗಳಲ್ಲಿ ಒಂದು ಸಾವಿರ ಪರಮಾಣು ಬಾಂಬರುಗಳನ್ನು ಕಳಿಸಬಲ್ಲೆವೆಂದು ಅಮೇರಿಕನ್ನರು ಹೆಗ್ಗಳಿಕೆ ಹೇಳಿಕೊಳ್ಳುತ್ತಿದ್ದಾರೆ.

ಈ "ಸದಾ ಜಾಗ್ರತಿ"ಯೇ ಆಕಸ್ಮಿಕ ಯುದ್ಧಕ್ಕೆ ಬಹುಶಃ ಕಾರಣವಾದೀತು. ಒಂದು ರೇಡಾರ್ ಯಂತ್ರ ಸ್ವಲ್ಪ ತಪ್ಪು ಮಾಡಿದರೆ, ಒಂದು ಅಪ್ಪಣೆ ಅಪಾರ್ಥಕ್ಕೊಳಗಾದರೆ, ಗುಪ್ತಚಾರ ವರದಿಗಳಲ್ಲಿ ಒಂದು ಪ್ರಮಾದವಿದ್ದರೆ— ಸಾಕು, ಜಗತ್ತು ಪ್ರಪಾತಕ್ಕೆ ಉರುಳೀತು.

ಇಂಥ ತಪ್ಪು ಈಗಾಗಲೇ ಆಗಿದ್ದುಂಟು. ಕಳೆದ ವರ್ಷ ಅಮೇರಿಕದ "ಬೊಮಾರ್ಕ್" ಎಂಬ ಪರಮಾಣು ಬಾಂಬ್‌ಯುಕ್ತ ಕ್ಷಿಪಣಿಯಲ್ಲಿದ್ದ ದೋಷದಿಂದ ಮೂರನೇ ಮಹಾಯುದ್ಧ ಪ್ರಾರಂಭವಾಗುವುದು ಕೂದಲೆಳೆಯಷ್ಟೇ ಅಂತರದಿಂದ ತಪ್ಪಿತು. ಒಂದು ದಿನ ವಿಮಾನಪಡೆಯ ಅಧಿಕಾರಿಗಳು ಭೋಜನ ಶಾಲೆಯ ಕಿಡಿಕಿಯಿಂದ ಹೊರಗಿಣಿಕಿದಾಗ ಈ ಕ್ಷಿಪಣಿಯ ತುದಿ ಹೊಗೆಯಾಡುತ್ತಿರುವುದು ಕಂಡಿತು. ಕೂಡಲೇ ಅವರು ಧಾವಿಸಿ ತಡೆಯದಿದ್ದರೆ ಅದು ಹಾರಿ ರಶಿಯದ ಕಡೆ ಧಾವಿಸುತ್ತಿತ್ತು. ಪೋಲೀಸ್ ಕಾರ್ ಮತ್ತು ರೇಡಿಯೋ ಸ್ಟೇಶನ್ನಿನಿಂದ ಹೊರಟ ಸಂಕೇತಗಳು ಹೇಗೋ ಜೋಡಾಗಿ ಈ ಕ್ಷಿಪಣಿಯನ್ನು ಹಾರಿಸತಕ್ಕ ಸಂಕೇತದ ರೂಪು ತಾಳಿದ್ದವಂತೆ!

ಕಳೆದ ವರ್ಷ ಅಕ್ಟೋಬರಿನಲ್ಲಿ ಗ್ರೀನ್‌ಲ್ಯಾಂಡಿನ ಥೂಲ್ ಎಂಬಲ್ಲಿರುವ ಪ್ರಬಲ ರೇಡಾರ್ ಯಂತ್ರಜಾಲವು ಅಮೇರಿಕದ ಮೇಲೆ ಸೇಕಡಾ ೯೯.೯ ಪಾಲು ಖಂಡಿತವಾಗಿ ದಾಳಿ ಪ್ರಾರಂಭವಾಗಿದೆ ಎಂದು ವರದಿ ಮಾಡಿತು. ಕೊಲರೆಡೋ ಸ್ಪ್ರಿಂಗ್ಸ್‌ನಲ್ಲಿರುವ ಉತ್ತರ ಅಮೇರಿಕಾ ಆಕಾಶ ರಕ್ಷಣಾಕೇಂದ್ರದಲ್ಲಿ "ಯುದ್ಧ! ಯುದ್ಧ!" ಎಂದು ಅಪಾಯಸೂಚಕ ಟೆಲಿಫೋನುಗಳು ಕೂಗತೊಡಗಿದವು.

ಪುಣ್ಯಕ್ಕೆ ಕೆನಡಾ ವಿಮಾನ ಪಡೆಯ ಏರ್‌ಮಾರ್ಶಲ್ ರಾಯ್ ಸ್ಲೆಮನ್ನರು ಈ ಗದ್ದಲದ ಕಾಲದಲ್ಲಿ ತೂಕ ತಪ್ಪದೆ ಚೆನ್ನಾಗಿ ಪರೀಕ್ಷಿಸಿ ನೋಡಿ ಯುದ್ಧ ಪ್ರಾರಂಭವಾದುದು ಸುಳ್ಳು ಎಂದು ನಿರ್ಧರಿಸಿದರು ತಾವು ಕಳಿಸಿದ ಧ್ವನಿಗಳೇ ಚಂದ್ರನಿಂದ ಪ್ರತಿಬಿಂಬಿತವಾಗಿ ತಮಗೆ ಕೇಳಿಸುತ್ತಿವೆಯೆಂದರಿಯದೆ ರೇಡಾರ್ ಯಂತ್ರಗಳು ಈ ಕೋಲಾಹಲವೆಬ್ಬಿಸಿಬಿಟ್ಟಿದ್ದವು!

ಸ್ಲೆಮನ್ನರು ಶಾಂತ ಮನೋಭಾವದವರಾಗಿದ್ದರು, ಒಳಿತಾಯಿತು ಯಾವಾಗಲೂ ಅಂಥವರೇ ನಿಯಂತ್ರಣದಲ್ಲಿರುತ್ತಾರೆಂದು ಹೇಗೆ ಹೇಳಲಾದೀತು? ಗುಂಡಿಯ ಬಳಿ ಒಬ್ಬ ಹುಚ್ಚ (ಕ್ರುಶ್ಚೇವರೇ ಕಳಿಸಿದವನಿರಬಹುದಲ್ಲ?) ಕುಳಿತಿರುವ ಸಂಭವ ಅಸಂಭವವೇನೂ ಅಲ್ಲ

ಅಮೇರಿಕದ ವಿಮಾನ ದಲದ ಮನಃಶಾಸ್ತ್ರಿ ಕರ್ನಲ್ ರೂಬೆನ್ ಬೇರರು, "ಕೆಲವರು ಬೇಕೆಂದೇ ಅಪಘಾತಗಳನ್ನು ಹುಡುಕಿಕೊಂಡು ಹೋಗುತ್ತಾರೆ, ತಮ್ಮ ಕಡೆ ಜನರ ಲಕ್ಷ ಹೊರಳಿಸಲೆಂದು" – ಎನ್ನುತ್ತಾರೆ. ಇಂಥ ಅಪಘಾತಪ್ರಿಯರು, ಸರಿಯಾದ ಸಂದರ್ಭ ದೊರೆತರೆ, ಜಗತ್ತಿನ ಹಣೆ ಬರಹವನ್ನೇ ಅಳಿಸಿಬಿಡಬಹುದು. ಕಳೆದ ಮಹಾಯುದ್ಧ ಕಾಲದಲ್ಲಿ ಅಮೇರಿಕನ್ ಸೈನ್ಯದಿಂದ ಬಿಡುಗಡೆ ಮಾಡಲ್ಪಟ್ಟವರಲ್ಲಿ ಸೇಕಡಾ ೪೩ ಜನ ಮತ್ತು ವಿಮಾನ ಪಡೆಯಿಂದ ಬಿಡುಗಡೆ ಹೊಂದಿದವರಲ್ಲಿ ಸೇಕಡಾ ೫೦ ಜನ ಮಾನಸಿಕ ರೋಗದ ದೆಸೆಯಿಂದ ಹಾಗೆ ಮಾಡಲ್ಪಟ್ಟರೆಂಬುದನ್ನು ನೆನೆದರೆ ಅಪಾಯಕರ ಸ್ಥಾನಗಳಲ್ಲಿ ಸ್ತಿಮಿತವಿಲ್ಲದ ಬುದ್ಧಿಯ ಜನರು ಇರುವ ಸಂಭವ ಎಷ್ಟು ಹೆಚ್ಚಾಗಿದೆಯೆಂದು ತರ್ಕಿಸಬಹುದು.

ಇಷ್ಟಿದ್ದರೂ ತಪ್ಪೆಣಿಕೆ, ಅಪಘಾತ ಅಥವಾ ಭ್ರಾಂತಚಿತ್ತ ಇವುಗಳಿಂದ ಯುದ್ಧಾರಂಭವಾ

ಗುವ ಭಯ ತೀರ ಕಡಿಮೆಯೆಂದು ಅಂಕೆಸಂಖ್ಯೆಗಳ ವಿವೇಚನೆಯಿಂದ ಗ್ರಹಿಸಲಾಗಿದೆ. ಆದರೆ ಸ್ಥಾನಿಕ ಯುದ್ಧವೊಂದು ಒಮ್ಮೆಲೆ ವ್ಯಾಪಕ ರೂಪ ತಾಳಿ ಅಥವಾ ಬೆದರಿಕೆ ತೋರಿಸುವ ಕ್ರಮಗಳು ಕೈಮೀರುವ ಮೂಲಕ ಮಹಾ ಯುದ್ಧ ಪ್ರಾರಂಭವಾಗುವ ಭಯ ಇದಕ್ಕೂ ಎಷ್ಟೋ ಪಾಲು ಅಧಿಕವಾಗಿದೆ.

ಅಮೇರಿಕದ ಪ್ರಮುಖ ಸೈನಿಕ ತಜ್ಞನೊಬ್ಬನು ಹೀಗೆ ಯುದ್ಧ ಪ್ರಾರಂಭವಾಗುವ ಸಂಭವ ಅರ್ಧಕ್ಕರ್ಧ ಇದೆ ಎನ್ನುತ್ತಾನೆ.

ಸ್ಥಳೀಯ ಯುದ್ಧವೊಂದು ಆಕಸ್ಮಿಕವಾಗಿ ಹಬ್ಬಿ ವಿಶ್ವಮೇಧವಾಗುವ ಗಂಡಾಂತರ ಎಲ್ಲಕ್ಕೂ ಹೆಚ್ಚಿನದು. ಕೊರಿಯಾದಲ್ಲಿ ಜನರಲ್ ಮೆಕಾರ್ಥರರು ಬಯಸಿದಂತೆ ಚೀನದ ಮೇಲೆ ವಿಮಾನದಾಳಿ ಮಾಡಲ್ಪಟ್ಟಿದ್ದರೆ ಹೀಗಾಗಬಹುದಿತ್ತು. ಅಥವಾ ಸುಯೇಜ್ ಬಿಕ್ಕಟ್ಟಿನ ಸಮಯ ಕ್ರುಶ್ಚೇವರು ಬೆದರಿಕೆ ಹಾಕಿದ ಹಾಗೆ ಅವರು ಬ್ರಿಟನ್ ಫ್ರಾನ್ಸ್‌ಗಳ ಮೇಲೆ ಆಕಾಶಬಾಣಗಳನ್ನು ಪ್ರಯೋಗಿಸಿದ್ದರೂ ಹೀಗಾಗಬಹುದಿತ್ತು. ಅಥವಾ ಫೊರ್ಮೋಸಾದಲ್ಲಿ ಅಮೇರಿಕದ ನೌಕಾಪಡೆ ಚೀನದ ಮೇಲೆ ತೋಫು ವೃಷ್ಟಿ ಮಾಡುವ ಭಯ ಪ್ರದರ್ಶನ ಮಾಡಿದಾಗಲೂ ವಿಶ್ವಯುದ್ಧದ ನಾಂದಿಯಾಗಬಹುದಿತ್ತು ಸ್ಥಳೀಯ ಯುದ್ಧವನ್ನು ವಿಶ್ವಯುದ್ಧವಾಗಿ ಮಾರ್ಪಡಿಸಲು ಒಂದು ಚಿಕ್ಕ ಘಟನೆಯೂ ಸಾಕು.

ಎದುರಾಳಿಯನ್ನು ಆಹ್ವಾನಿಸುವ ಗತ್ತು ಕೂಡ ಮಿತಿಮೀರಿದರೆ ಅಪಾಯಕರವಾದೀತು. ಅದರಿಂದ ಉದ್ವೇಗವು ಚರಮಸೀಮೆಗೇರಿ ಹೆಜ್ಜೆ ಹಿಂದಿಡಲು ಅಸಾಧ್ಯವಾದ ಪರಿಸ್ಥಿತಿ ತಲೆದೋರೀತು.

ಉದಾಹರಣೆಗೆ, ರಶಿಯನ್ನರು ಪೂರ್ವ-ಪಶ್ಚಿಮ ಜರ್ಮನಿಗಳ ನಡುವಣ ಗಡಿಯನ್ನು ಪ್ರತಿಬಂಧಿಸಿ ಬರ್ಲಿನನ್ನು ಹಿಡಿದುಕೊಂಡರೆಂದುಕೊಳ್ಳಿ. ಆಗ ಪಾಶ್ಚಾತ್ಯರೇನು ಮಾಡುವರು? ಸದ್ಯದ ನ್ಯಾಟೋ ಗುಂಪಿನ ಸಾಂಪ್ರದಾಯಿಕ ಸೈನ್ಯ ಬಲವು ರಶಿಯನ್ನರನ್ನು ಅಲ್ಲಿಂದ ಹೊರದೂಡಲು ಸಾಲದು. ಪರಿಣಾಮವಾಗಿ ಎರಡೂ ಪಕ್ಷಗಳು ರಾಜತಾಂತ್ರಿಕ ವಿಧಾನದಿಂದ ಎದುರು ಪಕ್ಷ ಬಾಲ ಮುದುಚುವಂತೆ ಮಾಡಲು ಹೆಣಗುವವು.

ಕಟ್ಟಕಡೆಗೆ ಎಲ್ಲ ಯತ್ನ ವಿಫಲವಾದ ಮೇಲೆ ಅಮೇರಿಕವು ರಶಿಯದ ವಿರುದ್ಧ ತಾನು ಬಹುಕಾಲದಿಂದ ಅಣಿ ಮಾಡಿಟ್ಟಿದ್ದ ಪರಮಾಣು ಶಸ್ತ್ರಗಳನ್ನು ಪ್ರಯೋಗಿಸಲೇಬೇಕಾಗುವುದು. ಇದರ ಫಲ ಸರ್ವನಾಶ. ರಶಿಯ ಅಮೇರಿಕಗಳೆರಡೂ ಪರಮಾಣು ವಿಕಿರಣಪೂರಿತವಾದ ಪ್ರಚಂಡ ಮರುಭೂಮಿಗಳಾಗುವವು. ಚಿಕ್ಕ ತಪ್ಪಿಗೆ ಇಷ್ಟು ದೊಡ್ಡ ಬೆಲೆ!

"ಅತಿ ಜಾಗ್ರತ" ಸಂರಕ್ಷಣ ವಿಧಾನಗಳೇ ಈಗ ಎಲ್ಲಕ್ಕೂ ಅಪಾಯಕರವಾಗಿರುವುದು. ಹದಿನೈದು ನಿಮಿಷದಲ್ಲಿ ದಾಳಿ ಮಾಡಬಲ್ಲ ಸಿದ್ಧತೆಯ ಗುಣಗಳೇನಿದ್ದರೂ ಅದು ವಿಚಾರ ಮಾಡಲು ಸಾಕಷ್ಟು ವ್ಯವಧಾನವೀಯದಿರುವುದರಿಂದ ಎರಡೂ ಪಕ್ಷಗಳಿಗೆ ದೊಡ ಸಮಸ್ಯೆಯನ್ನು ತಂದೊಡ್ಡುತ್ತದೆ.

ಎದುರಾಳಿ ದಾಳಿ ಮಾಡುತ್ತಾನೆಂದು ಸೂಚನೆ ಬರುತ್ತದೆಂದುಕೊಳ್ಳಿ. ಈತ ಕ್ಷಣದಲ್ಲಿ ನಿರ್ಣಯ ಕೈಕೊಂಡು ಪ್ರತಿ ಕ್ರಮಗಳನ್ನು ಯೋಜಿಸಬೇಕು, ಇಲ್ಲವೇ ಸೂಚನೆ ಸರಿಯೇ ಸುಳ್ಳೇ ಎಂದು ಖಾತ್ರಿಯಾಗುವ ವರೆಗೆ ಕಾಯಬೇಕು. ಕೂಡಲೇ ಕ್ರಮ ಕೈಕೊಂಡು ಆ ಮೇಲೆ ಸೂಚನೆ ಸುಳ್ಳೆಂದು ಗೊತ್ತಾದರೆ ನಿಷ್ಕಾರಣವಾಗಿ ಪರಮಾಣು ಯುದ್ಧವನ್ನಾರಂಭಿಸಿ ಜಗತ್ತನ್ನು ಸರ್ವನಾಶಕ್ಕೆಳೆದ ಪಾಪ ಅವನ ತಲೆಯ ಮೇಲೆ ಬೀಳುವುದು. ಸತ್ಯ-ಸಂಧಾನವಾಗುವ ವರೆಗೆ ಕಾಯೋಣೆಂದರೆ ಅಷ್ಟರೊಳಗೆ ಶತ್ರುವು ಅವನ ಪ್ರತಿಭಟನ ಶಕ್ತಿಯ ಮಗ್ಗಲು ಮುರಿದುಬಿಡುವ ಭಯವಿದೆ. ಹೀಗಾಗಿ ಯಾರಿಗೂ ವಿಚಾರಿಸಲು ಪುರಸೊತ್ತಿಲ್ಲ. ಪ್ರತಿಯೊಬ್ಬರೂ ಗುಂಡಿಯ

ಮೇಲೆ ಬೆರಳಿಟ್ಟು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕಾಯಬೇಕು. ತಾನು ಬೆರಳು ತೆಗೆದರೆ ಸಂದರ್ಭ ಸಾಧಿಸಿ ಎದುರಾಳಿ ಗುಂಡಿಯೊತ್ತಿಬಿಟ್ಟರೇನು ಗತಿ?

ಇದೇ ಪರಮಾಣು ಯುದ್ಧ ಸನ್ನಾಹದ ದೊಡ್ಡ ಉಭಯ ಸಂಕಟ. ಅದು ಸದಾ ಜಾಗ್ರತವಾಗಿರುವುದರಿಂದ ಮಾನುಷ, ಯಾಂತ್ರಿಕ, ಸಾಮರಿಕ ಅಥವಾ ರಾಜಕೀಯ ಇವುಗಳಲ್ಲಿ ಯಾವ ಅಲ್ಪ ಪ್ರಮಾದದಿಂದಲೂ ಯುದ್ಧಾರಂಭವಾಗಬಹುದು. ಒಮ್ಮೆ ಅದು ಪ್ರಾರಂಭವಾದ ಮೇಲೆ ಅದು ಪ್ರಮಾದದಿಂದಲೇ ಪ್ರಾರಂಭವಾದುದೆಂದು ಗೊತ್ತಾದರೂ ಫಲವಿಲ್ಲ. ಅಷ್ಟರೊಳಗೆ ಎಲ್ಲವೂ ಇತಿಶ್ರೀಯಾಗಿ ಹೋಗಿರುವುದು. ★

—ooo—

## ವ್ರತಬಂಧನ

೧೯೪೦ ರ ಸಂಗತಿ. ಬಾಪೂಜಿ ಶಾಂತಿನಿಕೇತನಕ್ಕೆ ಆಗಮಿಸಿದ್ದರು. ಮಾವಿನ ತೋಪಿನಲ್ಲಿ ರವೀಂದ್ರರಿಂದ ಅವರಿಗೆ ಭವ್ಯ ಸ್ವಾಗತ ದೊರೆಯಿತು. ಈ ಎರಡು ಹಿರಿಯ್ಯಜೀವಿಗಳ ಮಿಲನವನ್ನು ಕಂಡು ಶಾಂನಿಕೇತನವು ಹಿರಿಹಿರಿ ಹಿಗ್ಗಿತು.

ಮಣ್ಣಿನಿಂದ ಕಲಾಪೂರ್ಣವಾಗಿ ನಿರ್ಮಿಸಿದ 'ಶ್ಯಾಮಲಿ' ಎಂಬ ಕುಟೀರದಲ್ಲಿ ಬಾಪೂಜಿಯ ಬಿಡಾರದ ವ್ಯವಸ್ಥೆಯಾಯಿತು. ಆ ಪುಟ್ಟ ಗುಡಸಿಲಿನ ಸರಳತೆ ಮತ್ತು ಕಲಾಕುಶಲತೆಯನ್ನು ಬಾಪೂಜಿಯವರು ಮನವಾರೆ ಹೊಗಳಿದರು. ವರ್ಷಕ್ಕೊಮ್ಮೆ ಈ ಕಡೆ ಬರುವ ನಿಯಮವನ್ನಿಟ್ಟುಕೊಂಡರೆ ಆ ಗುಡಿಸಲನ್ನು ಅವರಿಗೆ ಬಿಟ್ಟು ಕೊಡುವುದಾಗಿ ರವೀಂದ್ರರು ಹೇಳಿದರು.

ಮಧ್ಯಾಹ್ನದ ಭೋಜನವಾಯಿತು. ಬಾಪೂಜಿಯವರು 'ಶ್ಯಾಮಲಿ' ಯಲ್ಲಿ ವಿಶ್ರಾಂತಿಗೆಂದು ಹೋದರು. ತುಸು ಹೊತ್ತು ಕಳೆದ ನಂತರ ಹೊರಗೆ ಬಂದು ನೋಡಿದರೆ ಗುರುದೇವರು, ಆ ಮಟಮಟ ಮಧ್ಯಾಹ್ನದಲ್ಲಿ ವಿಶ್ರಮಿಸಿಕೊಳ್ಳುವ ಬದಲು, ಸಾಹಿತ್ಯಸೃಷ್ಟಿಯಲ್ಲಿ ಹೊರ ಜಗತ್ತನ್ನು ಮರೆತಿದ್ದಾರೆ! ಬಾಪೂಜಿಗೆ ಇದು ರುಚಿಸಲಿಲ್ಲ. ಆ ಸಮಯದಲ್ಲಿ ಗುರುದೇವರ ಸ್ವಾಸ್ಥ್ಯವೂ ಚೆನ್ನಾಗಿರಲಿಲ್ಲ. ರವೀಂದ್ರರ ಬಳಿ ಸಾರಿ ಅವರ ತಪ್ಪನ್ನು ತಿದ್ದುವ ದನಿಯಲ್ಲೆಂದರು– "ನಾನು ನಿಮಗೆ ಒಂದು ಸಲಹೆ ಕೊಡುತ್ತೇನೆ, ಅದನ್ನು ನೀವು ಒಪ್ಪಲೇಬೇಕು. ಊಟವಾದ ನಂತರ ಪ್ರತಿನಿತ್ಯ ಮಧ್ಯಾಹ್ನ ಒಂದೆರಡು ಗಂಟೆ ವಿಶ್ರಮಿಸಿಕೊಳ್ಳಿರಿ. ಇದರಿಂದ ನಿಮ್ಮ ಆರೋಗ್ಯ ಉತ್ತಮಗೊಳ್ಳುತ್ತದೆ."

ಗುರುದೇವರೆಂದರು– "ನಿಮ್ಮ ಸಲಹೆ ನಾನು ಎಂದೂ ಒಪ್ಪಲಾರೆ."

ಬಾಪೂಜಿ– "ಏಕೆ?"

ರವೀಂದ್ರರು– "ನನ್ನ ಹನ್ನೆರಡನೇ ವರ್ಷ ವಯಸ್ಸಿನಲ್ಲಿ ನನಗೆ ಬ್ರಹ್ಮೋಪದೇಶವಾಯಿತು. ಆಗ ನಾನು ಹಗಲು ಹೊತ್ತು ಎಂದೂ ನಿದ್ರೆ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದೆ. ಆ ವ್ರತವನ್ನು ಈ ತನಕ ಭಂಗಗೊಳಿಸಿಲ್ಲ. ಈಗ ಅದನ್ನು ಭಂಗಗೊಳಿಸುವುದಾದರೂ ಎಂತು ನೀವೇ ಹೇಳಿ."

ಕೇಳಿ ಬಾಪೂಜಿ ಸ್ತಬ್ಧರಾದರು. ಹನ್ನೆರಡನೇ ವರ್ಷ ವಯಸ್ಸಿನಿಂದ ಅಂದರೆ ಸುಮಾರು ೬೮ ವರ್ಷಕಾಲ ಗುರುದೇವರು ಎಂದೂ ಹಗಲಿನಲ್ಲಿ ವಿಶ್ರಮಿಸಿಕೊಳ್ಳಲಿಲ್ಲ! ಎಂತಹ ಅಚಲ ಸಾಧನೆ! ಗದ್ಗದರಾಗಿ ಬಾಪೂಜಿಯವರು ವಿಶ್ವವಂದ್ಯ ರವೀಂದ್ರರ ಚರಣ ಸ್ಪರ್ಶಿಸಿದರು.

—ಸಂಗ್ರಹ: ರಾ. ನಾ. ರತನ

# ಸಮುದ್ರದಲ್ಲಿ ತೇಲುವ ಚಿನ್ನ

ಎಂ. ವಿ. ನಾಗರಾಜ

ಸಮುದ್ರದಲ್ಲಿ ದೊರಕುವ ವಸ್ತುಗಳಲ್ಲಿ 'ಅಂಬರ್‌ಗ್ರೀಸ್" ನಷ್ಟು ರಹಸ್ಯ ಪರಂಪರೆ ಹೊಂದಿರುವ ವಸ್ತು ಮತ್ತೊಂದಿಲ್ಲ. ನಿಸ್ತೇಜವಾಗಿ ಕಾಣುವ, ವಿವಿಧವರ್ಣದ ಮೇಣದಂತಹ ಈ ವಸ್ತು ಅನೇಕ ಶತಮಾನಗಳಿಂದಲೂ ಅತ್ಯಮೂಲ್ಯವಾದ ಚಿನ್ನದಷ್ಟು ಬೆಲೆಯುಳ್ಳ ಸಂಪತ್ತಾಗಿದೆ. ಈ ವಸ್ತುವಿನ ಸೃಷ್ಟಿಗೆ ತಿಮಿಂಗಿಲವೇ ಕಾರಣ ಎನ್ನುವುದು ತಿಳಿದುಬಂದಿತು. "ಸ್ಪರ್ಮ್ ವ್ಹೇಲ್" ಎಂಬ ಉಪವರ್ಗದ ತಿಮಿಂಗಲವು "ಸ್ಕ್ವಿಡ್ಸ್" ಎಂಬ ಗಿಣಿಕೊಕ್ಕಿರುವ ಸಮುದ್ರ ಜೀವಿಯನ್ನು ತಿಂದು ಬದುಕುತ್ತದೆ. ಈ ಪ್ರಾಣಿಯನ್ನು ತಿಮಿಂಗಿಲವು ತಿಂದಾಗ ಒಮ್ಮೊಮ್ಮೆ ಅಜೀರ್ಣವಾಗಿ ವಾಂತಿಯಾಗುತ್ತದೆ. ಹೀಗೆ ವಾಂತಿಯಾದ ವಸ್ತುವೇ "ಅಂಬರ್‌ಗ್ರೀಸ್" ಎಂಬ ತೇಲುವ ಚಿನ್ನವಾಗಿದೆ. ಈ ವಸ್ತು ಉತ್ಕೃಷ್ಟ ದರ್ಜೆಯ ಪರಿಮಳವಾಗಿದೆ!

ಈ ವಸ್ತುವಿಗೆ ಹೇಗೆ ಬೆಲೆ ಬಂದಿತು ಮತ್ತು ಅದರ ಉಪಯುಕ್ತತೆಯನ್ನು ಹೇಗೆ ಕಂಡುಹಿಡಿಯಲಾಯಿತು ಎಂಬುದು ಇಂದಿಗೂ ಐತಿಹಾಸಿಕ ರಹಸ್ಯವಾಗಿದೆ. ಈ ವಸ್ತುವನ್ನು ಅನೇಕ ವಿಧದಲ್ಲಿ ಉಪಯೋಗಿಸಿದ ದಾಖಲೆಗಳಿವೆ. "ಅಂಬರ್‌ಗ್ರೀಸ್" ಗೆ ಬೆಲೆದೊರಕುತ್ತ ಬಂದಂತೆ ಅದು ವ್ಯಾಪಾರಿಗಳ ಕಣ್ಮಣಿಯಾಯಿತು. ತುರ್ಕರು ಈ ಪರಿಮಳವನ್ನು ಅಡಿಗೆಗೆ ರುಚಿ ನೀಡುವ ಸಾಂಬಾರವಾಗಿ ಉಪಯೋಗಿಸುತ್ತಿದ್ದರು, ವಶೀಕರಣ ಮೂಲಿಕೆಯಾಗಿ ಉಪಯೋಗಿಸುತ್ತಿದ್ದರು. ೧೬ ಮತ್ತು ೧೭ ನೆಯ ಶತಮಾನಗಳಲ್ಲಿ ಅಂಬರ್‌ಗ್ರೀಸನ್ನು ಸರ್ವರೋಗ ನಿವಾರಿಣಿಯೆಂದು ಭಾವಿಸಲಾಯಿತು. ಹೃದ್ರೋಗ, ಹುಚ್ಚು, ಉನ್ಮಾದ, 'ಹೈಡ್ರೊಫೋಬಿಯ' ಸಂಧಿವಾತ ಮುಂತಾದ ರೋಗಗಳ ನಿವಾರಣೆಗೆ ರಾಮಬಾಣವಾಯಿತು. ಅರಬರು, ಪರ್ಷಿಯನ್ನರು, ಮೂರರು, ಪೋರ್ಚುಗೀಸರು ಮತ್ತು ಸ್ಪ್ಯಾನಿಷ್ ಜನರು ಈ ವಸ್ತುವನ್ನು ಮಾರಾಟ ಮಾಡುತ್ತಿದ್ದರು. ಜಾಣರಾದ ಮೂರರು ತಮ್ಮ ಒಂಟೆಗಳಿಗೆ ಸಮುದ್ರ ತೀರಗಳಲ್ಲಿ ಈ ಅಂಬರದ ಗಡ್ಡೆಗಳನ್ನು ಹುಡುಕುವ ಕಲೆಯನ್ನು ಕಲಿಸಿದ್ದರು.

ಹಿಂದಿನ ಕಾಲದಲ್ಲಿ ಸಮುದ್ರಗಳಲ್ಲಿ ತಿಮಿಂಗಿಲಗಳು ಅಗಾಧ ಸಂಖ್ಯೆಯಲ್ಲಿರುತ್ತಿದ್ದವು. ಉಷ್ಣವಲಯದ ಸಮುದ್ರಗಳಲ್ಲಿ ಅವುಗಳ ಸಂಖ್ಯೆ ಹೇರಳವಾಗಿತ್ತು. ಆಗ ಅಂಬರ್‌ಗ್ರೀಸಿನ ಉತ್ಪಾದನೆಯೂ ವಿಪುಲವಾಗಿತ್ತು. ಆದರೆ ತಿಮಿಂಗಿಲದ ಬೇಟೆ ಆರಂಭವಾದ ನಂತರ ಈ ಸುಗಂ-

ಧದ ಗಡೆಯ ಪ್ರಮಾಣ ತೀವ್ರವಾಗಿ ಕ್ಷೀಣಿಸಿ ಹೋಗಿದೆ.

೧೭ ನೇ ಶತಮಾನದಲ್ಲಿ ಪ್ರಕಟವಾಗಿರುವ ಗ್ರಂಥದಲ್ಲಿ ನಿರೂಪಿಸಿರುವ ಪ್ರಕಾರ ಅಂಬರ್ ಗ್ರೀಸಿಗೆ ಪುನಶ್ಚೇತನ ನೀಡುವ ಗುಣವೂ ಪ್ಲೇಗ್ ರೋಗವನ್ನು ನಿರೋಧಿಸುವ ಶಕ್ತಿಯೂ ಇದೆ-ಯೆಂದು ತಿಳಿದುಬಂದಿದೆ.

ಅಂಬರ್ ಗ್ರೀಸಿನ ಬಣ್ಣದ ಮೇಲೆ ಅದರ ಬೆಲೆ ಅಡಗಿದೆ. ಬಿಳಿಯ ವರ್ಣದ ಅಂಬರ್ ಗ್ರೀಸಿಗೆ ಅಸಾಧಾರಣ ಬೆಲೆ ಸಿಗುತ್ತದೆ. ಒಂದು ಔನ್ಸ್‌ಗೆ ಮೂರು ಪೌಂಡ್ ಬೆಲೆ ಬರುತ್ತದೆ. ಮೂಲ ಅಂಬರ್‌ಗ್ರೀಸಿಗಿಂತಲೂ ಅರವತ್ತರಷ್ಟು ಅತ್ಯುತ್ಕೃಷ್ಟವೆಂದು ಹೇಳಿ ತಯಾರಿಸಿದ ಕೃತಕ ಅಂಬರ್ ಗ್ರೀಸಿಗೆ ಔನ್ಸ್ ಒಂದಕ್ಕೆ ಒಂಭತ್ತು ಪೌಂಡ್ ಬೆಲೆ ಸಿಕ್ಕಿತು! ಕೆಲ ಸಲ ಅಂಬರ್ ಗ್ರೀಸನ್ನು ಮಾರುವವರಿಗೆ ೫,೦೦೦ ಪೌಂಡಿನಿಂದ ೩೦,೦೦೦ ಪೌಂಡ್ ಹಣ ನಿರಾಯಾಸವಾಗಿ ಸಿಗುತ್ತದೆ. ಕಳೆದ ಶತಮಾನದ ಕೊನೆಯಲ್ಲಿ ದೊರಕಿದ ಒಂದು ಗಡ್ಡೆ ಅಂಬರ್ ಗ್ರೀಸಿಗೆ ಪ್ಯಾರೀಸ್ ನಗರದಲ್ಲಿ ೧೮,೩೬೦ ಪೌಂಡ್ ಬೆಲೆ ದೊರಕಿತು! ಅಮೇರಿಕಾದ ಮೀನುಗಾರಿಕೆ ಹಡಗೊಂದಕ್ಕೆ ಬಹು ಭಾರಿ ಅಂಬರ್ ಗ್ರೀಸ್ ಗಡ್ಡೆ ದೊರಕಿ, ಅದರ ಮಾಲೀಕರಿಗೆ ೩೦,೦೦೦ ಪೌಂಡ್ ಹಣ ಸಿಕ್ಕಿತು!

ಒಬ್ಬಾಕೆ ಸಮುದ್ರ ದಂಡೆಯ ಬಂಡೆಯ ಮೇಲೆ ವಿರಮಿಸಲು ಕುಳಿತಾಗ, ಆಕೆಯ ಬಟ್ಟೆ ಆ ಬಂಡೆಗೆ ಅಂಟಿಕೊಂಡಿತು; ನಂತರ ಅದು ಅಂಬರ್‌ಗ್ರೀಸಿನ ಬೃಹದ್ ಗಡ್ಡೆ ಎಂಬುದು ತಿಳಿದು ಬಂದುದಲ್ಲದೆ, ಅದಕ್ಕೆ ಸಹಸ್ರಾರು ಪೌಂಡ್ ಬೆಲೆಯೂ ದೊರಕಿತು!

ಈ ಪರಿಮಳದ ವಾರ್ಷಿಕ ಉತ್ಪತ್ತಿ ಬಹು ಸ್ವಲ್ಪ; ಕೆಲವೊಮ್ಮೆ ಕೇವಲ ಕೆಲವು ಪೌಂಡ್ ತೂಕದಷ್ಟು ಮಾತ್ರ ಸಿಗುತ್ತದೆ. ಈ ಪರಿಮಳದ ರಾಸಾಯನಿಕ ಸಂಯೋಜನೆಯನ್ನು ಇಂದಿಗೂ ವಿಭಜಿಸಿ ತಿಳಿಯಲಾಗಿಲ್ಲ. ಮತ್ತೊಂದು ಕೌತುಕಕಾರಿ ಗುಣವೆಂದರೆ, ಇತರ ಪರಿಮಳ ದ್ರವ್ಯದೊಂದಿಗೆ ಸಂಯೋಜನೆ ಮಾಡಿದರೆ ಅದಕ್ಕೆ ತಕ್ಕ ರೀತಿಯಲ್ಲಿ ಹೊಂದಿಕೊಳ್ಳುತ್ತದೆ. ಅಂಬರ್ ಗ್ರೀಸನ್ನು ಪರೀಕ್ಷಿಸುವ ತಜ್ಞರು ಉನ್ನತ ಕಲಾವಿದರಂತೆ ದುಡಿಯುತ್ತಾರೆ; ಇಲ್ಲದಿದ್ದರೆ ಕೃತಕ ಸೃಷ್ಟಿಯ ವಸ್ತುಗಳನ್ನು ನೈಜ ಪರಿಮಳದಿಂದ ಬೇರ್ಪಡಿಸುವುದು ಅಸಾಧ್ಯವಾಗುತ್ತದೆ.

'ಸ್ಪರ್ಮ್‌ವ್ಹೇಲ್' ವರ್ಗದ ತಿಮಿಂಗಿಲ ಸಮುದ್ರದಲ್ಲಿ ಜೀವಿಸಿರುವ ವರೆಗೆ ಈ ಪರಿಮಳ ದ್ರವ್ಯದ ಸೃಷ್ಟಿ ನಿಸರ್ಗದತ್ತವಾಗಿ ಸಾಗುತ್ತದೆ ★



## ಹೆಣ್ಣು-ಹೆಣ್ಣನ್ನು ಕುರಿತು

ದೇವರು ನನ್ನನ್ನು ಗಂಡಾಗಿ ಹುಟ್ಟಿಸದಿದ್ದುದು ನನ್ನ ಪುಣ್ಯ. ಇಲ್ಲದಿದ್ದರೆ ಯಾರಾದರೊಬ್ಬ ಹೆಂಗಸನ್ನು ನಾನು ಮದುವೆಯಾಗಬೇಕಾಗುತ್ತಿತ್ತು!

— ಮದಾಂ ಸ್ಟಾಲ್















ಕಾಮನಬಿಲ್ಲಿನ ನಾಲ್ಕು
ಬಣ್ಣಗಳಲ್ಲಿ ನನ್ನ ಲಕ್ಸ್
-ಹೌದು, ಬಿಳಿಬಣ್ಣದಲ್ಲಿ
ಕೂಡ ಇದೆ'

ಎಂದು ಅನ್ನುತ್ತಾಳೆ
ಎಂ. ಎನ್. ರಾಜಂ

LTS. 82.X29 KN

ಹಿಂದುಸ್ಥಾನ್ ಲೀವರ್ ಅವರ ತಯಾರಿ

# ಪ್ರಾಣಿಜೀವನದ ಅದ್ಭುತ ವೈಚಿತ್ರ್ಯಗಳು!

ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

ಜೀವಜಗತಿನಲ್ಲಿ ಕಂಡುಬರುವ ಅತ್ಯಾಶ್ಚರ್ಯಕರವಾದ ಅನೇಕ ಸಂಗತಿಗಳು ಮಾನವನನ್ನು ಸ್ತಂಭೀಭೂತನನ್ನಾಗಿ ಮಾಡಿ, ಪ್ರಕೃತಿಯ ಮಹಿಮೆ ಎಷ್ಟು ಅಗಾಧವಾದುದೆಂಬುದನ್ನು ವ್ಯಕ್ತಪಡಿಸುತ್ತವೆ.

ಜಗತ್ತಿನ ಪ್ರಾಣಿಗಳಲ್ಲೆಲ್ಲಾ ಅತ್ಯಂತ ದೊಡ್ಡದಾಗಿಯೂ ಬಲಶಾಲಿಯಾಗಿಯೂ ಇರುವ, ೧೦೦ ಅಡಿ ಉದ್ದ ೧೧೦ ಟನ್ ತೂಕದ, ನೀಲ ತಿಮಿಂಗಿಲವು (blue whale) ಕೇವಲ ಚಿಕ್ಕ ಪ್ರಾಣಿಗಳನ್ನೇ ತಿಂದು ಜೀವಿಸುತ್ತದೆ; ಇದು



ನೀಲ ತಿಮಿಂಗಿಲ

ಬಹು ವಿಚಿತ್ರವಾಗಿದೆ. ಈ ತಿಮಿಂಗಿಲದ ನಾಲಿಗೆಯೊಂದರ ತೂಕವೇ ಒಂದು ಟನ್; ಆದರೆ ಅದು ತಿನ್ನುವ ಪ್ರಾಣಿಗಳು ಬಲು ಚಿಕ್ಕವು. ಇಪ್ಪತ್ತು ಕುದುರೆಗಳನ್ನು ಕೊಲ್ಲಲು ಸಾಕಾದಷ್ಟು ಪರಿಮಾಣದಲ್ಲಿರುವ ಮಣಶಿಲೆ (arsenic) ಎಂಬ ವಿಷವನ್ನು, "ಹೆಡ್ಜ್ ಹಾಗ್" (hedge-hog) ಎಂಬ ಪ್ರಾಣಿಯು ಸಂಪೂರ್ಣವಾಗಿ ತಿಂದು, ಸುರಕ್ಷಿತವಾಗಿ ಜೀರ್ಣಿಸಿಕೊಳ್ಳುತ್ತದೆ. ಅದರ ನಿರ್ಮಾಣವು ಹೇಗಿದೆಯೆಂದರೆ ಅದಕ್ಕೆ ಯಾವ ವಿಷದ ಕೇಡೂ ತಟ್ಟುವುದಿಲ್ಲ. ದಕ್ಷಿಣ



ಹೆಜ್ ಹಾಗ್

ಕ್ಯಾಲಿಫೋರ್ನಿಯಾ ದೇಶದ ಮರುಭೂಮಿಗಳಲ್ಲಿ ಕುದಿಯುವ ನೀರಿನ ಊಟೆಗಳಲ್ಲಿ ಚಿಕ್ಕ ಮೀನುಗಳು (killifish) ತಲತಲಾಂತರದಿಂದ ನೆಲಸಿ ಹುಲುಸಾಗಿ ಬೆಳೆದು ಜೀವಿಸುತ್ತವೆ. ಕಾರ್ಪ್ (carp) ಎಂಬ ಪ್ರಾಣಿಯು ಮಂಜುಗಡ್ಡೆಯೊಳಗೆ ಅನೇಕ ತಿಂಗಳು ಜೀವಿಸಿರಬಲ್ಲದು.

ಕಪ್ಪೆಚಿಪ್ಪಿನ ಮೀನುಗಳ (oyster) ಒಂದು ಜಾತಿಯಲ್ಲಿ, ಹೆಣ್ಣು ಗಂಡಾಗಿಯೂ ಗಂಡು ಹೆಣ್ಣಾಗಿಯೂ ಪದೇ ಪದೇ ರೂಪ



ಚಿಪ್ಪು ಮೀನು

ಬದಲಿಸುತ್ತವೆ. ಇಂಗ್ಲಂಡಿನ ಪ್ಲಿಮತ್ ಎಂಬ ಊರಿನಲ್ಲಿರುವ ಸಾಮುದ್ರ ಪ್ರಾಣಿಶಾಸ್ತ್ರ ಸಂಘವು ಈ ಪ್ರಾಣಿ ಗಂಡು ಜಾತಿಯಿಂದ ಹೆಣ್ಣು ಜಾತಿಗೆ ವರ್ಷಕ್ಕೆ ನಾಲ್ಕು ಸಾರಿ ಬದಲಾಯಿಸುವುದೆಂದು ಪ್ರಮಾಣಪಡಿಸಿದೆ. ಮೆ-ಕ್ಸಿಕೊ ದೇಶದ ನದಿಗಳಲ್ಲಿ ವಾಸಿಸುವ ಕತ್ತಿ ಬಾಲದ ಮೀನುಗಳು ( Swordtail fish ) ಮೂರು ಸಾರಿ ಮರಿಗಳನ್ನು ಹಾಕಿದ ನಂತರ, ವಿಜ್ಞಾನಿಗಳಿಗೆ ಇದುವರೆಗೂ ಪೂರ್ತಿಯಾಗಿ ಅರ್ಥವಾಗದಿರುವ ಯಾವುದೋ ಕಾರಣದಿಂದ, ಕೆಲವು ಸಾರಿ ಗಂಡು ಜಾತಿಗೆ ಮಾರ್ಪಡುತ್ತವೆ. ಸ್ಮೆಲ್ಟ್ ( Smelt ) ಎಂಬ ಜಾತಿಯ ಮೀನಿಗೆ ಹೃದಯವು ಅದರ ಬಾಯಿಯಲ್ಲಿದೆ. ಕೆಲವು ಪ್ರಾಣಿಗಳ ರಕ್ತದ ಉಷ್ಣಾಂಶವು ಎಷ್ಟು ಹೆಚ್ಚೆಂದರೆ, ರಕ್ತವು ನಾಳಗಳಲ್ಲಿ ಕುದಿಯುತ್ತಾ ಸುತ್ತು ತಿರುಗುತ್ತದೆ. ಜೇನುಹುಳಕ್ಕೆ ೧೨,೦೦೦ ಕಣ್ಣುಗಳಿವೆ. ಪತಂಗ ( Butterfly )ದ ಒಂದು ಕಣ್ಣಿನಲ್ಲಿ ೧೭,೦೦೦ ಚಿಕ್ಕ ಕಣ್ಣುಗಳೂ ಡ್ರಾಗನ್ ಫ್ಲೈಗೆ ೨೮,೦೦೦ ಕಣ್ಣುಗಳೂ ಇವೆ.

"ನೀರು ಕರಡಿ" ಎಂಬ ಹೆಸರಿನ ಒಂದು ಸಣ್ಣ ಪ್ರಾಣಿಯು ಸ್ವಾಭಾವಿಕವಾಗಿ ತೇವದ ವಾತಾವರಣದಲ್ಲಿ ಜೀವಿಸುತ್ತದೆ. ಒಣಗಾಳಿಯಲ್ಲಿ ಆ ಪ್ರಾಣಿಯು ಒಣಗಿ ಹೋಗಿ, ಅದರ ಚಲನೆಯು ಸಂಪೂರ್ಣವಾಗಿ ನಿಂತು ಹೋಗುತ್ತದೆ. ಅದರ ಶರೀರವು ಮುದುಡಿ ಹೋಗಿ, ಆ ಪ್ರಾಣಿಯು ಜೋಲುಬಿದ್ದು ಸುಕ್ಕುಗಟ್ಟಿರುವ ಬಿತ್ತದಂತೆ ಕಾಣಿಸಿಕೊಂಡು, ವರ್ಷ ವರ್ಷವೂ ನಿರ್ಜೀವ ವಸ್ತುವಿನಂತೆ ಇರುವುದು. ನೀರಿನಲ್ಲಿ ಹಾಕಲ್ಪಟ್ಟರೆ ಅದು ಕೆಲವು ನಿಮಿಷಗಳಲ್ಲೇ ಉಬ್ಬಿ, ಸುಕ್ಕುಗಳು ಅದೃಶ್ಯವಾಗುತ್ತವೆ; ಮತ್ತು ಅದು ಕ್ರಮೇಣ ಚಲಿಸತೊಡಗುವುದು. ಒಂದು ಗಂಟೆಯ ಅವಧಿಯಲ್ಲಿ ಅದು ಯಥಾವಸ್ಥಿತ ಜೀವಕಳೆ, ಚಟುವಟಿಕೆಯನ್ನು ತಿರುಗಿ ಹೊಂದುವುದು. ಜಾಡರ ಹುಳಗಳಿಗೆ ಎರಡು ವರ್ಷಗಳ ಕಾಲ ಏನನ್ನೂ ತಿನ್ನದೆ, ತಮ್ಮ ಶರೀರದಲ್ಲಿನ ಸಂಗ್ರಹದಿಂದಲೇ ಜೀವಿಸುವ ಶಕ್ತಿಯಿದೆ. ಕರಡಿ, ಬಾವಲಿ, ನೆಲಗರಡಿ(Badger) ಅನೇಕ ಹರಿದಾಡುವ ಜಂತುಗಳು ಮತ್ತು ಕೆಲವು ಇತರ ಪ್ರಾಣಿಗಳು ಚಳಿಗಾಲದಲ್ಲಿ ಆಹಾರ ಸರಬರಾಯಿ ನಿಂತುಹೋಗಿ, ದೀರ್ಘ ನಿದ್ರಿತ ಸ್ಥಿತಿಯನ್ನು ಹೊಂದಿ, ಬೇಸಿಗೆ ಕಾಲದಲ್ಲಿ ತಮ್ಮ ಶರೀರದಲ್ಲಿ ಶೇಖರಿಸಿದ್ದ ಕೊಬ್ಬಿನಿಂದ ಜೀವಂತವಾಗಿರುತ್ತವೆ. ಶ್ವಾಸೋಚ್ಛ್ವಾಸ ಕ್ರಿಯೆಯು ನಿಂತು ದೇಹತಾಪವು ಕಡಮೆಯಾಗಿ, ಮಲವಿಸರ್ಜನೆಯೂ ನಿಂತುಹೋಗುತ್ತದೆ. ಆದರೂ ಜೀವವಿರುತ್ತದೆ.



ನೆಲಗರಡಿ

ಕೆಲವು ಜಾತಿಯ ಮೀನುಗಳಿಗೆ ಒಂದು ವಿಶೇಷ ಬಗೆಯ ಅಂಗವಿದೆ. ಇದರಿಂದ ಅವು ವಿದ್ಯುಚ್ಛಕ್ತಿಯನ್ನು ಉತ್ಪನ್ನಮಾಡಿ ತೀವ್ರವಾದ ಷಾಕ್‌ಗಳಿಂದ ತಮ್ಮ ವೈರಿಗಳನ್ನು ಧ್ವಂಸ ಮಾಡುತ್ತವೆ. ಕೆಲವು ಜೀವಿಗಳು ಸೌಮ್ಯವಾಗಿ ಷಾಕ್ ಕೊಡುವುದರಿಂದ ಅವುಗಳನ್ನು ಹಿಂದಿನ ಕಾಲದಲ್ಲಿ ಸಂಧಿವಾತಜ್ವರ (rheumatism) ಚಿಕಿತ್ಸೆಗಾಗಿ ಉಪಯೋಗಿಸುತ್ತಿದ್ದರು. ಆ ರೋಗಿಯನ್ನು ಬರೀ ಕಾಲುಗಳಲ್ಲಿ ಆ ಪ್ರಾಣಿಯ ಮೇಲೆ ನಿಲ್ಲುವಂತೆ ಮಾಡಿ, ಷಾಕ್‌ಗಳಿಂದ ರೋಗವನ್ನು ಗುಣಪಡಿಸುತ್ತಿದ್ದರು. ವರ್ಷದಲ್ಲಿ ಕೆಲವು ಕಾಲ ನೀರಿನಲ್ಲಿಯೂ ಮತ್ತೆ ಕೆಲವು ಕಾಲ ಭೂಮಿಯ ಮೇಲೂ ಜೀವಿಸುವ ಪ್ರಾಣಿಗಳೂ ಇವೆ. ಅವು ಮಳೆಗಾಲದಲ್ಲಿ ನೀರನ್ನು ಬಿಟ್ಟು ಭೂಮಿಗೆ ಬರುತ್ತವೆ. ಆಗ ಅವಕ್ಕೆ ಕಾಲುಗಳೂ ಇತರ ಬೇಕಾದ ಸಲಕರಣೆಗಳೂ

ತಾವಾಗಿಯೇ ಉದ್ಭವಿಸುತ್ತವೆ. ಭೂಮಿಯು ಒಣಗಿದಾಗ ಆ ಪ್ರಾಣಿಗಳು ನೀರನ್ನು ಸೇರುತ್ತವೆ. ಆಗ ಕಾಲುಗಳು ಅದೃಶ್ಯವಾಗಿ ಹೊಸ ವಾತಾವರಣಕ್ಕೆ ತಕ್ಕ ಸಲಕರಣೆಗಳು ಉದ್ಭವಿಸುತ್ತವೆ.

ಮೀನುಗಳಿಗೆ ಕಣ್ಣಿನ ರೆಪ್ಪೆಗಳಿಲ್ಲ. ಆದ್ದರಿಂದ ಅವುಗಳು ಕಣ್ಣು ತೆರೆದುಕೊಂಡೇ ನಿದ್ದೆ ಮಾಡುತ್ತವೆ. ಚಿನ್ನದ ಮೀನು (gold fish) ಸಾಮನ್ (salman) ಮತ್ತು ಪೈಕ್ ಎಂಬ ಮೂರು ಜಾತಿಯ ಮೀನುಗಳು ಮಾತ್ರ ನಿದ್ದೆಯನ್ನೇ ಮಾಡುವುದಿಲ್ಲ. ಸಮುದ್ರ ಸೌತೆಕಾಯಿ (sea-cucumber) ಎಂಬ ಪ್ರಾಣಿಯು, ಶತ್ರು



ಸಾಮನ್

ಗಳು ಅಟ್ಟಿಕೊಂಡು ಬಂದು ಪ್ರಾಣಸಂಕಟಕ್ಕೆ ಗುರಿಯಾದಾಗ, ತನ್ನ ಮೈಯೊಳಗಿನ ಕೆಲವು ಅಂಗಗಳನ್ನು ಹೊರತೆಗೆದು ಶತ್ರುವಿಗೆ ಒಗೆದು, ತಪ್ಪಿಸಿಕೊಂಡು ಹೋಗುತ್ತದೆ. ಈ ಅಂಗಗಳು ಪುನಃ ಬೆಳೆಯುವುವು.

ಗುಹೆಗಳಲ್ಲಿ ವಾಸ ಮಾಡುವ ಕೆಲವು ಜೀವಿಗಳಿಗೆ ಕಣ್ಣುಗಳು ಚರ್ಮದೊಳಗೆ ಅಡಗಿರುವುದರಿಂದ ಅವು ಸದಾ ಕುರುಡಾಗಿಯೇ ಇರುತ ವೆ. ಅವುಗಳ ಚರ್ಮವು ಕಣ್ಣು ಕೋರೈಸುವ ಬಣ್ಣದ್ದು ; ಆದರೆ ಅದರಲ್ಲಿ ಒಂದು ಬಗೆ ರಾಸಾಯನಿಕ ಪದಾರ್ಥವಿರುವುದರಿಂದ, ಆ ಚರ್ಮಕ್ಕೆ ಬೆಳಕು ತಗಲಿದರೆ ಅದು ಫೋಟೋ ತೆಗೆಯುವ ಪ್ಲೇಟ್ ಬೆಳಕಿನಿಂದ ಹೇಗೆ ಕಪ್ಪಾಗುವುದೋ ಹಾಗಾಗುವುದು. ವಿಯನ್ನಾ ಪಟ್ಟಣದ ಒಬ್ಬ ಪ್ರವೀಣ ವಿಜ್ಞಾನಿ ಈ ಕೆಲವು ಪ್ರಾಣಿಗಳ ಅಸ್ಫುಟ ನೇತ್ರಗಳ ಮೇಲೆ, ಅವು ಹುಟ್ಟಿದಾಗಿನಿಂದ ಐದು ವರ್ಷಗಳ ಕಾಲ ಕೆಂಪು ದೀಪದ



ಹಿಮಕರಡಿ

ಕಿರಣಗಳನ್ನು ಪ್ರಯೋಗಿಸಿ ಅವು ಪರಿವರ್ತನೆಗೊಂಡು ಸ್ಪಷ್ಟವಾಗಿ ಕಾಣುವಂತೆ ಮಾಡಿದನು.

ಸಮುದ್ರದ ಅಗಾಧವಾದ ಆಳಗಳಲ್ಲಿ ಸದಾ ಗಾಢಾಂಧಕಾರದಲ್ಲಿ ವಾಸಿಸುವ ಅಸಂಖ್ಯಪ್ರಾಣಿಗಳಿಗೆ ಸ್ವಯಂಪ್ರಕಾಶಿಸಿ ದೀಪದ ಬೆಳಕನ್ನು ತೋರಿಸುವ ಅಸಾಧಾರಣ ಶಕ್ತಿಯಿದೆ. ಅವು ಈ ದೀಪಗಳನ್ನು ತಮ್ಮ ಇಚ್ಛೆ ಬಂದಂತೆ ನಂದಿಸಬಲ್ಲವು, ತಿರುಗಿ ಉತ್ಪನ್ನ ಮಾಡಬಲ್ಲವು. ಈ ಕಾಂತಿಯು ನಾನಾ ಆಕೃತಿಗಳಲ್ಲಿ, ನಾನಾ ರೂಪಗಳಲ್ಲಿ ಮತ್ತು ನಾನಾ ಬಣ್ಣಗಳಲ್ಲಿ ಕಂಗೊಳಿಸುತ್ತದೆ. ಕೆಲವು ಪ್ರಾಣಿಗಳು ತಮ ಶರೀರದೊಳಗೆ ಅನೇಕ ಮೀನುಗಳಿಗೆ ವಸತಿಯನ್ನು ಕೊಡುತ್ತವೆ. ಈ ಮೀನುಗಳು ಹಗಲೆಲ್ಲಾ ಆ ಪ್ರಾಣಿಗಳ ಶರೀರದೊಳಗೇ ಹೊಕ್ಕಿದ್ದು, ಕತ್ತಲಾದನಂತರ ಆಹಾರವನ್ನು ಹುಡುಕಲು ಶರೀರದ ಹೊರಗೆ ಬಂದು ಪುನಃ ಶರೀರದೊಳಗೇ ಪ್ರವೇಶಿಸುತ್ತವೆ. ನೇಪಲ್ಸ್ ಪಟ್ಟಣದ ಜಲಜೀವಿ ಸಂಗ್ರಹಾಲಯದಲ್ಲಿ (aquarium) ಅಂಥಾ ಪ್ರಾಣಿಯ ಶರೀರದೊಳಗೆ ಸುಮಾರು ಅರ್ಧ ಅಡಿಯ ಉದ್ದದ ಆರೇಳು ಮೀನುಗಳು ಹೋಗಿ ಬರುವುದನ್ನು ನೋಡಬಹುದು.

" ನಾಲ್ಕು ಕಣ್ಣಿನ ಮೀನು " ಎಂಬ ಪ್ರಾಣಿಗೆ ಎರಡೇ ಕಣ್ಣುಗಳಿದ್ದರೂ, ಒಂದೊಂದು ಕಣ್ಣಿನಲ್ಲೂ ಎರಡೆರಡು ಪ್ರತ್ಯೇಕ ಭಾಗಗಳಾಗಿ

ಎರಡೆರಡು ಕಣ್ಣುಗೊಂಬೆ (pupils) ಗಳಿವೆ. ಎಂದರೆ ನಾಲ್ಕು ಕಣ್ಣುಗಳಿದ್ದಂತಾಯಿತು. ಮೇಲಿನ ಎರಡು ಕಣ್ಣುಗಳು ಗಾಳಿಯಲ್ಲಿ ನೋಡುವುದಕ್ಕೂ ಕೆಳಗಿನ ಎರಡು ಕಣ್ಣುಗಳು ನೀರಿನೊಳಗೆ ನೋಡುವುದಕ್ಕೂ ತಕ್ಕವಾಗಿವೆ. ನೀರಿನ ಮೇಲೆ ಈಜುವಾಗ, ಎರಡು ಕಣ್ಣುಗಳು ನೀರಿನ ಮೇಲೆ ನೋಡುತ್ತಾ, ಎರಡು ಕಣ್ಣುಗಳು ನೀರಿನೊಳಗೆ ನೋಡುತಾ ,, ನಾಲ್ಕು ಕಣ್ಣುಗಳೂ ಒಂದೇ ಕಾಲದಲ್ಲಿ ತಮ್ಮ ಎರಡು ಕಾರ್ಯಗಳನ್ನೂ ಮಾಡುತ್ತವೆ. ಒಂದು ಜಾತಿಯ ಜಲಪ್ರಾಣಿಯು ಎರಡು ಹೊಂದುವಳಿಕೆಯ ( Symmetry ) ಕಣ್ಣುಗಳೊಡನೆ ಹುಟಿ ಈಜುತ್ತದೆ. ಕೆಲವು ತಿಂಗಳ ನಂತರ ಆ ಪ್ರಾಣಿಯು ಚಪ್ಪಟೆಯಾಗುತ್ತಾ ಹೋಗಿ, ಈಜುವ ಶಕ್ತಿಯನ್ನು ಕಳೆದುಕೊಂಡು ಸಮುದ್ರ ತಳಕ್ಕೆ ಬಿದ್ದು ಅಲ್ಲಿ ಜೀವಿಸುತ್ತದೆ. ಆಗ ಅದರ ಒಂದು ಕಣ್ಣು ತನ್ನ ಸ್ಥಳವನ್ನು ಬಿಟ್ಟು ಚಲಿಸುತ್ತಾ ಸ್ಥಾನಾಂತರ ಮಾಡಿ ಇನ್ನೊಂದು ಕಣ್ಣಿನ ಹತ್ತಿರ ಬಂದು ಸೇರಿಕೊಳ್ಳುತ್ತದೆ.

ಕೆಲವು ಪ್ರಾಣಿಗಳಿಗೆ ವಾಸನೆ ಹಿಡಿಯುವ ಶಕ್ತಿಯು ಅತ್ಯಂತ ತೀವ್ರವಾಗಿದೆ. ಜಿಂಕೆ ಮತ್ತು ಉತ್ತರ ಧ್ರುವದ ನರಿಗಳು ಆಹಾರವನ್ನೂ ಶತ್ರುಗಳನ್ನೂ ಅನೇಕ ಮೈಲುಗಳ ದೂರದಲ್ಲಿ ವಾಸನೆಯಿಂದ ತಿಳಿದುಕೊಳ್ಳುತ್ತವೆ. ಪತಂಗದ ಜಾತಿಯ ಒಂದು ಬಗೆಯ ಹೆಣ್ಣು ಹುಳವನ್ನು ಒಂದು ತೋ-ದಲ್ಲಿ, ರಾತ್ರಿಯಲ್ಲಿ ಪಂಜರದಲ್ಲಿ ಬಂಧಿಸಿಟ್ಟರೆ ಮನುಷ್ಯನಿಗೆ ತಿಳಿಯದ ಯಾವುದೋ ಉಪಕರಣದಿಂದ ಆ ಜಾತಿಯ ಗಂಡು ಹುಳಗಳು ನಾನಾ ದಿಕ್ಕುಗಳಿಂದ ಅನೇಕ ಮೈಲಿಗಳ ದೂರದಿಂದ ಬಂಧನದಲ್ಲಿರುವ ಹುಳುವಿನ ಸುತ್ತಲೂ ಬಂದು ಹಿಂಡುಗೂಡುತ್ತವೆ. ತಂತಿಯಿಲ್ಲದ (wireless) ಸುದ್ದಿಯು ಆ ಹಿಂಡಿಗೆಲ್ಲಾ ಮುಟ್ಟಿ ಅದರಿಂದ ಅವುಗಳೆಲ್ಲಾ ಬಂದಿವೆಯೋ ಎಂಬಂತೆ ವಿಸ್ಮಯವಾಗುತ್ತದೆ. ವಾಸನೆಯಿಂದ ವಸ್ತುಗಳನ್ನು ಕಂಡುಹಿಡಿಯುವುದರಲ್ಲಿ ನಾಯಿಗೆ ಅದ್ಭುತ ಸಾಮರ್ಥ್ಯವೂ ಜಾಣತನವೂ ಇವೆ. ಬೆರಳಿನ ತುದಿಯಿಂದ ಒಂದು ಮರದ ತುಂಡನ್ನು ಮುಟ್ಟಿ ಅದನ್ನು ಏಕರೂಪವಾದ (identical) ಐವತ್ತು ಇತರ ಮರದ ತುಂಡುಗಳ ಜತೆಯಲ್ಲಿಟ್ಟರೆ, ತರಬೇತು ಮಾಡಿದ ನಾಯಿಯು ಅದನ್ನು ವಾಸನೆಯಿಂದ ಪತ್ತೆ ಮಾಡುತ್ತದೆ. ಯಾರಾದರೂ ಹೊಸಬರು ಓಡಿಹೋದರೆ, ಎರಡು ದಿನಗಳಾದ ಮೇಲೂ ನಾಯಿಯು ಅವರು ಹೋದ ಹೆಜ್ಜೆಯ ಮಾರ್ಗದ ವಾಸನೆ ಹಿಡಿದು ಅವರನ್ನು ಹುಡುಕಿಕೊಡುವುದು.

ಅನೇಕ ಪ್ರಾಣಿಗಳಿಗೆ ವೈರಿಯನ್ನು ಮೋಸಗೊಳಿಸುವ ಯುಕ್ತಿ, ಸುಳಿವು ಗೊತ್ತಾಗದಂತಹ ಉಪಾಯ, ವೇಷಪಲ್ಲಟ ಮತ್ತು ಕಪಟರೂಪ ತಾಳುವ ಶಕ್ತಿಗಳಿವೆ. ಮರಳು, ಹುಲ್ಲು, ಮರಗಳು ಮತ್ತು ನೀರಿನಲ್ಲಿ ವಾಸಿಸುವ ಅನೇಕ ಜೀವಿಗಳು ಸುತ್ತ ಮುತ್ತಣ ಪ್ರದೇಶಗಳ ಪರಿಸ್ಥಿ



ರಾಸ್

ತಿಗೆ ಅನುಸಾರವಾಗಿ ರೂಪ, ಬಣ್ಣ, ವೃತ್ತಿಗ-ಳನ್ನು ಬದಲಿಸುವ ಶಕ್ತಿಯನ್ನು ಪಡೆದು ಶತ್ರುಗಳಿಂದ ಪಾರಾಗುತ್ತವೆ. ಡಾಫಿನ್ ಎಂಬ ಮೀನಿನ ಬಣ್ಣಗಳು ಎಷ್ಟು ಶೀಘ್ರವಾಗಿ ಬದಲಾಗುವುವೆಂದರೆ ಅವನ್ನು ಹಿಂಬಾಲಿಸುವುದಕ್ಕೆ ಮಾನವನ ಕಣ್ಣಿಗೂ ಮೆದುಳಿಗೂ ಅಸಾಧ್ಯ. ರಾಸ್ (Wrasse) ಎಂಬ ಪ್ರಾಣಿಯು ಯಾವ ಜಂತುವಿನ ಮೇಲೆ ಕುಳಿತುಕೊಳ್ಳುತ್ತದೋ ಆ ಜಂತುವಿನ ಬಣ್ಣವನ್ನು ಹೊಂದುವುದು. ವೈರಿಗಳು ಬೆನ್ನಟ್ಟಿದರೆ, ಅದು ಸುತ್ತಲಿನ ಯಾವುದಾದರೂ ಬಂಡೆಯ ಬಣ್ಣವನ್ನು ತಾಳಿ, ಕಣ್ಣು ಮಿಳಕಿಸು

ವುದರೊಳಗಾಗಿ ಮಾಯವಾಗುತ್ತದೆ.

ಜೇನು ಹುಳಗಳಿಗೆ ಒಂದು ನಿಶ್ಚಿತ ಭಾಷೆ ಇದೆ. ಒಂದು ಜೇನು ಆಹಾರವನ್ನು ಹುಡುಕಲು ಹೋಗಿ ತನ್ನ ಗೂಡಿಗೆ ಹಿಂತಿರುಗಿದಾಗ, ಆ ಸ್ಥಳವು ಎಷ್ಟು ದೂರದಲ್ಲಿದೆ, ಯಾವ ದಿಕ್ಕಿನಲ್ಲಿದೆ ಮುಂತಾದ ವಿಷಯಗಳನ್ನು ನರ್ತಿಸುವುದು, ಹೊಟ್ಟೆಯ ಭಾಗವನ್ನು ನಾನಾ ವಿಧಗಳಲ್ಲಿ ಅಲ್ಲಾಡಿಸುವುದು ಮೊದಲಾದ ವಿಚಿತ್ರ ಚಿಹ್ನಗಳಿಂದ ತನ್ನ ಒಡನಾಡಿ ಜೇನು ಹುಳಗಳಿಗೆ ತಿಳಿಯಪಡಿಸುತ್ತದೆ. ಗೂಡಿನಿಂದ ಐವತ್ತು ಗಜಗಳೊಳಗೆ ಆಹಾರವು ಸಮೃದ್ಧಿಯಾಗಿ ಸಿಕ್ಕಿದೆಯೆಂದು ತಿಳಿದರೆ, ಜೇನು ಹುಳವು ಹಿಂದಕ್ಕೆ ಹಾರಿಹೋಗಿ ಪ್ರದಕ್ಷಿಣೆಯ ರೂಪದಲ್ಲಿ ಸುತ್ತು ಹಾಕುತ್ತಾ ನರ್ತಿಸುತ್ತದೆ. ಇತರ ಜೇನುಗಳು ಅದನ್ನು ಹಿಂಬಾಲಿಸಿ ಆಹಾರ ಸ್ಥಳಕ್ಕೆ ಹೋಗುತ್ತವೆ. ಆಹಾರವು ನೂರಾರು ಗಜಗಳ ಆಚೆ ಇದರೆ ನರ್ತನವು ಬೇರೆ ರೀತಿಯಾಗುತ್ತದೆ. ಗ್ರೀಸ್ ದೇಶದ ತತ್ವಜ್ಞಾನಿ ಅರಿಸ್ಟಾಟಲ್‌ನು ಈ ನರ್ತನಗಳ ವಿವರಣೆಯನ್ನು ೨೨ ಶತಮಾನಗಳ ಹಿಂದೆಯೇ ತಿಳಿಸಿದ್ದನು. ಈಚಿನ ವಿಜ್ಞಾನಿಗಳು ಇವುಗಳನ್ನು ಪರಿಶೋಧಿಸಿ, ಶಾಸ್ತ್ರೀಯ ಕಟ್ಟಿಗೆ ತಂದು, ಇವೆಲ್ಲಾ ಒಂದು ನಿಶ್ಚಿತ ಭಾಷೆಯೆಂದು ಸ್ಥಿರಪಡಿಸಿದ್ದಾರೆ. ಅನೇಕ ವಿಷಯಗಳ ಬಗ್ಗೆ ದಿನವೆಲ್ಲಾ ಜೇನುಗಳು ಚರ್ಚೆ ನಡೆಸಬಹುದು. ಲಿಂಡೋರ್ ( Lindouer ) ಎಂಬ ವಿಜ್ಞಾನಿ ಇಂಥ ಚರ್ಚೆ, ಸಂಕೇತಗಳನ್ನೆಲ್ಲಾ ಮನನಮಾಡಿ ಪ್ರಮಾಣಪಡಿಸಿ, ಲಿಖಿತ ಮಾಡಿದ್ದಾನೆ. ✶



## ಮಹಾಪುರುಷರ ಧನಾರ್ಜನೆ

ಮಹಾ ತತ್ವಜ್ಞಾನಿ ಪ್ಲೇಟೊ ಈಜಿಪ್ಟ್ ದೇಶದಲ್ಲಿ ಪ್ರವಾಸ ಮಾಡುವಾಗ ಪ್ರಯಾಣದ ಖರ್ಚನ್ನು ದಾರಿಯುದ್ದಕ್ಕೂ ಎಣ್ಣೆ ಮಾರಾಟಮಾಡಿ ಗಳಿಸಿದ.

ಸ್ಪಿನೋಜನು ತತ್ವದರ್ಶನ ಸಂಶೋಧನೆಯಲ್ಲಿ ತೊಡಗಿದ್ದಾಗ ಗಾಜಿಗೆ ಮೆರಗು ಕೊಡುವುದರಿಂದ ಬಂದ ಹಣದಿಂದ ತನ್ನ ಜೀವನ ನಡೆಸಿದ.

ಸಸ್ಯಶಾಸ್ತ್ರಜ್ಞ ಲಿನ್ನಿಯಸನು ಚರ್ಮ ಹದ ಮಾಡುವುದರಿಂದಲೂ ಜೋಡು ತಯಾರಿಕೆಯಿಂದಲೂ ಹಣ ಗಳಿಸಿ ವಿದ್ಯಾಭ್ಯಾಸ ಮಾಡಿದ. ಷೇಕ್‌ಸ್ಪಿಯರ್ ಮಹಾಕವಿಯು ನಾಟಕ ಮಂಡಲಿಯೊಂದರ ವ್ಯವಸ್ಥಾಪಕನಾಗಿದ್ದಾಗ ಕವನಗಳು ಮತ್ತು ನಾಟಕಗಳನ್ನು ರಚಿಸಿದ.

ಮಿಲ್ಟನ್ ಮಹಾಕವಿಯು ಮೊದಲು ಶಾಲೆಯೊಂದರಲ್ಲಿ ಮಾಸ್ತರನಾಗಿದ್ದು ನಂತರ ಕಾಮನ್‌ವೆಲ್ತ್ ಕಾರ್ಯದರ್ಶಿಯಾಗಿದ್ದನು.

ವರ್ಡ್ಸ್‌ವರ್ತ್ ಮಹಾಕವಿಯು ಛಾಪಾಕಾಗದ ಮಾರುವವನಾಗಿದ್ದ. ಸ್ಕಾಟ್ ಮಹಾಕವಿಯು ನ್ಯಾಯಾಲಯವೊಂದರಲ್ಲಿ ಗುಮಾಸ್ತನಾಗಿದ್ದ. ಜ್ಯೋತಿಃಶಾಸ್ತ್ರಜ್ಞ ಬೆಯ್ಲಿಯು ವ್ಯಾಪಾರಸರಕುಸಂಗ್ರಹಕಾರನಾಗಿದ್ದ.

ಪ್ರಸಿದ್ಧ ರಸಾಯನಶಾಸ್ತ್ರಜ್ಞ ಅಲ್ಲೆನ್‌ನು ರೇಶ್ಮೆ ತಯಾರಕನಾಗಿದ್ದ. ಜಾನ್ ಸ್ಟುವರ್ಟ್ ಮಿಲ್ಲನು ಈಸ್ಟ್ ಇಂಡಿಯಾ ಕಂಪನಿಯ ಪರೀಕ್ಷಕ ವಿಭಾಗದಿಂದ ನಿವೃತ್ತ ಹೊಂದಿದ್ದ.

—ಹುಲ್ಸಾರ ಹೆಸರಘಟ್ಟ

# ಇದುವೆ ಜೀವ, ಇದು ಜೀವನ

ಎಸ್. ಎಸ್. ಎಲ್. ಸಿ. ಪಾಸ್‌ಮಾಡಿದ ಮೇಲೆ-ಒಂದು ವರ್ಷದಿಂದ ಅವ್ಯಾಹತವಾಗಿ ಕೈಯಲ್ಲಿ ಅರ್ಜಿಗಳನ್ನು ಹಿಡಿದು, ಕೆಲಸಕ್ಕಾಗಿ ಅಲೆಯುತ್ತಿದ್ದ ನನಗೆ ಫ್ಯಾಕ್ಟರಿಯೊಂದರಿಂದ ಸಂದರ್ಶನದ ಕರೆ ಬಂದಿತ್ತು. ನನಗಿದ್ದುದು ಮೂರೇ ಜೊತೆ ಬಟ್ಟೆ. ಒಂದು ಜೊತೆ ಅಲ್ಲಲ್ಲಿ ಹರಿದು ಹೋಗಿತ್ತು; ಇನ್ನೊಂದು ಜೊತೆ ಕೊಳೆಯಾಗಿತ್ತು; ಮತ್ತೊಂದು ಜೊತೆ ಶುಭ್ರವಾಗಿದ್ದುದು ಹಿಂದಿನ ದಿನ ಸಂಜೆ ಒಂದೇ ಸಮನಾಗಿ ಸುರಿಯತೊಡಗಿದ ಮಳೆಯಲ್ಲಿ ನಾನು ಮನೆಗೆ ಹಿಂತಿರುಗಿ ಬರುವಾಗ ಹವಾಯ್ ಚಪ್ಪಲಿಯ ಪ್ರಭಾವದಿಂದ ಹಿಂಭಾಗದಲ್ಲೆಲ್ಲಾ ಓಕುಳಿ ಚೆಲ್ಲಿದಂತೆ ಕೆಸರಿನ ಕಲೆಗಳನ್ನು ತುಂಬಿಕೊಂಡಿತ್ತು. ನೋಡ ನೋಡುತ್ತಿದ್ದಂತೆ ಕವಿದುಕೊಂಡು ಮಳೆ ಬರುತ್ತಿರುವಾಗ ಕೊಳೆಯಾಗಿದ್ದ ಬಟ್ಟೆಗಳನ್ನು ಒಗೆದರೂ ಅವು ಒಣಗುವ ಭರವಸೆಯಿರಲಿಲ್ಲ. ಆದ್ದರಿಂದ ಗತ್ಯಂತರವಿಲ್ಲದೆ ಕಲೆಯಾದ ಬಟ್ಟೆಯನ್ನೇ ಹಾಕಿಕೊಂಡು 'ಕರೆ'ಗೆ ಹೋಗಬೇಕಾಯಿತು.

ಫ್ಯಾಕ್ಟರಿಯವರಿಗೆ ಬೇಕಾಗಿದ್ದುದು ಒಬ್ಬ ಅಭ್ಯರ್ಥಿ. 'ಕರೆ'ಗೆ ಬಂದಿದ್ದವರು ಹತ್ತು ಜನ. ಆ ಪೈಕಿ ಮೂವರು ಅಸಂಪೂರ್ಣ ಪದವೀಧರರು. 'ಕೆಲಸ ಸಿಕ್ಕಿದ ಹಾಗೆಯೇ' ಎಂದು ಚಿಂತಾಕ್ರಾಂತನಾದರೂ ನನ್ನ ಸರದಿ ಬಂದಾಗ ಪರೀಕ್ಷಕರು ಕೇಳಿದ ಪ್ರಶ್ನೆಗಳಿಗೆಲ್ಲಾ ಸರಿಯಾದ ಉತ್ತರ ಕೊಟ್ಟೆ. ಹಿಂತಿರುಗಿ ಹೊರಕ್ಕೆ ಬರುವಾಗ ಪರೀಕ್ಷಕ ಮಂಡಲಿಯಲ್ಲಿ ಗಂಭೀರವಾಗಿದ್ದವರೊಬ್ಬರು (ಮಾಲೀಕರೆಂದು ಮುಂದೆ ಗೊತ್ತಾಯಿತು) ನನ್ನನ್ನು ಕರೆದು "ನಿಮ್ಮ ಬಟ್ಟೆಯ ಹಿಂಭಾಗದಲ್ಲಿ ಕಲೆ ಹೇಗಾಯಿತು?" ಎಂದು ಕೇಳಿದರು. ನಾಚಿಕೆಯಿಂದ ನಾನು ತಲೆ ತಗ್ಗಿಸಿದೆ. ಸಂತೈಸುವ ದನಿಯಲ್ಲಿ ಅವರೇ, "ಮನೆಯಿಂದ ಬರುವಾಗ ಜಯನಗರದ ಸರ್ಕಲಿನಲ್ಲಿ ಹುಡುಗ ಅಡ್ಡ ಬಂದಾಗ ನಾನು ಕಾರನ್ನು ಫುಟ್‌ಪಾತ್ ಕಡೆಗೆ ತಿರುಗಿಸಿದ ರಭಸಕ್ಕೆ ಹಳ್ಳದಲ್ಲಿದ್ದ ಕೆಸರು ಹಾರಿದ್ದು ನಿಮ್ಮ ಮೇಲೇ ಏನು?" ಎಂದು ಪ್ರಶ್ನಿಸಿದರು. ಏನು ಹೇಳಬೇಕೆಂದು ದಿಕ್ಕೇ ತೋಚದೆ ನಾನು ನಿರುತ್ತರನಾದೆ. ದೊಡ್ಡ ನಿಟ್ಟುಸಿರೊಂದನ್ನು ಬಿಟ್ಟು ಹಿಂದಕ್ಕೆ ಒರಗಿದ ಅವರು, "Poor Thing ಬಡಪಾಯಿ) ಚಿಂತಿಸಬೇಡಿ; ಖಾಲಿಯಿರುವ ಸ್ಥಾನಕ್ಕೆ ನಿಮ್ಮನ್ನೇ ತೆಗೆದುಕೊಳ್ಳುತ್ತೇನೆ" ಎಂದರು.

— ಮೂರ್ತಿ

ಒಬ್ಬ ಮಿತ್ರ ಹೇಳಿದ ಘಟನೆ ಇದು:

"ನಮ್ಮ ಇಂಜಿನಿಯರ ಸಾಹೇಬರ ಡ್ರಾಯವರ್ ನಿಮಗೆ ಗೊತ್ತಿರಬೇಕಲ್ಲ? ಆತನಿಗೆ ಬುದ್ಧಿ ಸ್ವಲ್ಪ ಕಡಮೆ. ಒಂದು ಸಲ ನಮ್ಮ ಸಾಹೇಬರಿಗೆ ಕಾರ್ಯನಿಮಿತ್ತವಾಗಿ ಇಪ್ಪತ್ತು ಮೈಲಿ ದೂರವಿರುವ ಹಳ್ಳಿಗೆ ಹೋಗಬೇಕಿತ್ತು. ಹಳ್ಳಿಯಿಂದ ೩-೪ ಮೈಲಿ ಬಂದಾಗ ಡ್ರಾಯವರನಿಗೆ ಕಾರು ನಿಲ್ಲಿಸಲು ಹೇಳಿ ಮೂತ್ರ ಶಂಕೆಗಾಗಿ ರಸ್ತೆ ಬಿಟ್ಟು ಸ್ವಲ್ಪ ದೂರವೇ

ಹೋದರು. ಡ್ರಾಯವರ್ ಮುಂದೆ ನೋಡುತ್ತ ಕೂತೇ ಇದ್ದ. ಎರಡು ನಿಮಿಷ ವಾದ ನಂತರ ಕಾರಿನ ಬಾಗಿಲು ಜೋರಾಗಿ ಹಾಕಿಕೊಂಡಿತು. ಡ್ರಾಯವರ್ ಕೂಡಲೇ ಕಾರು ಬಿಟ್ಟ. ಕಾರು ಹತ್ತು ಮೈಲು ದೂರ ಬಂದಾಗ ನದಿ ದಾಟಲೆಂದು ಕಾರು ನಿಲ್ಲಿಸಿ ಡ್ರಾಯವರ್ ಹಿಂದೆ ಬಂದು ಬಾಗಿಲು ತೆಗೆದರೆ ಅಲ್ಲಿ ಸಾಹೇಬರೇ ಇಲ್ಲ!

"ಸಾಹೇಬರು ಇಳಿದು ಹೊರಟಾಗ ಮರೆತು ಬಾಗಿಲನ್ನು ತೆರೆದಿಟ್ಟೇ ಹೋಗಿದ್ದರು. ಗಾಳಿ ಜೋರಾಗಿ ಬೀಸಿದ್ದರಿಂದ ಬಾಗಿಲು ದಢಾರನೇ ಹಾಕಿಕೊಂಡಿತು. ಡ್ರಾಯವರ್, ಸಾಹೇಬರು ಬಂದರೆಂದು ಕಾರು ಬಿಟ್ಟದ್ದ.

"ಹೌಹಾರಿದ ಡ್ರಾಯವರ್ ಕಾರನ್ನು ತಿರುಗಿಸಿ 'ಡಬಲ್ ಫಾಸ್ಟ್'ಗಿಂತಲೂ ವೇಗವಾಗಿ ಬಿಟ್ಟ. ಅವನಿಗೆ ಯೋಚಿಸುವುದಕ್ಕೂ ಅವಕಾಶವಿರಲಿಲ್ಲ. ಅವನ 'ದುರ್ದೈವ'ಕ್ಕೆ ನಡುದಾರಿಯಲ್ಲೇ 'ಡಬಲ್ ಡೆಕ್ಕರ್' ಟ್ರಕ್ಕೊಂದು ನಿಂತು ಬಿಡಬೇಕೇ? ದಾರಿ ಇಕ್ಕಟ್ಟಾಗಿತ್ತು. ಡ್ರಾಯವರನಿಗೆ ಟ್ರಕ್ಕನ್ನು ನಡುದಾರಿಯಲ್ಲಿ ನಿಲ್ಲಿಸಿದ್ದಕ್ಕಾಗಿ ಡ್ರಾಯವರ್ ನಂ. ೨. ನ ಮೇಲೆ ವಿಪರೀತ ಕೋಪ ಬಂತು. ಕಾರಿನಿಂದ ಕೆಳಗಿಳಿದು ಬಾಯಿಗೆ ಬಂದಂತೆ ಬಯ್ಯುತ್ತ ಟ್ರಕ್ಕಿನೆಡೆಗೆ ಹೋದ. ಟ್ರಕ್ಕಿನ ಬಾಗಿಲು ತೆಗೆದು ಅವನ ಇಂಜನಿಯರ್ ಸಾಹೇಬರು ನಿಧಾನವಾಗಿ ಕೆಳಗಿಳಿಯುತ್ತಿರುವುದು ಕಾಣಿಸಿತು!

"ಇಬ್ಬರಿಗೂ ಪರಿಸ್ಥಿತಿಯ ಅರಿವಾಗಿತ್ತು. ಸಾಹೇಬರು ಉರಿಮುಖದಿಂದ ಸುಮ್ಮನೇ ಹೋಗಿ ಕಾರಿನಲ್ಲಿ ಕುಳಿತರು. ಡ್ರಾಯವರ್ ಬೆಣ್ಣೆ ತಿಂದ ಬೆಕ್ಕಿನಂತೆ ಒಳಹೊಕ್ಕು ಕಾರನ್ನು ಮುಂದೆ ಒಯ್ದು ಹಿಂದಕ್ಕೆ ತಿರುಗಿಸಿದ.''

—ಕಲ್ಮನೆ ರಮೇಶ

ಅಂದು ನಾವು (ಮಲೇರಿಯಾ ಡಿಪಾರ್ಟ್‌ಮೆಂಟಿನವರು) ಕೌಲ್‌ಬಜಾರಿಗೆ ಡಿ.ಡಿ.ಟಿ ಸ್ಪ್ರೇಯಿಂಗ್ ಮಾಡುವುದಕ್ಕೆ ಹೋಗಿದ್ದೆವು. ವ್ಯಾನಿನಿಂದ ಇಳಿದ ಕೂಡಲೇ ಒಬ್ಬಾತ ನಮ್ಮ ಇನ್ಸ್‌ಪೆಕ್ಟರರ ಬಳಿ ಬಂದು ''ಮೂರು ದಿನದಿಂದ ಹೊಟ್ಟೆಗಿಲ್ಲ, ಏನಾದರೂ ಭಿಕ್ಷೆ ಕೊಡಿ'' ಎಂದು ಕೇಳಿದ. ಅವನೊಂದಿಗೆ ಅವನ ಇಬ್ಬರು ಸಣ್ಣ ಮಕ್ಕಳಿದ್ದರು. ನಮ್ಮ ಇನ್ಸ್‌ಪೆಕ್ಟರು "ಭಿಕ್ಷೆ, ಗಿಕ್ಷೆ ಏನೂ ಇಲ್ಲ. ಡಿ.ಡಿ.ಟಿ. ಹೊಡೆಯುವ ಕೆಲಸ ಕೊಡ್ತೀನಿ, ಮಾಡ್ತೀಯಾ?" ಎಂದು ಕೇಳಿದರು. ಆದಕ್ಕೆ ಆತ "ಸಂಬಳ ಎಷ್ಟು ಕೊಡ್ತೀರ ಸ್ವಾಮಿ?" ಎಂದು ಕೇಳಿದ. ದಿನಕ್ಕೆ ಎರಡು ರೂಪಾಯಿಗಳು ಎಂದು ಹೇಳಿದೆವು. ಆದಕ್ಕೆ ಆತ "ಏನೂ ಕಷ್ಟವಿಲ್ಲದೆ ದಿನಕ್ಕೆ ಊಟದ ಮೇಲೆ ಎರಡು ರೂಪಾಯಿ ಸಂಪಾದಿಸುತ್ತಿದ್ದೇನೆ. ದಿನವೆಲ್ಲಾ ಡಿ.ಡಿ.ಟಿ. ಹೊಡೆದು ಬರೇ ಎರಡು ರೂ. ಗಳಿಸುವುದೇನೂ ಬೇಡ" ಎಂದು ಮೆಲ್ಲಗೆ ಹೇಳುತ್ತಾ ನಡೆದೇ ಬಿಟ್ಟ, ತಿರುಗಿ ನೋಡದೆ.

—ಹೊ. ನಾ. ಜಯಪ್ರಕಾಶ






# ಬಿಳಿಯ ಕಲೆಕ್ಟರ್ ಕೈದಿಯ ಕ್ಷಮೆ ಕೇಳಿದ!

**ಅದು ಅವರ ಕಾಯದೆ ಪಾಂಡಿತ್ಯಕ್ಕೂ ಬಿಳಿಯರ ನ್ಯಾಯ ನೈಷ್ಠುರ್ಯಕ್ಕೂ ಸೇರಿಯೆ ಸಾಕ್ಷಿಯಾಗಿತ್ತು**

ಸಾವಿತ್ರಿದೇವಿ ನಿಗಮ, ಸಂಸತ್-ಸದಸ್ಯರು

ಬ್ರಿಟಿಶರು ತಮ್ಮ ಸರ್ವಶಕ್ತಿಯಿಂದ ಸ್ವಾತಂತ್ರ್ಯ ಆಂದೋಲನವನ್ನು ಬಗ್ಗುಬಡಿಯುವ ಹುಮ್ಮಸದಲ್ಲಿದ್ದ ಆ ಕಾಲದಲ್ಲೂ ರಾಜಕಾರಣ ಮತ್ತು ಕಾಯದೆಯ ಒಳಹಿಡಿತಗಳನ್ನು ಬಲ್ಲವರು ಅದ್ಭುತಗಳನ್ನು ಮಾಡಿ ತೋರಿಸುತ್ತಿದ್ದರು. ೧೯೩೦ ರ ಸಮಯವು ಗೊಂದಲದ ಮತ್ತು ಸಂದೇಹದ ಕಾಲವಾಗಿತ್ತು. ರಾಜಕೀಯ ಕಾರ್ಯಕರ್ತರು ಮತ್ತು ಧುರೀಣ (ಸ್ವಾತಂತ್ರ್ಯ ಸಂಗ್ರಾಮದ ಯೋದ್ಧರು) ರಲ್ಲಿ ಮತಭೇದ ವಿದ್ದಂತಿತ್ತು. ಕೆಲವರು ಸ್ವರಾಜ್ಯ ಪಕ್ಷದ ಸಮರ್ಥನೆ ಮಾಡುತ್ತಿದ್ದರೆ ಇನ್ನು ಕೆಲವರು ಅದೇ ಧುರೀಣರ ಮೇಲೆ ಸ್ವಾರ್ಥಿಗಳು, ಅಧಿಕಾರ ಲಾಲಸಿಗಳು, ದಡ್ಡರು ಎಂದೆಲ್ಲ ಆರೋಪ ಹೊರಿಸುತ್ತಿದ್ದರು. ಮತ್ತುಳಿದವರು ಅವರ ದೇಶ ಭಕ್ತಿ, ಬುದ್ಧಿ ಶಕ್ತಿ, ಕಾಯದೆಯ ಜ್ಞಾನಗಳ ಗುಣಗಾನ ಮಾಡುತ್ತಿದ್ದರು. ಈ ಎರಡೂ ಪಂಗಡಗಳ ನಡುವೆ ಧುರೀಣರ ವಿಚಾರದಲ್ಲಿ ಯಂತೂ ಆಯಿತಲ್ಲ, ತಮ್ಮತಮ್ಮಲ್ಲೆ ಮತ್ಸರ, ಈರ್ಷೆ, ಒಳಗಿಂದೊಳಗೇ ಕುದಿಯುವಿಕೆಗಳಿದ್ದು ಪರಸ್ಪರರನ್ನು ದೂಷಿಸುತ್ತ ಒಬ್ಬರೊಬ್ಬರ ಮುಖ ಭಂಗ ಮಾಡುವ ಪ್ರವೃತ್ತಿಯಿದ್ದಿತು. ಕಾಯದೆ ಬದ್ಧ ಮಾರ್ಗದ ಪುರಸ್ಕರ್ತರು ಮತ್ತು ಸತಾ

“ಸಾಪ್ತಾಹಿಕ ಹಿಂದುಸ್ತಾನ” ದಿಂದ

ಗ್ರಹ ಅಥವಾ ಕ್ರಾಂತಿಗಳ ಸಮರ್ಥಕರು— ಇಬ್ಬರೂ ಸ್ವಾತಂತ್ರ್ಯವನ್ನು ಬಯಸುವ ದೇಶ ಭಕ್ತರಾಗಿದ್ದರು. ಆದರೆ ಅವರಲ್ಲಿದ್ದ ಈರ್ಷೆ ಜಗಳಗಳು ಹೊರಗಿನಂತೆ ಜೇಲಿನೊಳಗೂ ನಡೆದಿರುತ್ತಿದ್ದವು.

ಆ ಸಮಯದಲ್ಲಿ ಫತ್ತೇಗಡ ಜೇಲು ರಾಜಕೀಯ ಕೈದಿಗಳಿಂದ ಕಿಕ್ಕಿರಿದು ತುಂಬಿಹೋಗಿತ್ತು. ಶಕ್ತಿ-ಉತ್ಸಾಹ ಮತ್ತು ಭಾವನಾಪೂರ್ಣರಾದ ಜನ ಎಲ್ಲಿಯ ವರೆಗೆ ಕಾಯದೆ, ನಿಯಮಗಳ ಪಾಲನೆ ಮಾಡಬೇಕೆನ್ನುವವರ ಸಲಹೆಗೆ ಕಿವಿಗೊಟ್ಟು ಸುಮ್ಮನುಳಿದಾರು? ಬ್ರಿಟಿಶ್ ಸರಕಾರವನ್ನು ವಿರೋಧಿಸಲೆಂದು ಅವರು ನಿತ್ಯವೂ ಒಂದಿಲ್ಲೊಂದು ಯೋಜನೆಯನ್ನು ತಯಾರಿಸಬಯಸುತ್ತಿದ್ದರು. ಆದರೆ ಕಠೋರ ಅಹಿಂಸೆ ಮತ್ತು ಕಾಯದೆಗಳ ನಿಷ್ಠರು ಅವರಿಗೆ ತಿಳಿಹೇಳಿ ಅವರ ಯೋಜನೆಗಳನ್ನು ಸ್ಥಗಿತಗೊಳಿಸುತ್ತಿದ್ದರು.

ಒಂದು ದಿನ ಆ ಉತ್ಸಾಹಿ ತರುಣರೆಲ್ಲ ಸೇರಿ ಒಂದು ಉಪಾಯ ಮಾಡಿದರು. ಸಂಜೆಯ ಸಭೆಯಲ್ಲಿ ಏನೇನೆಲ್ಲ ಆಗಲಿದೆಯೆಂದು ಮಾತ್ರ ಅವರು ಯಾರಿಗೂ ಹೇಳಲಿಲ್ಲ. ಜೇಲಿನ ಒಳಗಿನ ಸಮಸ್ಯೆಗಳ ವಿಚಾರಕ್ಕಾಗಿಯೆಂದು ಊಟದ ಬರಾಕಿಗೆ ಎಲ್ಲರನ್ನೂ ಕರೆದರು. ಎಲ್ಲ ಬಗೆಯವರೂ ಈ ಸಭೆಗೆ ಬಂದರು. ಕಾಯದೆ ಮತ್ತು ನಿಯಮಗಳ ಸಮರ್ಥಕರೂ ಮೋಜು ನೋಡಲೆಂದು ಬಂದರು. ಸಭೆ ಶುರುವಾಯಿತು. ಆರಂಭದಲ್ಲಿ ಬಲು ವಿನಯಪೂರ್ವಕವಾಗಿ ಶುರುವಾದ ಮಾತುಗಳು ಮುಂದೆ ಬ್ರಿಟಿಶ್ ಸರಕಾರದ ಕಟು ಟೀಕೆಗಳಲ್ಲಿ ರೂಪಾಂತರಗೊಂಡ ಸರಕಾರವನ್ನು ನಿಂದಿಸುವ ಗೊತ್ತುವಳಿಗಳು ಮಂಡಿಸಲ್ಪಟ್ಟವು. ಸಭೆಯ ಕಾರ್ಯಕಲಾಪ ಒಳ್ಳೆ ಜೋರಿನಲ್ಲಿದ್ದಾಗ ಬರಾಕಿನ ಬಾಗಿಲು ಮುಚ್ಚಿ ಬೀಗ ಹಾಕಲಾಗಿದೆಯೆಂದೂ ಎಲ್ಲರ ವಿಚಾರಣೆ ಇನ್ನು ನಡೆಯುವುದೆಂದೂ ಪಿಸುಮಾತುಗಳು ಹಬ್ಬಿದವು. ಈ ಸುದ್ದಿಯಿಂದ ಅಲ್ಲಿ ನೆರೆದಿದ್ದವರಲ್ಲಿ ಮುಕ್ಕಾಲು ಪಾಲು ಜನರ ಆವೇಶ ತಣ್ಣಗಾಗಿ ಹೋಯಿತು. ಕಾಯದೆಯ ಕಟ್ಟಾ ಸಮರ್ಥಕರಾದ ಒಬ್ಬ ಮುನ್ನೀಜಿಯವರು ಕೂಡ ಈ ಪ್ರಕರಣದಲ್ಲಿ ಸಿಕ್ಕಿ ಹಾಕಿಕೊಂಡಿದ್ದರು. ಎಲ್ಲಿಂದ ಸಿಕ್ಕಿ ಹಾಕಿಕೊಂಡೆ ಎನ್ನುವ ಚಿಂತೆಯೊಂದು ಕಡೆ; ಇನ್ನೊಂದು ಕಡೆ ವೀರಾವೇಶದ ತರುಣರು ಅವರನ್ನು ಕುಚೇಷ್ಟೆ ಗೈಯತೊಡಗಿದರು : "ಏನು ಮುನ್ನಿಸಾಹೇಬ್, ಈಗ ಹುಡುಕಿರಲ್ಲ ಏನಾದರೂ ಕಾಯದೆಯ ಒಳಹಿಡಿತ ಮತ್ತು ಶಾಸನಬದ್ಧ ಕಾರ್ಯಕ್ರಮವನ್ನು. ನೀವು ಈ ಪೇಚಿಗೆ ಸಿಲುಕಿರುವುದರಿಂದ ನಮಗೆ ಬಲು ಆನಂದವಾಗಿದೆ. ಏಕೆಂದರೆ ಅದರಿಂದ ನಮ್ಮೆಲ್ಲರ ಚಿಂತೆಯೂ ದೂರವಾದಂತಾಗಿದೆ."

ಬಡಪಾಯಿ ಮುನ್ನೀಜಿಯವರು ದೇಶಾವರಿ ನಕ್ಕು ಹೇಳಿದರು: "ಮತ್ತೇನು ಮಾಡಲಿ ಹೇಳಿ. ಗೋದಿಯ ಸಂಗಡ ಅದಕ್ಕೆ ಹತ್ತಿರುವ ಹುಳವೂ ಬೀಸುವ ಕಲ್ಲಿಗೆ ಸಿಕ್ಕು ನುಗ್ಗಾಗುತ್ತದೆ. ನಿಮ್ಮಂಥವರ ಜೊತೆ ಕುಳಿತಿದ್ದಕ್ಕಾಗಿ ಈ ಫಲ ಸಿಕ್ಕಿದೆ. ನೋಡೋಣ, ಏನಾಗುವುದೋ ಎಂದು. ಮನೆ ಹಾರಿ ಹೋಗುವಂಥ ಮಾತೇನಲ್ಲವಲ್ಲ ಇದು ?"

ಹದಿನೈದು ನಿಮಿಷಗಳು ಕಳೆದಿದ್ದವೋ ಇಲ್ಲವೋ ಅಷ್ಟರಲ್ಲಿ ಕಲೆಕ್ಟರ್ ಮತ್ತು ಜೇಲ್ ಸುಪರಿಂಟೆಂಡೆಂಟರು ಬಂದರು. ಒಬ್ಬೊಬ್ಬರದೇ ವಿಚಾರಣೆ ನಡೆಯಿತು. ವಿಚಾರಣೆ ಮತ್ತು ತೀರ್ಪು ಎರಡೂ ಸಂಕ್ಷಿಪ್ತದಲ್ಲಿ ಆದವು. ಅಪರಾಧಿಗಳು ೪೦೦ ಕ್ಕಿಂತಲೂ ಹೆಚ್ಚಾಗಿದ್ದರು. "ನೀವು ಸಭೆಯಲ್ಲಿ ಹಾಜರಿದ್ದಿರಾ ?" ಪ್ರಶ್ನೆ. "ಹೌದು" ಉತ್ತರ. "ಸರಿ. ೪ ವಾರ ನಿಮಗೆ ಯಾರ ಭೆಟ್ಟಿಯ ಅವಕಾಶವೂ ಇಲ್ಲ." ಇಲ್ಲವೆ "ಮೂರು ವಾರ ನೀವು ಪತ್ರವ್ಯವಹಾರ ಮಾಡಲಾಗದು" ಎಂಬ ಶಿಕ್ಷೆ ಹೇಳಲ್ಪಟ್ಟಿತು. ಈ ಮೊದಲೇ ಅಪರಾಧಿಗಳ ಮಾಲಿಕೆಯಲ್ಲಿ ಸೇರಿದ್ದವರಿಗೆ ಮೇಲಿನ ಎರಡೂ ಶಿಕ್ಷೆ ವಿಧಿಸಲ್ಪಟ್ಟಿತು.

ಕೊನೆಗೆ ಬಂತು ಮುನ್ನೀಜಿಯ ಸರತಿ "ಏನ ಮುನ್ನಿಯವರೇ, ಸಭೆಯಲ್ಲಿ ಹಾಜರಿದ್ದಿರಾ ?

ಪ್ರಶ್ನೆಗೆ ಮುನ್ನೀಜಿಯವರ ಉತ್ತರ ತಟ್ಟನೆ ಬಂತು. "ಸಭೆಗೆ ಯಾರೂ ಹೋಗಬಾರದೆಂದೇನಾದರೂ ನೀವು ಅಪ್ಪಣೆ ಹೊರಡಿಸಿದ್ದಿರಾ ? ಇಲ್ಲಿಂದ ಎಲ್ಲರೂ ಹೊರಟು ಹೋಗಿರಿ ಎಂಬ ಸೂಚನೆಯನ್ನೇನಾದರೂ ಕೊಟ್ಟಿದ್ದಿರಾ ? ಸಭೆ ಅಕ್ರಮವಾದದ್ದು ಎಂದು ಹೇಳಿದ್ದಿರಾ? ಹೌದಾದರೆ ನನ್ನನ್ನು ವಿಚಾರಣೆ ಮಾಡಿ." ಜೇಲರ್ ಮತ್ತು ಕಲೆಕ್ಟರರು ಒಬ್ಬರ ಮುಖವನ್ನೊಬ್ಬರು ನೋಡಿದರೇ ಹೊರತು ಮುನ್ನೀಜಿಯವರ ಪ್ರಶ್ನೆಗೆ ಉತ್ತರ ಕೊಡಲಿಲ್ಲ. ಅವರ ಮೌನವನ್ನು ಕಂಡು ಇನ್ನಿಷ್ಟು ದಿಟ್ಟರಾದ ಮುನ್ನೀಜಿ " ಏನು, ಎಷ್ಟು ಹೊತ್ತಿನ ವರೆಗೆ ನಾನು ಹೀಗೆಯೇ ನಿಂತಿರಬೇಕು ? ನಾನೇನಾದರೂ ಅಪರಾಧಿಯೇ ? " ಎಂದು ಕೇಳಿದರು.

ಕಾಯದೆಯ ಈ ಹಿಡಿತವನ್ನು ಗುರುತಿಸಿದ ಸುಪರಿಂಟೆಂಡೆಂಟರು ಎಲ್ಲಿ ತಮ್ಮನ್ನೇ ಈತ ಪೇಚಿನಲ್ಲಿ ಸಿಲುಕಿಸುವನೊ ಎಂದು ಯೋಚಿಸಿ ಮುನ್ನೀಜಿಯವರಿಗೆ "ನೀವು ಹೋಗಿ" ಎಂದರು. ಮುನ್ನೀಜಿಯವರನ್ನುಳಿದು ಮತ್ತೆಲ್ಲರಿಗೂ ಶಿಕ್ಷೆಯಾಯಿತು. ಈ ಘಟನೆಯ ನಂತರ ಮುನ್ನೀಜಿಯವರ ಘನತೆ-ಗೌರವಗಳು ಹೆಚ್ಚಿದವು. ವೇಳೆ ಅವೇಳೆಯೆನ್ನದೆ ಜನ ಅವರ ಸಲಹೆ ಕೇಳತೊಡಗಿದರು. ಹೀಗಿರುವಾಗ ಒಂದು ದಿನ ಅಕಸ್ಮಾತ್ತಾಗಿ ಎಲ್ಲರಿಗೂ ಅವರವರ ಸಾಮಾನು, ಬಟ್ಟೆ, ಹಾಸಿಗೆ, ಬರಾಕು ಎಲ್ಲವನ್ನೂ ಸ್ವಚ್ಛ ಮಾಡಲು ತಿಳಿಸಲಾಯಿತು. ಕೆಲವರು ಈ ಕಾರ್ಯದಲ್ಲಿ ಒಂದಿಷ್ಟು ಆಲಸ್ಯ ಮಾಡಿದರು. ಇನ್ನು ಕೆಲವರು ಮುನ್ನೀಜಿಯವರ ಬಳಿಗೆ ದೂರು ತಂದು "ಏನು ಮಾಡೋಣ ?" ಎಂದು ಕೇಳಿದರು. ಮುನ್ನೀಜಿ ತುಂಬ ಆಢ್ಯತೆಯಿಂದ ಹೇಳಿದರು: "ನಾವು ಜೇಲಿನ ನಿಯಮಗಳನ್ನು ಮುರಿಯಬಾರದೆಂದು ಗಾಂಧೀಜಿಯವರು ಹೇಳಿರುವಾಗ ನೀವು ಕೇಳಬೇಕಾದ ಕಾರಣವೇ ಇಲ್ಲ. ನಾವು ಕಾಯದೆಯನ್ವಯ ಕೈದಿಗಳಾಗಿದ್ದೇವೆ. ಕಾಯದೆಗನುಗುಣವಾಗಿ ಹೇಳುವ ಕೆಲಸವನ್ನು ನಾವು ಮಾಡಲೇಬೇಕು." ಇನ್‌ಸ್ಪೆಕ್ಶನ್ ಸಮಯ ಬಂದಾಗ ಎಲ್ಲರೂ ತಮ್ಮ ತಮ್ಮ ಸ್ಥಳದಲ್ಲಿ ನಿಂತಿದ್ದರು. ಎಲ್ಲರಿಗಿಂತ ಮುಂದೆ ಮುನ್ನೀಜಿ ನಿಂತಿದ್ದರು. ಕಲೆಕ್ಟರ್ ಶ್ರೀ ನಿಕೊಲ್ಸನ್, 'ಸಿವಿಲ್ ಸರ್ಜನ್, ಜೇಲರ್ ಮುಂತಾದ ೧೫ ಜನ ಬೂಟಿನ ಖಟ್ ಖಟ್ ಸಪ್ಪಳ ಮಾಡುತ್ತ ಬಂದರು. ಕಲೆಕ್ಟರರು ತಮ್ಮ ಹರಕು ಮುರಕು ಹಿಂದಿಯಲ್ಲಿ ಕೈದಿಗಳ ನಮಸ್ಕಾರಕ್ಕೆ ಉತ್ತರವೀಯುತ್ತ, "ಆಪಕೋ ಕೋಯಿ ಶಿಕಾಯತ್?" (ನಿಮ್ಮದೇನಾದರೂ ದೂರು ಇದೆಯೆ ?) ಎಂದು ಕೇಳಿದರು. ಮುನ್ನೀಜಿಯವರು ಬಲು ತತ್ಪರತೆಯಿಂದ "ನೋ ಕಂಪ್ಲೇಂಟ್ ಸರ್" ಎಂದರು.

ಆಗ ಕಲೆಕ್ಟರರು ಸಿಟ್ಟಿನಿಂದ ಕೆಂಪಾಗಿ "ನೀವು ಕಾಡುಜನ. ಶಿಷ್ಟಾಚಾರವನ್ನು ಪಾಲಿಸುವುದಿಲ್ಲ. ನಾನು ಹಿಂದಿಯಲ್ಲಿ ಕೇಳಿದರೆ ಇಂಗ್ಲಿಷಿನಲ್ಲಿ ಉತ್ತರ ಕೊಡುತ್ತೀರಿ. ಅಸಭ್ಯರು" ಎಂದು ಗುಡುಗಿದರು. ಈಗ ಮುನ್ನೀಜಿ ಯಾವ ಕಾಯದೆಯ ಪೇಚು ಹಾಕುತ್ತಾರೆ, ಏನು ಮಾಡುತ್ತಾರೆಂದು ಜನರೆಲ್ಲ ಶ್ವಾಸ ಬಿಗಿಹಿಡಿದು ನಿರೀಕ್ಷಿಸತೊಡಗಿದರು. ಆದರೆ ಮುನ್ನೀಜಿ ಮಾತಾಡಲಿಲ್ಲ. ಇನ್‌ಸ್ಪೆಕ್ಶನ್ ಮುಗಿಯಿತು. ಆಗಲೂ ಅವರ ಮೌನವನ್ನು ಕಂಡು ಅವರಿಗಾಗಿದ್ದ ಭಯಂಕರ ಅಪಮಾನಕ್ಕಾಗಿ ಮರುಗುತ್ತಿದ್ದವರು ಇರಲಿ, ಒಳಗಿಂದೊಳಗೇ ಸಂತಸಗೊಂಡಿದ್ದವರು ಕೂಡ ಅವರ ಬಳಿ ಹೋಗಿ ಮಾತನಾಡಿಸುವ ಧೈರ್ಯ ಮಾಡಲಿಲ್ಲ.

ಕಾಲವೆಂಬ ಸಾಬೂನು ಸಂಕೋಚ ಮತ್ತು ಮೌನ ಎರಡನ್ನೂ ತೊಳೆಯುತ್ತದೆ. ಮಾರನೆಯ ದಿನ ಜನರು ಮುನ್ನೀಜಿಯವರನ್ನು ಕೇಳಿದಾಗ ಅವರು ತಾವು ರಾತ್ರಿಯಿಡೀ ಕುಳಿತು, ವೈಸ್-ರಾಯ್, ಗವರ್ನರ್ ಮತ್ತು ಹೋಂ ಮೆಂಬರರಿಗೆ ಬರೆದ ಫಿರ್ಯಾದಿಯನ್ನು ಓದಿ ತೋರಿಸಿದರು. ಆ ಫಿರ್ಯಾದಿಯಲ್ಲಿ ಮುನ್ನೀಜಿ ಹೀಗೆಂದು ಬರೆದಿದ್ದರು: " ನಾನು ಬ್ರಿಟಿಶ್ ಸರಕಾರದ ಕೈದಿ. ಸರಕಾರದ ಸಂರಕ್ಷಣೆಯಲ್ಲಿರುವವನು. ಜೇಲಿ

ನೊಳಗಿರುವಾಗ ನನಗಾಗುವ ಅವಮಾನ ಬ್ರಿಟಿಶ್ ಸರಕಾರದ ಸತ್ತೆಯ ಅವಮಾನವೇ ಸರಿ. ಏಕೆಂದರೆ ನಾನು ಜೇಲಿನ ಯಾವ ನಿಯಮವನ್ನೂ ಭಂಗಿಸಿದವನಲ್ಲ. ಹಾಗಿರುವಾಗ ಇಂಥ ಮಹಾ ಅವಮಾನವನ್ನು ಗೈದ ಅಪರಾಧಿಗೆ ಯೋಗ್ಯ ಶಿಕ್ಷೆಯಾಗಬೇಕು."

ಈ ಫಿರ್ಯಾದಿಯನು ನೋಡಿದವರೆಲ್ಲ ಕುಚೇಷ್ಟೆಯನ್ನೆ ಮಾಡಿದರು. "ಓ! ಈ ಕಾಗದವನ್ನು ಹರಿದು ಜೇಲರ್ ಕಸದ ಬುಟ್ಟಿಯಲ್ಲಿ ಚೆಲ್ಲುತ್ತಾನೆ" ಎಂದರವರು. ಆದರೆ ಮುನ್ಶೀಜಿಯವರು ಕಡಿಮೆಯವರಲ್ಲ. ಜೇಲಿನಿಂದ ಬಿಡುಗಡೆಯಾಗಿ ಹೋಗಲಿದ್ದ ಒಬ್ಬ ಕೈದಿಗೆ ಅವರು ಈ ಸಮಾಚಾರವನ್ನೆಲ್ಲ ಪತ್ರಮುಖೇನ ಶ್ರೀ ಸಿ. ವಾಯ್. ಚಿಂತಾಮಣಿಯವರಿಗೆ ತಿಳಿಸಲು ಮತ್ತು ಪತ್ರಿಕೆಗಳಲ್ಲಿ ಪ್ರಕಟಿಸಲು ಹೇಳಿದರು. ತರುಣರೆಲ್ಲ ಮುನ್ಶೀಜಿಯವರನ್ನು ಸುತ್ತುಗಟ್ಟಿ "ಹೇಳಿ ಸ್ವಾಮಿ, ಏನು ಮಾಡುತ್ತಾ ಇದ್ದೀರಿ?" ಎಂದು ಕೇಳುತ್ತಿದ್ದರು. ಮುನ್ಶೀಜಿ ಕ್ಷೀಣವಾಗಿ ನಕ್ಕು "ಸಮಯ ಬರಲಿ, ಏನನ್ನಾದರೂ ಮಾಡುತ್ತೇನೆ" ಎನ್ನುತ್ತಿದ್ದರು.

ಒಂದು ದಿನ ಮುನ್ಶೀಜಿ ಜೇಲರನನ್ನು ಕೇಳಿದರು: "ಏನು ಸ್ವಾಮೀ, ನನ್ನ ಫಿರ್ಯಾದಿಯನ್ನು ಕಳಿಸಿಕೊಟ್ಟಿರಾ?" "ನಾನು ಹೇಗೆ ಕಳಿಸಲಿ? ಕಲೆಕ್ಟರನ ಬಳಿ ಅವರ ಮೇಲಿನ ಫಿರ್ಯಾದಿಯನ್ನೆ ಕಳಿಸುವುದೇ? ನಿಮಗೇನಾಗಿದೆ? ಬೆಂಕಿಯ ಕೂಡ ಚಿನ್ನಾಟವನ್ನೇಕೆ ಆಡುತ್ತೀರಿ?" ಎಂದು ಜೇಲರ್ ಹೇಳಲು ಮುನ್ಶೀಜಿ ಅಸಮಾಧಾನದಿಂದ "ಛೆ! ಛೆ! ನಿಮ್ಮ ಕೃಪೆ ನನಗೆ ಬೇಡ. ಇಂದೇ ಫಿರ್ಯಾದಿಯನ್ನು ಕಳಿಸಿಕೊಡಿ" ಎಂದರು.

ದಿನಗಳು, ತಿಂಗಳುಗಳು ಉರುಳಿದವು. ಮುನ್ಶೀಜಿ ಎಲ್ಲವನ್ನೂ ಮರೆತಿದ್ದಾಗ ಒಂದು ದಿನ ಸೂಟ್ ಬೂಟ್ ಧಾರಿಯಾದ ಶ್ರೀ ವ್ರಜನಂದಲಾಲ ಎಂಬ ವಕೀಲರು ಜೇಲರನ ಜೊತೆಯಲ್ಲಿ ಬಂದು ಮುನ್ಶೀಜಿಯವರೊಡನೆ ಏಕಾಂತದಲ್ಲಿ ಮಾತಾಡಬಯಸಿದರು. ಏನೋ ಮನೆಯಲ್ಲಿ ನಡೆದಿರುವ ಅನಾಹುತದ ಸಮಾಚಾರವನ್ನು ತಿಳಿಸಲು ಬಂದಿರಬೇಕು ಎಂದು ಮುನ್ಶೀಜಿ ಭಾವಿಸಿದರು. ಆದರೆ ಬ್ಯಾರಿಸ್ಟರ್ ಸಾಹೇಬರು ಹೇಳಿದ್ದೇ ಬೇರೆ. "ಮುನ್ಶೀಜಿ, ಇಲಿಯನ್ನು ಗುಡ್ಡವನ್ನಾಗಿ ಏಕೆ ಮಾಡುತ್ತಿದ್ದೀರಿ? ಎಲ್ಲವನ್ನೂ ಇಲ್ಲಿಗೇ ಮುಗಿಸಿಬಿಡಿ. ಕಲೆಕ್ಟರರು ತುಂಬ ಒಳ್ಳೆಯ ಜನ" ಎಂದರವರು. ಮುನ್ಶೀಜಿ ಅದಕ್ಕೆ "ಮುಗಿಸಿಬಿಡಲು ನಾನೇನು ಅಂಥ ಬಂದೂಕನ್ನು ಹಿಡಿದು ನಿಂತಿದ್ದೇನೆ" ಎನ್ನಲು ಮುನ್ಶೀಜಿ ಮೆತ್ತಗಾಗಿದ್ದಾರೆಂದು ಅನಿಸಿದ ಬ್ಯಾರಿಸ್ಟರರು "ಹಾಗಾದರೆ ಹಿಡಿಯಿರಿ ಈ ಕಾಗದ. ನನ್ನದೇನೂ ದೂರಿಲ್ಲವೆಂದು ಬರೆದುಕೊಡಿ" ಎಂದರು. ಆಗ ಮುನ್ಶೀಜಿ "ಬ್ಯಾರಿಸ್ಟರ್ ಸಾಹೇಬ್, ಕಲೆಕ್ಟರರಿಂದ ವಸೂಲು ಮಾಡಿರುವ ಫೀ ಹಣವನ್ನು ಇಲ್ಲಿ ಇಡಿ. ನಿಮಗೆ ಯಾತಕ್ಕೆ ಕಾಳಜಿ? ಅವಸರ ಮಾಡಬೇಡಿ. ನಾನು ತುಸು ವಿಚಾರ ಮಾಡಿ ಕೆಲಸ ಮಾಡುತ್ತೇನೆ. ನೀವೀಗ ಹೋಗಿ" ಎಂದು ನಿರ್ಧಾರದ ಸ್ವರದಲ್ಲಿ ನುಡಿದರು.

ಬ್ಯಾರಿಸ್ಟರರು ಮತ್ತೂ ಎರಡು ಮೂರು ಸಲ ಬಂದರು. ಮುನ್ಶೀಜಿ ಒಂದಿಷ್ಟೂ ವಿಚಲಿತರಾಗದಿದ್ದುದನ್ನು ಕಂಡು ಅವರು ಅಂದರು "ಹಾಗಾದರೆ ಕಲೆಕ್ಟರರು ಲೇಖಿ ಮಾಫಿ ಬೇಡಿದರೆ ಸಾಕಲ್ಲವೆ?" ಮುನ್ಶೀಜಿ ಅದಕ್ಕೆ "ಊಂಹುಂ. ಅವರು ಇಲ್ಲಿ ಬಂದು ಎಲ್ಲರ ಎದುರು ಮಾಫಿ ಕೇಳಬೇಕೆಂದೇ ನನ್ನ ಹೇಳಿಕೆ" ಎಂದರು. ಆದರೆ ಅವರು ಈ ಮಾತನ್ನು ಒಬ್ಬರ ಮುಂದೂ ಹೇಳಲಿಲ್ಲ. ಕೊನೆಗೆ ಬ್ಯಾರಿಸ್ಟರರು ಬಂದು ಇಂಥ ದಿನ ಕಲೆಕ್ಟರರು ಬಂದು ಮಾಫಿ ಕೇಳಿಕೊಳ್ಳುವರು ಎಂದು ತಿಳಿಸಿದರು. ಆದರೆ ಮುನ್ಶೀಜಿಯವರಿಗೆ ನಂಬಿಗೆಯಾಗಲಿಲ್ಲ.

ಆ ದಿನವೂ ಬಂತು. ವಿಚಾರಣೆಯ ದಿನ ನಿಂತಂತೆಯೆ ಕೈದಿಗಳೆಲ್ಲ ನಿಂತಿದ್ದರು. ಮುನ್ಶೀಜಿ ಕೂಡ ಮೊದಲಿನಂತೆ ಅಗ್ರಸ್ಥಾನದಲ್ಲಿದ್ದರು. ಕಲೆಕ್ಟರರು ಬಂದು, "ಗುಡ್ ಮಾರ್ನಿಂಗ್, ಮಿಸ್ಟರ್ ಸಹಾಯ್, ಗುಡ್ ಮಾರ್ನಿಂಗ್.

ಆಯ್ ಎಮ್ ವ್ಹೆರಿ ಸಾರಿ ಫಾರ್ ಲೂಜಿಂಗ್ ಮಾಯ್ ಟೆಂಪರ್. ಎಕ್ಸಕ್ಯೂಜ್ ಮಿ" ಅಂದರು.

ಮುನ್ನೀಜಿ ತಟ್ಟನೆ ಹೇಳಿದರು. "ಸಾಹೇಬರೇ, ನನಗೆ ನಿಮ್ಮ ಮಾತು ತಿಳಿಯುವುದಿಲ್ಲ. ನನ್ನ ಮಿತ್ರರಲ್ಲಿ ಅನೇಕರಿಗೂ ತಿಳಿಯುವುದಿಲ್ಲ. ಹಿಂದಿಯಲ್ಲಿ ಹೇಳಿ."

"ಸರಿ. ನಾನು ನಿಮ್ಮ ಕ್ಷಮೆ ಕೇಳುತ್ತೇನೆ. ಅಂದು ನನಗೆ ಅನ್ಯಾಯವಾಗಿ ಸಿಟ್ಟು ಬಂದಿತ್ತು ನಾನು ನಿಮ್ಮ ಕ್ಷಮೆ ಕೇಳುವೆ" ಕಲೆಕ್ಟರರು ಹಿಂದಿಯಲ್ಲಿ ಹೇಳಿದರು.

"ಪುನಃ ಇಂಥ ತಪ್ಪು ಆಗುವುದಿಲ್ಲವೆಂದು ವಚನ ಕೊಡುತ್ತೀರಾ?"

"ಹೌದು. ನನ್ನಿಂದ ಇನ್ನು ಇಂಥ ಪ್ರಮಾದವಾಗದು." ಕಲೆಕ್ಟರರು ನಿಜ ಬ್ರಿಟಿಶನಂತೆ ನುಡಿದರು.

ಮುನ್ನೀಜಿಯವರ ಮುಖ ಅರಳಿತು. ಅವರ ಕಾಯದೆಯ ಒಳಹಿಡಿತವನ್ನು ಕಂಡ ಅವರ ಸಂಗಡಿಗರೆಲ್ಲ ಅವಾಕ್ಕಾದರು. ಈ ಚಮತ್ಕಾರ ಎಂತಾಯಿತು ಎಂದು ಕೇಳತೊಡಗಿದರು. ಆಮೇಲೆ, ಮುನ್ನೀಜಿಯ ಫಿರ್ಯಾದಿಯ ಮೇಲೆ ಕಲೆಕ್ಟರರು ತಮ್ಮ ಸಹಿ ಹಾಕಿ ಮೇಲಕ್ಕೆ ಕಳಿಸಿದ್ದರೆಂದು ತಿಳಿಯಿತು. ಸಿ. ವಾಯ್. ಚಿಂತಾಮಣಿಯವರ ಅಗ್ರಲೇಖ ಮತ್ತು ಪ್ರಯತ್ನಗಳ ಪರಿಣಾಮವಾಗಿ ವಿಚಾರಣೆ ನಡೆದು ಕಲೆಕ್ಟರರಿಗೆ ಮಾಫಿ ಕೇಳಿರಿ ಇಲ್ಲವೆ ರಾಜೀನಾಮೆ ಕೊಡಿರಿ ಎಂಬ ಆದೇಶ ಬಂದಿತ್ತು. ಛತ್ತಾರಿ ನವಾಬರು ಕೂಡ ಯೋಗ್ಯ ಕ್ರಮ ಕೈಕೊಳ್ಳಬೇಕೆಂದು ವೈಸರಾಯರಿಗೆ ಶಿಫಾರಸು ಮಾಡಿದ್ದರು.

ಇಂದಿಗೂ ಕೂಡ ಮುನ್ನೀಜಿಯವರು ಈ ಸುದ್ದಿಯನ್ನು ಹೇಳುವಾಗ ಅವರ ಕಣ್ಣುಗಳು ಹೊಳೆಯತೊಡಗುತ್ತವೆ. *



## ಪರಸ್ಪರಂ ಭಾವಯಂತಃ....

ಇಬ್ಬರು ಮುದುಕ ಸ್ನೇಹಿತರು ಸಿನೆಮಾ ನೋಡಲು ಹೊರಟರು. ಆದರೆ ಇಬ್ಬರಿಗೂ ಒಂದಕ್ಕಿಂತ ಹೆಚ್ಚು ಟಿಕೇಟು ತೆಗೆದುಕೊಳ್ಳುವ ಮನಸ್ಸಿರಲಿಲ್ಲ. ಆದಕ್ಕಾಗಿ "ನಿನ್ನ ಟಿಕೇಟು ನೀನು ತೆಗೆದುಕೋ. ನನ್ನದನ್ನು ನಾನು ತೆಗೆದುಕೊಳ್ಳುತ್ತೇನೆ" ಎಂದು ಹೇಳುವ ಧೈರ್ಯವೂ ಇಬ್ಬರಿಗೂ ಇರಲಿಲ್ಲ. ಮನೆಯಿಂದ ಥಿಯೇಟರಿನ ವರೆಗೆ ಇಬ್ಬರೂ ಆಲೋಚನೆ ಮಾಡುತ್ತಾ ನಡೆದರು.

ಆಗ ಒಬ್ಬ ಹೇಳಿದ ಇನ್ನೊಬ್ಬನಿಗೆ: "ನೋಡು! ಮೊನ್ನೆ ನನ್ನ ಮಗ ಬಿ.-ಎಸ್‌ಸಿ.ಯಲ್ಲಿ ಫಸ್ಟ್ ಬಂದ. ಆದುದರಿಂದ ಇವತ್ತಿನ ನಿನ್ನ ಟಿಕೇಟು ನನ್ನ ಲೆಕ್ಕದ್ದು."

"ಒಹೋ. ಹಾಗೋ! ನನಗೂ ಮರೆತೇ ಹೋಯ್ತು. ನನ್ನ ಮಗಳು ಮೊನ್ನೆ ಬಿ ಎ. ಯಲ್ಲಿ ಫಸ್ಟ್ ಬಂದಳು. ಆದ್ದರಿಂದ ಇವತ್ತಿನ ನಿನ್ನ ಟಿಕೇಟು ನಾನು ತೆಗೆದುಕೊಳ್ಳುತ್ತೇನೆ."

ಇಬ್ಬರೂ ಒಬ್ಬರಿನ್ನೊಬ್ಬರ ಲೆಕ್ಕಕ್ಕೆ ನೋಡಿದರು.

—ಎನ್ ಬಾಬುರಾಯ ಕಾಮತ್



ಎತ್ತು ಏರಿಗೆಳೆದರೆ ಕೋಣ ಕೆರೆಗೆಳೆದಂತಿತ್ತು ಈ ಸಂಸಾರದ ಮಾತು

# ಹಿತ್ತಲ ಗಿಡ ಮದ್ದಲ್ಲ

ಸೌ. ಉಷಾ ಅಂತುರಕರ

"ರಾಣೀ, ಇಂದು ರಾತ್ರಿಯ ಅಡಿಗೆಯ ಯೋಜನೆಯೇನು? ಏನೇನೆಲ್ಲ ಮಾಡುವಿ?"

ರಾಣಿ ಉತ್ತರ ಕೊಡಲಿಲ್ಲ. ರಾಜನೇ ಮಾತು ಮುಂದುವರಿಸಿದ: "ನೋಡು, ರಾತ್ರಿಯ ಊಟ ಭರ್ಜರಿಯಾಗಬೇಕು."

ಈಗಲೂ ರಾಣಿ ಮಾತಾಡಲಿಲ್ಲ. ರಾಜ ಆ ಮೌನವನ್ನು ದುರಕ್ಷಿಸುತ್ತ ಹೇಳಿದ: "ಮಸಾಲೆ ಹಾಕಿ ವಾಂಗೀಭಾತು ಮಾಡು. ಅಡಿಗೆ ಭಟ್ಟರು ಮಾಡುತ್ತಾರಲ್ಲ, ಹಾಗೆ ಬಾಯಿ ನೀರೂರಿಸುವ ಹಾಗೆ ಮಾಡು. ಮತ್ತು ಜೊತೆಗೆ ಬಟಾಟೆಯ–"

"ಹೂಂ."

"ಮದುವೆ ಮನೆ ಔತಣದ ಊಟದಂತಿರಬೇಕು ನೋಡು."

"ಹೂಂ. ಮಾಡುತ್ತೇನೆ. ಆಯಿತೋ ಇಲ್ಲೊ? ನೀವಿನ್ನು ಹೋಗಿ," ರಾಣಿ ಸಿಡುಕಿನಿಂದ ಕೂಗಿದಳು. ರಾಜ ಆಫೀಸಿಗೋಡಿದ.

ರಾಜ ಅತ್ತ ಆಫೀಸಿಗೋಡಿದ. ಇತ್ತ ರಾಣಿ ಸಿಟ್ಟಿನಿಂದ ಕುದಿಯತೊಡಗಿದಳು. ಅಡಿಗೆ! ಅಡಿಗೆ! ಅಡಿಗೆ! ಅಡಿಗೆ ಹಾಗೂ ಸಂಸಾರದ ತಾಪತ್ರಯಗಳಿಂದ ಅವಳ ಜೀವ ಕಸವಿಸಿಯಾಗತೊಡಗಿತ್ತು. ಮಧ್ಯಾಹ್ನ ಅಡಿಗೆ ಮಾಡಿದ ಮೇಲೆ ರಾತ್ರಿ ಕುಕ್ಕರಿನಲ್ಲಿ ಅನ್ನ ಬೇಯಿಸಿದರೆ ಸಾಕು ಎಂದು ಅವಳ ಅಭಿಪ್ರಾಯ. ಆದರೆ ರಾಜನಿಗೆ ಹೀಗೆ ಕುದಿಸಿದ ಅನ್ನ ಸೇರುತ್ತಿರಲಿಲ್ಲ. ಅವನದು ಅತ್ಯಂತ ಚಪಲ ನಾಲಿಗೆ. ಸ್ವಪ್ನಜಗತ್ತಿನಲ್ಲಿ ವಿಹರಿಸುವ ರಾಣಿಗೆ ಅಡಿಗೆಯೆಂದರೆ ತಲೆನೋವು. ಅವಳ ದುರ್ದೈವದಿಂದ ನಾಲಿಗೆಯ ಚಾಪಲ್ಯವುಳ್ಳ ಗಂಡ ಸಿಕ್ಕಿಬಿಟ್ಟಿದ್ದ. ರಾಣಿಯ ಸ್ವಪ್ನಗಳೆಲ್ಲ ಭಗ್ನವಾದವು. ಅವೆಲ್ಲ ಸಾರು ಹುಳಿಗಳಲ್ಲಿ, ಘಮಘಮಿಸುವ ಮಸಾಲೆಯಲ್ಲಿ ಹುಗಿದು ಹೋ

" ವಾಙ್ಮಯ ಶೋಭಾ " ದಿಂದ

ದವು. ಸಂಸಾರದ ಗದ್ದಲದಲ್ಲಿ ಅವುಗಳ ಗೋರಿ ಯಾಯಿತು. ಬರೇ ತಿನ್ನುಣ್ಣುವುದಕಾಗಿ ಹುಟ್ಟಿದೆನೇ, ಏನಾದರೂ ಮಾಡಬೇಕು, ಏನನ್ನಾದರೂ ಮಾಡಬೇಕು, ನನ್ನ ಶಿಕ್ಷಣ ಸಾರ್ಥಕವಾಗಬೇಕು ಎಂದು ಅವಳಿಗನಿಸುತ್ತಿತ್ತು. ಆದರೆ ಹೇಗೆ?

ಮನೆಗೆಲಸಗಳನ್ನೆಲ್ಲ ಮುಗಿಸಿಕೊಂಡು ರಾಣಿ ವಿಶ್ರಾಂತಿಗಾಗಿ ಎಂದು ಅಡ್ಡಾಗಬಯಸಿದಾಗ ಮಧ್ಯಾಹ್ನದ ಎರಡು ಹೊಡೆದಿರುತ್ತಿತ್ತು. ಅಂ! ಎರಡು ಗಂಟೆ! ರಾಣಿ ಬೆಚ್ಚಿ ತನ್ನಷ್ಟಕ್ಕೆ ಅಂದು ಕೊಳ್ಳುತ್ತಿದ್ದಳು. ಇನ್ನು ಉಳಿದಿರುವ ದಿನದ ಸಮಯವೆಲ್ಲ ನನ್ನದೇ ಎಂದು ಮನಸ್ಸಿಗೆ ಸಮಾಧಾನ ಹೇಳುತ್ತ ಅವಳು ಬಾಯಿಗೆ ಅಡಿಕೆ ಬಡೇಸೋಪುಗಳನ್ನು ಹಾಕಿಕೊಂಡು ಅಗಿಯುತ್ತ ಆರಾಮ ಖುರ್ಚಿಯಲ್ಲಿ ಒರಗಿ ಏನಾದರೊಂದು ಕಾವ್ಯಮಯ ಪುಸ್ತಕವನ್ನು ಕೈಗೆ ತೆಗೆದುಕೊಳ್ಳುತ್ತಿದ್ದಳು. ಅವಳ ದೃಷ್ಟಿ ಪುಸ್ತಕದ ಮೇಲೆ ಹಾಯ್ದುಹೋದಂತೆ ಅವಳ ಮನಸ್ಸು ಅರಳುತ್ತಿತ್ತು. ಸುಖಸಾಗರದಲ್ಲಿ ಈಜಾಡತೊಡಗುತ್ತಿತ್ತು. ಆ ಸುಖ ಕ್ಷಣಗಳ ಆಸ್ವಾದ ಪಡೆಯಲೋ ಏನೋ ಅವಳ ಕಣ್ಣುಗಳು ಮುಚ್ಚಿಕೊಳ್ಳುತ್ತಿದ್ದವು. ಮುಚ್ಚಿದ ರೆಪ್ಪೆಗಳ ಅಡಿಯಿಂದ ಅವಳಿಗೆ ನೀಲಿ ಆಕಾಶ ಕಾಣುತ್ತಿತ್ತು. ಆ ಭವ್ಯ ಪ್ರಶಾಂತ ವಿಶಾಲ ನೀಲಾಕಾಶದಲ್ಲಿ ಅವಳು ಕಲ್ಪನೆಯ ರೆಕ್ಕೆಗಳನ್ನು ಕಟ್ಟಿಕೊಂಡು ಹಾರತೊಡಗುತ್ತಿದ್ದಳು. ವಿಚಾರದ ತಾರೆಗಳು ಮಿನುಗಹತ್ತುತ್ತಿದ್ದವು. ಪೃಥ್ವಿ ಕುಣಿಯತೊಡಗುತ್ತಿತ್ತು. ಹರ್ಷ, ಉಲ್ಲಾಸಗಳು ಕೈ ಕೈ ಹಿಡಿದು ಕೊಂಡು ನರ್ತಿಸುತಿದ್ದವು. ಸ್ವಪ್ನಕ್ಕೆ ಕಳೆಯೇರುತ್ತಿತ್ತು. ಕಾವ್ಯಕ್ಕೆ ಸ್ವರ ಹತ್ತುತ್ತಿತ್ತು. ಭರಭರನೆ ಕಾವ್ಯ ಪಂಕ್ತಿಗಳು ಮನದಲ್ಲಿ ಮೂಡುತ್ತಿದ್ದಂತೆ—

"ಅಮ್ಮಾ!" ಅವಳ ಭಾವಸಮಾಧಿ ಭಂಗವಾಗುತ್ತಿತ್ತು. ಕಾವ್ಯಪಂಕ್ತಿಗಳ ಮಾಲೆ ತುಂಡಾಗಿ ಬಿಡುತ್ತಿತ್ತು.

"ಅಮ್ಮಾ, ಹಸಿವೆಯಾಗುತ್ತಿದೆ. ತಿನ್ನಲು ಕೊಡಲ್ಲ." ಎಲಾ! ಹೌದು. ನಾಲ್ಕು ಹೊಡೆದು ಹೋಗಿದೆ. ಮಕ್ಕಳಿಗೆ ಹಸಿವೆಯಾಗುವ ಹೊತ್ತು. ಹೋಯಿತು. ಇಂದಿನದಿನ ವ್ಯರ್ಥ ಕಳೆದು ಹೋಯಿತು. ನಾಳೆ ಏನಾದರೂ ಬರೆಯಬೇಕು. ಒಂದಾದರೂ ಸುಂದರ ಕಾವ್ಯವನ್ನು ಪೂರ್ಣಗೊಳಿಸಬೇಕು. ನಾಳೆ–ಛೆ! ನಿತ್ಯವೂ ಹೀಗೆಯೆ ನಡೆದಿದೆ. ಈ ರೀತಿಯಲ್ಲಿ ಈ ನಾಳೆ ಎನ್ನುವುದು ಎಂದೂ ಉದಯಿಸಲಾರದು. ಛೆ! ಛೆ! ನನ್ನ ಜೀವನ ಹೀಗೆ ವ್ಯರ್ಥವಾಗಬಾರದು. ಏನಾದರೂ ಮಾಡಬೇಕು. ಏನನ್ನಾದರೂ ಬರೆಯಬೇಕು. ಅವಳ ಮನಸ್ಸು ವೇದನೆಯಿಂದ ಚಡಪಡಿಸತೊಡಗುತ್ತಿತ್ತು. ಆಕ್ರೋಶ ಮಾಡುತ್ತಿತ್ತು. ಅವಳ ದುಃಖ ಯಾರಿಗೂ ಅರ್ಥವಾಗುತ್ತಿರಲಿಲ್ಲ. ಅವಳ ಯಾತನೆ ಯಾರಿಗೂ ಗೊತ್ತಾಗುತಿರಲಿಲ್ಲ.

ಅಂತೇ ಇಂದು ಕಣ್ಮುಚ್ಚಿ ಬಿದ್ದುಕೊಂಡಿದ್ದರೂ ಅವಳ ಸ್ವಪ್ನ ಅವಳೆದುರು ಸಾಕಾರವಾಗುತ್ತಿದ್ದಿಲ್ಲ. ಅವಳ ಕಲ್ಪನೆಯ ಝರಿ ಇಂದು ಬತ್ತಿಹೋಗಿತ್ತು; ಅಲ್ಲಾ, ಮನುಷ್ಯನಿಗೆ ಬೇಕಾದ್ದನ್ನು ದೇವರು ಆತನಿಗೇಕೆ ಕೊಡಿಸುವುದಿಲ್ಲ? ನನ್ನ ಕಾವ್ಯಮಯ ಮನಸ್ಸಿನ ಕೊಲೆಯನ್ನೇಕೆ ಆತ ಮಾಡುತ್ತಿದ್ದಾನೆ? ಮನದಲ್ಲಿಯೇ ರಾಣಿ ರಾಜನನ್ನು ಪ್ರಾರ್ಥಿಸಿಕೊಂಡಳು: "ರಾಜಾ, ಮಧ್ಯಾಹ್ನ ನೀನು ಬಯಸುವ ಅಡಿಗೆಯನ್ನು ಮಾಡುವುದಿಲ್ಲವೆ? ಅಂದ ಮೇಲೆ ರಾತ್ರಿ ಕುಕ್ಕರಿನಲ್ಲಿ ಮಾಡಿದ ಅನ್ನವನ್ನೇಕೆ ಒಲ್ಲೆನೆನ್ನುವಿ? ಅದನ್ನು ಉಂಡು ನನಗೆ ಬೇಕಾದ ಸಮಯವನ್ನು ಒದಗಿಸಿಕೊಡಬಾರದೇ?"

ಅವಳ ಮುಚ್ಚಿದ ಕಣ್ಣುಗಳ ಅಂಚಿನಿಂದ ನೀರು ಹರಿಯತೊಡಗಿತು. ಮನದ ತಾಪವನ್ನು ಅವಳು ಕಣ್ಣೀರಿಂದ ಶಾಂತಗೊಳಿಸಬೇಕಾಗಿ ಬಂತು. ಐದು ಹೊಡೆಯಿತು, ಇನ್ನು ಏಳಬೇಕು. ಆದರೆ ಮನಸ್ಸಿನ ಉತ್ಸಾಹವೆಲ್ಲ ಉಡುಗಿಹೋಗಿತ್ತು. ದೇಹದ ಶಕ್ತಿಯೂ ಕುಂದಿದಂತಿತ್ತು. ಅಷ್ಟರಲ್ಲಿ ಹೊರಗೆ ಏನೋ 'ಟಪ್' ಎಂದು ಬಿದ್ದ ಸಪ್ಪಳ ಕೇಳಿಸಿತು. ಆ ಸದ್ದಿನ ಹಿಂದೆಯೆ 'ಪೋಸ್ಟ

ಮನ್' ಎಂಬ ಕೂಗು ಕೇಳಿಸಿತು.

ರಾಣಿ ತಟ್ಟನೆ ಎದ್ದಳು. ಕೆಳಗೆ ಬಿದ್ದ ಪತ್ರ ವನ್ನು ಕೈಗೆತ್ತಿಕೊಳ್ಳುತ್ತಿರುವಾಗ ಅವಳ ದೃಷ್ಟಿ ನಡುಮನೆಯತ್ತ ಹೋಯಿತು. ರಾಣಿಗೆ ಸರ್ರನೆ ಸಿಟ್ಟು ಬಂತು. ಮೊದಲೇ ಖತಿಗೊಂಡಿದ್ದ ಅವಳ ಮನಸ್ಸು ಈಗ ಜಯಂತನ ಕೋಲಾಹಲ ವನ್ನು ಕಂಡು ಕೆರಳಿ ಕೆಂಡವಾಯಿತು.

ಜಯಂತ ಯಾವಾಗಲೂ ಹೀಗೆಯೆ! ಈಗಂತೂ ಮೇ ತಿಂಗಳ ರಜೆಯಿದ್ದುದರಿಂದ ಮಂಗನಿಗೆ ಮದ್ಯ ಕುಡಿಸಿದಂತಾಗಿತ್ತು. ಹತ್ತು ಹನ್ನೊಂದು ವರ್ಷದ ಜಯಂತನಿಗೆ ಯಂತ್ರಗ-ಳೆಂದರೆ ಬಲು ಪ್ರೀತಿ. ಚಾಕು, ಕತ್ತರಿ, ಪಿನ್ನು, ತಾಮ್ರದ ತಂತಿ ಮತ್ತು ಲೋಹಚುಂಬಕಗಳ ಸಹವಾಸದಲ್ಲಿ ಅವನು ಮೈಮರೆಯುತ್ತಿದ್ದ. ಊಟ-ತಿಂಡಿಗಳ ಪರಿವೆಯೂ ಇಲ್ಲದ ಅವನಿಗೆ ಸಮಯ ಮತ್ತು ಆಟ ಪಾಟಗಳ ಕಡೆ ಗಮನವಾದರೂ ಹೇಗಿರಬೇಕು? ಏನಾದರೂ ಮಾಡಬೇಕೆಂಬ ವಿಚಾರ ಬಂದೊಡನೆ ಆತ ಎಲ್ಲವನ್ನೂ ಮರೆತು ಅದರಲ್ಲೇ ತಲ್ಲೀನನಾಗಿಬಿಡುತ್ತಿದ್ದ. ರಾಣಿಗೆ ಇದು ಸಹನವಾಗುತ್ತಿರಲಿಲ್ಲ, ಇನ್ನೂ ಸಣ್ಣ ಮಗು. ಆಡುವುದು, ಓಡುವುದು ಬಿಟ್ಟು ಇದೇನು ನಡೆಸಿದ್ದಾನೆ ಈತ ಎಂದೆನಿಸುತ್ತಿತ್ತು.

ಅವಳು ಸಿಟ್ಟಿನಿಂದ ಕೂಗುತ್ತಲೇ ನಡು-ಮನೆಗೆ ಹೋದಳು. "ಜಯಾ, ಹಾಳಾದವನೇ, ಏನು ನಡಿಸಿರುವಿ? ಐದು ಹೊಡೆದಿದೆ, ಹುಚ್ಚ, ತೀರಿತು. ಹೋಗು, ಆಡಲು ಹೋಗು, ಕಟ್ಟಿಡು ಇವನ್ನೆಲ್ಲ."

ತಾಯಿಯ ಚೀರಾಟದಿಂದ ಜಯಂತನ ಸಮಾಧಿ ಇಳಿಯಿತು. ಆತ ಕನಸಿನ ಕಂಗಳಿಂದ ತಾಯಿಯನ್ನು ನೋಡಿದ. ತಾಯಿಯ ರೌದ್ರಾವತಾರವನ್ನು ಕಂಡು ತಟ್ಟನೆ ಎದ್ದ. ತನ್ನ ಕೈ ಮುಂದೆ ಮಾಡಿ "ನಿಲ್ಲು ನಿಲ್ಲಮ್ಮಾ, ಅವನ್ನು ಮುಟ್ಟಬೇಡ" ಎಂದ.

"ಯಾಕೆ? ಎಲ್ಲವನ್ನೂ ತೆಗೆದು ಗಟಾರಕ್ಕೆ ಎಸೆಯುತ್ತೇನೆ."

"ಬೇಡಮ್ಮ ನಿಲ್ಲು" ಮಗ ವ್ಯಾಕುಲನಾಗಿ ಹೇಳಿದ.

"ಗೊತ್ತಿದೆ ಬಿಡೊ ನಿನ್ನ ಶೋಧ. ದೊಡ್ಡ ಸಂಶೋಧಕನಾಗುವಿಯಲ್ಲವೆ? ಇಡೀ ದಿನ ಹೀಗೆ ಕುಳಿತಲ್ಲೆ ಕುಳಿತರೆ ಗಣಪತಿಯಾಗಿ ಹೋಗುತ್ತಿ. ಹೋಗುವಿಯೋ ಇಲ್ಲವೊ ಆಡಲಿಕ್ಕೆ?"

"ಮುಂಜಾನೆ ಆಡಿದ್ದೇನೆ ಅಮ್ಮ. ನೋಡು, ಎಲ್ಲ ಸರಿಯಾಗಿ ಹೊಂದಿಕೆ.."

"ಹೋಗ್ತೀಯೋ ಅಥವಾ.."

"ಹೋಗುತ್ತೇನೆ ಕೂಗಬೇಡ."

"ಕೂಗಿ ಕೂಗಿ ತಲೆ ಒಡೆದುಕೊಂಡರೂ ನಿನ್ನ ಚಾಳಿ ಬಿಡುವುದಿಲ್ಲ." ರಾಣಿ ಹೊರಗೆ ಬಂದು ಆರಾಮ ಖುರ್ಚಿಯಲ್ಲಿ ಕುಳಿತು "ಐದು ಮಿನಿಟಿನಲ್ಲಿ ಎಲ್ಲ ಕಟ್ಟಿಟ್ಟು ಆಡಲು ಹೋಗಬೇಕು" ಎಂದು ಆಜ್ಞೆ ಮಾಡಿದಳು.

ಕೈಯಲ್ಲಿಯ ಪತ್ರವನ್ನಾಕೆ ಈಗ ಓದಿದಳು. ಅದು ರಾಜನ ಅಣ್ಣ ವಾಸುದೇವರಾಯನ ಪತ್ರವಾಗಿತ್ತು. ಪತ್ರದಲ್ಲಿ,

ಚಿ. ರಾಜನಿಗೆ ಆಶೀರ್ವಾದ.

ನಿನ್ನಲ್ಲಿಗೆ ಬರಬೇಕೆಂದು ಬಹಳ ದಿನಗಳಿಂ-ದಲೂ ಆಶೆಯಿತ್ತು; ಆದರೆ ನನ್ನ ವ್ಯವಹಾರದಲ್ಲಿ ಒಂದು ಕ್ಷಣ ಕೂಡ ಪುರಸತ್ತು ಸಿಗುವುದಿಲ್ಲ. ಬೇಜಾರಾಗಿ ಹೋಗಿದೆ. ನೌಕರಿ ಮಾಡುವ ನೀವೇ ಭಾಗ್ಯಶಾಲಿಗಳು. ಈ ಜಂಜಾಟದಿಂದ ನಾಲ್ಕು ದಿನವಾದರೂ ಮುಕ್ತಿ ಪಡೆಯಬೇಕೆಂದು ನಾಳೆಯೆ ಹೊರಟು ನಿನ್ನಲ್ಲಿಗೆ ಬರುತ್ತೇನೆ. ಚಿ. ಸೌ. ರಾಣಿ ಮತ್ತು ಮಕ್ಕಳಿಗೆ ಅನೇಕ ಆಶೀರ್ವಾದ.

ನಿನ್ನ ಅಣ್ಣ

ಸರಿ. ಇನ್ನು ಅಡಿಗೆಗೆ ತೊಡಗಲೇಬೇಕು. ಎಲ್ಲವನ್ನೂ ನಿತ್ಯಕ್ಕಿಂತ ಹೆಚ್ಚಿಗೆ ಮಾಡಬೇಕು. ಮನೆಗೆ ಜನ ಬರುತ್ತಾರೆಂದ ಮೇಲೆ ಎಲ್ಲವೂ ವ್ಯವಸ್ಥಿತವಾಗಿ ಆಗಬೇಕು.

ಚಡಪಡಿಸುತ್ತಲೇ ಅವಳು ಎದ್ದಳು. ಜಯಂತ ಮತ್ತೆ ತನ್ನ ಶೋಧದಲ್ಲಿ ಮಗ್ನನಾ

ಗಿದ್ದ. ಬೆಂಕಿಗೆ ತುಪ್ಪ ಬಿತ್ತು. ಅವನ ರಟ್ಟೆ ಹಿಡಿದು ಎಬ್ಬಿಸುತ್ತ ರಾಣಿ "ಹಾಳಾದವನೇ, ಆಡು, ಆಡು. ಹೋಗುತ್ತೀಯೊ ಇಲ್ಲೊ? ಎಲ್ಲರೂ ನನ್ನನ್ನು ಹೀಗೇಕೆ ಛಲಿಸುತ್ತೀರಿ? ಒಮ್ಮೆ ವಿಷಕೊಟ್ಟೊ, ಹೊಡೆದೊ ಕೊಂದು ಹಾಕಿಬಿಡಿ. ಅಂದರೆ ಈ ನರಕದಿಂದ ಪಾರಾಗುವೆ" ಎಂದು ಕೂಗಿದಳು.

ತನ್ನ ಮನಸ್ಸಿನ ವಿರುದ್ಧ ಜಯಂತ ತನ್ನ ಸಾಮಾನನ್ನು ಎತ್ತಿ ಇಡತೊಡಗಿದ. ತನ್ನ ಮನಸ್ಸಿನ ವಿರುದ್ಧ ರಾಣಿ ಅಡಿಗೆ ಮನೆಗೆ ಹೋದಳು. ಮನದಲ್ಲಿಯೆ ಜಯಂತ ತಾಯಿಯನ್ನು ಬಯ್ಯತೊಡಗಿದ್ದ. ಅವಳು ಯಾವಾಗಲೂ ಹೀಗೆಯೆ. ನನಗೆ ಬೇಕಾದ್ದನ್ನು ಮಾಡಲು ಬಿಟ್ಟರೆ ಇವಳ ಗಂಟೇನು ಹೋಗುತ್ತದೆ? ಕೆಟ್ಟ ಅಮ್ಮ!

ರಾಣಿಗೆ ಭಾವ ಮತ್ತು ನೆಗೆಣ್ಣಿಯರ ಮೇಲೇನೂ ಪ್ರೀತಿ ಇರಲಿಲ್ಲವೆಂದಲ್ಲ. ಅವರು ಬಂದರೆಂದು ಅವಳಿಗೆ ಬೇಸರವಾಗುವಪ್ರಶ್ನೆಯೂ ಇರಲಿಲ್ಲ. ಆದರೆ ಅವರು ಇಲ್ಲಿರುವಷ್ಟು ದಿನ ಅವಳ ಜೀವನ ಇನ್ನಷ್ಟು ನಿರರ್ಥಕವಾಗುತ್ತಿತ್ತು. ಈಗ ಅಪ್ಪಿತಪ್ಪಿ ಲಭ್ಯವಾಗುವ ಹತ್ತಾರು ನಿಮಿಷಗಳ ಬಿಡುವೂ ಸಿಗುತ್ತಿರಲಿಲ್ಲ. ಬಂದವರ ಆದರಾತಿಥ್ಯ ಗೃಹಿಣಿಯಾದವಳ ಧರ್ಮ.

ತುಸು ಹೊತ್ತಿನಲ್ಲಿ ಟಾಂಗಾ ಬಂದು ಮನೆಯೆದುರು ನಿಂತಿತು. "ರಾಜಾ", ಎನ್ನುತ್ತಲೇ ವಾಸುದೇವರಾಯರು ಒಳಗೆ ಬಂದರು. ಹಿಂದೆಯೆ ಸೀತಾಬಾಯಿ ಇದ್ದರು. ಆರಾಮ ಕುರ್ಚಿಯ ಮೇಲೆ ಕುಳಿತು "ಹುಶ್ ಹುಶ್" ಎನ್ನುತ್ತ ವಾಸುದೇವರಾಯರು "ರಾಣಿ, ಅಂತೂ ಒಮ್ಮೆ ಬಂದೆವು ನೋಡು. ಒಂದು ಎಳೆಂಟು ದಿನವಾದರೂ ಚೈನಿಯಿಂದ ಇರಬೇಕೆಂದು ಮಾಡಿದ್ದೇನೆ" ಎಂದರು.

"ನಾನು ಹಟ ಹಿಡಿದೆನೆಂದು ಬಂದರು. ತಿಳೀತೇನು ರಾಣಿ? ಇಲ್ಲವಾದರೆ ಕೆಲಸದಲ್ಲಿ ಇವರು ಬಂದಾರೆ? ನೋಡು, ಪ್ರಕೃತಿಯನ್ನುಹೇಗೆಮಾಡಿಕೊಂಡಿದ್ದಾರೆ!" ಸೀತಾಬಾಯಿ ಹೇಳಿದಳು.

"ಬೇಕಾದಾಗ ವಿಶ್ರಾಂತಿ ಪಡೆಯಲು ನಮಗೆಲ್ಲಿ ಸಾಧ್ಯ? ನಾವೇನು ಕೇಳಿದಾಗ ರಜೆ ಸಿಗುವ ನೌಕರರೇ? ರಾಣಿ, ನಿನ್ನ ರಾಜಾಸಾಹೇಬರು ಬರುವುದು ಎಷ್ಟೊತ್ತಿಗೆ?"

"ಬರುವ ವೇಳೆಯಾಗಿದೆ."

ಆಗಲೇ ರಾಜ ಬಂದ. ಅಣ್ಣನನ್ನು ಕಂಡು ಆಶ್ಚರ್ಯದಿಂದ "ಎಲಾ! ಎಲಾ! ಏನಿದು! ಅತ್ತಿಗೆ ಕೂಡ ಬಂದಿದ್ದಾಳೆ. ಯಾವಾಗ ಬಂದಿರಿ?" ಎಂದ.

"ಇದೇ ಈಗ ಬಂದೆ. ನಿನ್ನ ಮಾತನ್ನೆ ಕೇಳತೊಡಗಿದ್ದೆ. ನಶೀಬವಂತರು ನೀವೆಲ್ಲ. ನಾಲ್ಕಾರು ತಾಸು ಕೆಲಸ ಮಾಡಿದರೆ ಮುಗಿಯಿತು. ಆಫೀಸು ಹಾಳಾದರೂ ನಡೆಯುತ್ತದೆ. ರಾಜಾ, ನನ್ನ ವ್ಯಾಪಾರ ದಂಧೆಯಲ್ಲಿ ಬೇಸತ್ತು ಹೋಗಿದ್ದೇನೆ. ಇಪ್ಪತ್ತುನಾಲ್ಕು ತಾಸು ದುಡಿದರೂ ಮುಗಿಯುವುದೇ ಇಲ್ಲ. ಎಲ್ಲ ಬಿಟ್ಟು ನಿನ್ನಂತೆಯೆ ನೌಕರಿ ಮಾಡಬೇಕೆಂದು ಒಮ್ಮೊಮ್ಮೆ ಅನಿಸುತ್ತದೆ."

ರಾಜ ಗಹಗಹಿಸಿ ನಕ್ಕ. ಅಣ್ಣನ ಹತ್ತಿರ ಕುರ್ಚಿ ಹಾಕಿಕೊಂಡು ಕುಳಿತು ಹೇಳಿದ. "ಅಣ್ಣಾ, ನಿನಗೇನು ಹುಚ್ಚೆ? ಅಲ್ಲೊ, ಈಗಿನ ದಿನಗಳಲ್ಲಿ ವ್ಯಾಪಾರಿಯಂಥ ಸುಖಿ ಪ್ರಾಣಿ ಮತ್ತಾವುದೂ ಇಲ್ಲ. ರೊಕ್ಕವನ್ನು ಹಾಗೆಯೇ ಸಲಕೆಯಿಂದ ಬಳಿದುಕೊಳ್ಳುವವರು ನೀವು. ಮೂರ್ಖರೇ, ನೌಕರಿ ಮಾಡಬೇಕು. ನೋಡು, ನನಗೊಂದಿಷ್ಟು ಬಂಡವಳ ಕೊಡು. ರಾಜೀನಾಮೆ ಕೊಟ್ಟು ವ್ಯಾಪಾರ ಮಾಡುತ್ತೇನೆ."

ಈಗ ವಾಸುದೇವರಾಯರು ನಕ್ಕರು. "ಅಲ್ಲೋ ಹುಚ್ಚಾ, ಮೂರ್ಖನಿರುವಿ. ವ್ಯಾಪಾರ ಮಾಡುವುದೆಂದರೆ ಹುಡುಗಾಟಿಕೆಯೆಂದು ತಿಳಿದಿಯೇನು? ಅದರಲ್ಲಿ ನೀನು ದುಡ್ಡನ್ನಷ್ಟೇ ಕಂಡೆ ವಿನಾ..."

"ಹೌದು. ಮತ್ತೆ ನೀನು, ನೌಕರಿಯಲ್ಲಿಯ ಆರಾಮನ್ನು ಕಂಡೆಯ ವಿನಾ ಕಷ್ಟವನ್ನಲ್ಲ. ನಮಗೆ ಕೆಲಸ ಕಡಿಮೆಯಿರುತ್ತದೆ ಎಂದು ತಿಳಿದಿಯೇನು? ದೇಶ ಸ್ವತಂತ್ರವಾದ ಬಳಿಕಂತೂ ಫೈಲುಗಳು ನಾಯಿಕೊಡೆಗಳ ಹಾಗೆ, ಬೆಳೆದಿವೆ. ಕೆಲಸ ಮಾಡಿದಷ್ಟೂ ಮುಗಿಯುವುದಿಲ್ಲ. ಸ್ವಲ್ಪ

ತಡವಾದರೆ ಸಾಕು, ರಸ್ತೆಯಲ್ಲಿ ಹೋಗುವವನು ಕೂಡ ನೆಟ್ಟಗೆ ಮಂತ್ರಿಗಳ ಬಳಿ ದೂರು ಒಯ್ಯುತ್ತಾನೆ. ಹೆಚ್ಚು ಕೆಲಸ, ಕಡಿಮೆ ಸಂಬಳ. ಮತ್ತೆ ಮೇಲೆ ಯಾವಾಗ ಏನಾದಿತೋ ಎಂಬ ಭಯ. ಹೋಗಲಿ ಬಿಡು. ರಾಣೀ, ರಾಣೀ, ಚಹವನ್ನಾದರೂ ಕೊಟ್ಟಿರುವೆಯೋ ಇಲ್ಲೊ ಇವರಿಗೆ."

"ಮಾಡತೊಡಗಿದ್ದೆ. ಸೀತಕ್ಕನೇ ಬೇಡ ವೆಂದರು" ರಾಣಿ ಹೊರಗೆ ಬಂದು ಹೇಳಿದಳು.

"ಬೇಡ ರಾಜಾ ಚಹ. ಚಹ ಕುಡಿದು ಕುಡಿದು ಇವರು ಆರೋಗ್ಯವನ್ನು ಹಾಳು ಮಾಡಿಕೊಂಡಿದ್ದಾರೆ," ಸೀತಾಬಾಯಿ ಹೇಳಿದರು.

"ಮತ್ತೇನು ಮಾಡಲಿ? ಇವಳಿಗೆ ತಿಳಿಯುವುದೇ ಇಲ್ಲ. ನಮ್ಮಲ್ಲಿ ನಿತ್ಯ ನೂರಾರು ಜನ ಬರುತ್ತಾರೆ. ಕೆಲವರಿಗೆ ನಾವು ಚಹ ಕೊಡಬೇಕಾಗುತ್ತದೆ, ಕೆಲವರು ನಮಗೆ ಕೊಡುತ್ತಾರೆ. ದಣಿದ ದೇಹಕ್ಕೆ ಈ ಗುಟುಕು ಚಹದಿಂದ ಅಷ್ಟೇ ಹಾಯೆನಿಸುತ್ತದೆ. ಇವಳಿಗೊಂದು ತಿಳಿಯಬೇಕಲ್ಲ. ಮನೆಗೆ ಬರುವ ಪುರಸೊತ್ತಿಲ್ಲದೆ ಶಿರಾ, ಉಪ್ಪಿಟ್ಟು, ಭಜಿ, ಬಟಾಟೆ, ಅವಲಕ್ಕಿ, ಉದ್ದಿನ ವಡೆ—ಒಂದೇ ಎರಡೇ! ಮುಂದಿಡುತ್ತಾಳೆ."

ನಾಲಿಗೆ ಚಪ್ಪರಿಸುತ್ತ ರಾಜ ಕೇಳಿದ "ಇದೇನು ತಪ್ಪೇ?"

"ಮತ್ತೆ? ಯಾಕೆ ಇಷ್ಟೆಲ್ಲ ಹವ್ಯಾಸ? ನನಗೆ ಅದು ಇದು ತಿನ್ನುವ ಚಪಲವಿಲ್ಲ. ನನ್ನ ಹೊಟ್ಟೆ ಯಾವಾಗಲೂ ತುಂಬಿರುತ್ತದೆ."

"ಚಹದಿಂದ" ಸೀತಾಬಾಯಿ ನಡುವೆಯೆ ಬಾಣ ಎಸೆದರು.

"ಇರಬಹುದು. ಆದರೆ ಹೊಟ್ಟೆ ತುಂಬಿರುವಾಗ ಇವಳು ಇಷ್ಟನ್ನೆಲ್ಲ ಯಾಕೆ ಮಾಡಬೇಕು? ಅಲ್ಲೇ ಇಡೀ ದಿನ ಒಲೆಯ ಮುಂದೆ ಯಾಕೆ ಕುಳಿತಿರುತ್ತೀ? ನನಗೇನೂ ಈ ತಿಂಡಿ ತಿನಸು ಬೇಡ. ರಾಣಿಯ ಹಾಗೆ ಏನಾದರೂ ಓದು, ಬರಿ ಎಂದು ಹೇಳಿಯೆ ಹೇಳುತ್ತೇನೆ. ಇವಳು ಕೇಳುವುದಿಲ್ಲ. ರಾಣಿ, ಇವಳಿಗೊಂದಿಷ್ಟು ನೀನಾದರೂ ಹೇಳು. ಮತ್ತೆ, ಮೊನ್ನೆ ಯಾವುದೋ ಒಂದು ಮಾಸಿಕ ಪತ್ರಿಕೆಯಲ್ಲಿ ನಿನ್ನ ಕವಿತೆ ಓದಿದೆ. ಬಹಳ ಚೆನ್ನಾಗಿತ್ತು" ವಾಸುದೇವರಾಯರು ನುಡಿದರು.

ಕಡುಬೇಸಿಗೆಯ ಬಿಸಿಲಿನಲ್ಲಿ ನಿಂತಾಗ ಮೈಮೇಲೆ ಕಾರಂಜಿ ಪುಟಿದಂತಾಯಿತು ರಾಣಿಗೆ ಈ ಮಾತು ಕೇಳಿ. ಅಷ್ಟರಲ್ಲಿ ರಾಜ "ರಾಣಿ, ಬೆಳಿಗ್ಗೆ ಹೇಳಿದ್ದೆನಲ್ಲ, ವಾಂಗೀಭಾತಿನ ವಿಚಾರ. ಜೊತೆಗೆ ಏನಾದರೂ ಸಿಹಿಯೂ ಇರಲಿ," ಎಂದ. ರಾಣಿಗೆ ನೆರಳಿನಿಂದೆತ್ತಿ ಬೆಂಕಿಯಲ್ಲಿ ಚೆಲ್ಲಿದಂತಾಯಿತು. ಅವಳು ಆದ ದುಃಖವನ್ನು ನುಂಗಿಕೊಂಡು ಅಡಿಗೆ ಮನೆಯತ್ತ ಹೊರಟಳು. ಆಗ ಸೀತಾಬಾಯಿ "ನಾನೇ ಮಾಡುತ್ತೇನೆ ಇಂದು ಅಡಿಗೆ. ನಾನು ಮಾಡಿದ ವಾಂಗೀಭಾತು ತಿಂದಿರೆಂದರೆ ನೀವು ಅದಕ್ಕಾಗಿಯೆ ವಾರ-ಕ್ಕೊಮ್ಮೆ ರಜೆ ತೆಗೆದುಕೊಂಡು ಓಡಿ ಬಂದೀರಿ ನಮ್ಮ ಮನೆಗೆ" ಅಂದರು.

"ಆದರೆ ಸೀತಕ್ಕಾ, ನೀವು ಪ್ರವಾಸದಿಂದ ದಣಿದಿದ್ದೀರಿ. ನೀವು ಯಾಕೆ" ರಾಣಿಯ ಮಾತನ್ನು ತಡೆದು ಸೀತಾಬಾಯಿ "ಛೆ! ಛೆ! ನನಗೆ ಪ್ರಿಯವಾದ ಕೆಲಸ. ಅದರಲ್ಲೂ ಪ್ರೀತಿಯಿಂದ ತಿನ್ನುವವರು ಸಿಕ್ಕರೆ ನನಗೆ ಎಲ್ಲಿಲ್ಲದ ಹುರುಪು ಬರುತ್ತದೆ" ಎಂದವರೇ ಅಡಿಗೆ ಮನೆಗೆ ನಡೆದರು. ರಾಣಿ ಕೂಡ ಹಿಂದೆಯೆ ಹೋದಳು.

ರಾಣಿ ಒಳಗೆ ಹೋದ ಮೇಲೆ ಜಯಂತ ಬಂದು "ದೊಡ್ಡಪ್ಪಾ" ಎಂದ.

"ಎಲಾ! ಕಳ್ಳಾ, ಇಷ್ಟೊತ್ತು ಎಲ್ಲಿದ್ದೆಯೊ?"

"ಹೌದು. ಕಳ್ಳನ ಹಾಗೆ ಅಡಗಿ ನಿಂತಿದ್ದೆ. ಈಗ ಅಮ್ಮ ಒಳಗೆ ಹೋದ ಮೇಲೆ ಜೇಲಿನಿಂದ ಬಿಡುಗಡೆಯಾಗಿ ಬಂದೆ."

"ಯಾಕೊ? ಹೀಗೇಕೆ ಮಾತಾಡುತ್ತಿ?"

"ನಾನು ಮಾಡುವುದು ಅಮ್ಮನಿಗೆ ಸೇರುವುದಿಲ್ಲ. ದೊಡ್ಡಪ್ಪ, ನಾನು ಮಾಡಿರುವುದನ್ನೆಲ್ಲ ನಿಮಗೆ ತೋರಿಸುತ್ತೇನೆ. ಇದು ನೋಡಿ, ನಾನು ತಯಾರಿಸಿರುವ ಇಲೆಕ್ಟ್ರಿಕ್ ಫ್ಯಾನು. ಇದು ಬಾಗಿಲಿಗೆ ಕೂಡಿಸುವ ಗಂಟೆ. ಮನೆಗೆ ಬಂದವರು ಬಾಗಿಲು ತಟ್ಟಿ ಬಡಿಯುವ ಕಾರಣವಿಲ್ಲ.

ಬಟನ್ ಒತ್ತಿದರೆ ಸಾಕು. ಒಳಗೆ "ಟ್ರಸ್" ಎಂದು ಸಪ್ಪಳವಾಗುತ್ತದೆ."

"ವ್ಹಾ ವ್ಹಾ! ಎಂಥ ಬುದ್ಧಿವಂತನಿರುವಿಯೊ ನೀನು!"

"ದೊಡ್ಡಪ್ಪಾ, ನಿಜವಾಗಿಯೂ ನಿಮಗೆ.."

"ಹೌದೌದು. ನನಗೆ ನಿನ್ನಂಥ ಜಾಣರನ್ನು ಕಂಡರೆ ಬಲು ಪ್ರೀತಿ. ರಾಜಾ, ಏ ರಾಜಾ, ಜಯಂತನಿಗೆ ಏನು ಬೇಕಾದ್ದು ತಂದು ಕೊಡು. ಮುಂದೆ ಈತ ದೊಡ್ಡ ಹೆಸರು ಸಂಪಾದಿಸು-ತ್ತಾನೆ, ನೋಡು."

ಏನನ್ನೊ ಬರೆಯುತ್ತಾ ಕುಳಿತಿದ್ದ ರಾಜ ತಲೆಯೆತ್ತಿ ಕೊಡಹಿ ಮತ್ತೆ ಬರೆಯುವುದರಲ್ಲಿ ಮಗ್ನನಾದ.

"ದೊಡ್ಡಪ್ಪಾ, ನಾನೀಗ ರೇಡಿಯೊ ಮಾಡಬೇಕೆಂದಿದ್ದೇನೆ. ಅದಕ್ಕೆ ಬರೀ ಐವತ್ತು ರೂಪಾಯಿ ಸಾಕು. ಆದರೆ ಅಪ್ಪ ನನ್ನ ಮಾತು ಕೇಳುವುದೇ ಇಲ್ಲ."

"ಏನೋ ರಾಜಾ, ಮಕ್ಕಳ ಹುರುಪನು ಹೀಗೆ ಕುಗ್ಗಿಸಬಾರದು. ಜಯಂತಾ, ನೀನ್ನ ರೇಡಿಯೊ ಮಾಡು. ನಾನು ರೂಪಾಯಿ ಕೊಡುತ್ತೇನೆ" ಎಂದು ವಾಸುದೇವರಾಯರು ಹೆಂಡತಿಯನ್ನೂ ರಾಣಿಯನ್ನೂ ಹೊರಗೆ ಕರೆದರು.

ಅವರಿಬ್ಬರೂ ಗಡಿಬಿಡಿಯಿಂದ ಹೊರಗೆ ಬಂದರು. ವಾಸುದೇವರಾಯರು ಜಯಂತ ತಯಾರಿಸಿದ ಸಾಮಾನುಗಳನ್ನು ತೋರಿಸುತ್ತ "ನೋಡಿ ನೋಡಿ. ಹುಡುಗ ಎಷ್ಟು ಹುಷಾರಿದ್ದಾನೆ. ಇಷ್ಟು ಚಿಕ್ಕ ವಯಸ್ಸಿನಲ್ಲಿ ಏನೇನು ಮಾಡಿದ್ದಾನೆ!" ಎಂದರು.

ಸೀತಾಬಾಯಿ ಆಶ್ಚರ್ಯ ಮತ್ತು ಕೌತುಕದಿಂದ ಜಯಂತನನ್ನು ಕುರಿತು "ನೀನೇ ಮಾಡಿ-ರುವಿಯಾ ಜಯಂತಾ? ವ್ಹಾ! ದೀರ್ಘಾಯುಷಿಯಾಗು. ಅದೇ ನಮ್ಮ ವಿಜಯ ಇದ್ದಾನಲ್ಲ, ಆತನಿಗೆ ಯಾವ ಇಂಥ ಹುಚ್ಚೂ ಇಲ್ಲ. ಇಡೀ ದಿನ ಆಟ ಆಟ. ಬ್ಯಾಟು, ಹ್ಯಾಟು, ಬೂಟುಗಳಲ್ಲೆ ಮುಳುಗಿರುತ್ತಾನೆ" ಎಂದರು.

"ಛೆ! ಛೆ! ಇವನನ್ನೇನು ಹೊಗಳುತ್ತೀರಿ? ಇವನಿಗೇನೂ ಬುದ್ಧಿಯೆ ಇಲ್ಲ. ಆಡಬೇಕಾದ ಈ ವಯಸ್ಸಿನಲ್ಲಿ ಈತ ಶುಂಭನ ಹಾಗೆ ಇಡೀ ದಿನ ಇವನ್ನೆಲ್ಲ ಹರಡಿಕೊಂಡು ಮನೆಯಲ್ಲಿ ಕುಳಿತಿರುತ್ತಾನೆ" ರಾಣಿ ಹೇಳಿದಳು. ಆ ಮೇಲೆ ಜಯಂತನಿಗೆ "ಇವರೇನೂ ಓಡಿ ಹೋಗುವುದಿಲ್ಲ. ನಾಲ್ಕು ದಿನ ಇರುತ್ತಾರೆ. ನಿನ್ನ ಮಂಗಾಟಿಕೆ ತೋರಿಸಲು ಬೇಕಷ್ಟು ವೇಳೆ ಇದೆ. ಈಗ ಹೋಗು ಆಡಲಿಕ್ಕೆ" ಎಂದು ಅಪ್ಪಣೆ ಮಾಡಿದಳು.

ಬರೆಯುತ್ತಲಿದ್ದ ರಾಜ ತಲೆಯೆತ್ತಿ "ಅಣ್ಣಾ, ನೀನು ವಿಶ್ರಾಂತಿಗಾಗಿ ಬಂದಿರುವಿ ತಾನೇ? ಹಾಗಾದರೆ ನಾಳೆ ಎಲ್ಲರೂ ವನಭೋಜನಕ್ಕೆ ಹೋಗೋಣ. ರಜೆ ತೆಗೆದುಕೊಂಡುಬಿಡುತ್ತೇನೆ. ಎಲ್ಲಿ ಹೋಗಬೇಕು ಎಂದು ಎಲ್ಲರೂ ಕೂಡಿ ನಿರ್ಧರಿಸೋಣ. ಆದರೆ ಸಂಗಡ ಒಯ್ಯುವ ತಿಂಡಿ ತಿನಸುಗಳ ಪಟ್ಟಿ ತಯಾರಿಸಿಬಿಟ್ಟಿದ್ದೇನೆ. ಪುರಿ ಪಲ್ಯ, ಗುಲಾಬಜಾಮೂನ್, ಉಳ್ಳಾಗಡ್ಡೆ ಭಜಿ, ಚಟ್ನಿ, ಕೋಸಂಬರಿ, ಮೊಸರು ಅನ್ನ, ವಠಾಣಿ ಭಾತ್.."

ರಾಜ ಓದುತ್ತಿದ್ದಂತೆ ರಾಣಿಯ ಕಣ್ಣಿಗೆ ಕತ್ತಲು ಬರತೊಡಗಿತ್ತು. ಇಡೀ ಮನೆಯೆ ಗರಗರ ತಿರುಗುತ್ತಿರುವಂತೆ ಅವಳಿಗನಿಸಿತು.

"ರಾಣಿ, ರಾಣಿ ಏನಾಯಿತು?" ವಾಸುದೇವರಾಯರು ಕೂಗಿದರು.

ಕುಸಿಯುತ್ತಲಿದ್ದ ರಾಣಿಯನ್ನು ಹಿಡಿಯುತ್ತ ಸೀತಾಬಾಯಿ "ಅವ್ವಯ್ಯ! ರಾಣಿ ಏನಾಯಿತು?" ಎಂದು ಕೇಳಿದರು.

"ದೊಡ್ಡಮ್ಮ, ನಿನ್ನ ಬೆನ್ನ ಹಿಂದೆ ಗೋಡೆಗೆ ಇರುವ ಬಟನ್ ಒತ್ತು. ನಾನೇ ತಯಾರಿಸಿದ ಫ್ಯಾನ್‌ನ ಬಟನ್ ಅದು. ತಂಪು ಗಾಳಿ ಬೀಸಿ ಅಮ್ಮನಿಗೆ...." ಜಯಂತ ಮಾತಾಡುತ್ತಿದ್ದಂತೆ ರಾಣಿ ಒಮ್ಮೆಲೆ ಜಿಗಿದೆದ್ದು "ಹಾಳಾದವನೇ, ತೊಲಗು. ಹೋಗು ಆಡಲಿಕ್ಕೆ. ಮಹಾ ದೊಡ್ಡ ಸಂಶೋಧಕ, ಮೆಕ್ಯಾನಿಕ್ ಆಗಿದ್ದಾನೆ ಬುದ್ಧಿಯಿಲ್ಲದವ. ಓಡು ಓಡು" ಎಂದು ಕೂಗಿದಳು.*



ಈ ಭಿಲ್ಲ ಗಾಯಾಳು ಕಾಡುಪ್ರಾಣಿಗಳ ಸೇವೆ ಮಾಡುತ್ತಾನೆ

# ವನ್ಯ ಪಶುಗಳ ಮಿತ್ರ: ಪೂಂಜಾಬಾಬಾ

ಶ್ಯಾಮೂ ಸಂನ್ಯಾಸಿ

ಕಾಲಿಲ್ಲದ, ಕುಂಟಾದ, ಗಾಯಾಳು ಮತ್ತು ಬೇನೆಯಿಂದ ಬಳಲುವ ಪ್ರಾಣಿ-ಪಕ್ಷಿಗಳನ್ನು ಸಾಕುವುದು ಪೂಂಜಾಬಾಬಾನ ಕೆಲಸ. ಇಂದಿನ ನವನಾಗರಿಕತೆಯಿಂದ ತೀರ ದೂರ ವಿಂಧ್ಯ ಮತ್ತು ಸಾತಪುಡಾ ಪರ್ವತಗಳನ್ನು ಜೋಡಿಸುವ ದಟ್ಟ ಅಡವಿಯಲ್ಲಿ ಸುಮಾರು ಒಂದೂವರೆ ಮೈಲು ವಿಸ್ತಾರದ ಪ್ರದೇಶದಲ್ಲಿ ತನ್ನ ಆಶ್ರಮವನ್ನು ಕಟ್ಟಿಕೊಂಡು ಪೂಂಜಾಬಾಬಾ ಇರುತ್ತಾನೆ. ಇಲ್ಲಿ ವಾಸಿಸುವ ಈ ಮೂಕ ಸಾಧಕ ಮೂಕ ಪ್ರಾಣಿಗಳ ಸೇವೆಯಲ್ಲಿ ನಿರತನಾಗಿ ದಯಾಭಾವಕ್ಕೇ ಮೂರ್ತರೂಪವನ್ನು ಕೊಡುತ್ತಿದ್ದಾನೆ.

ಗಾಯಾಳು ಹಾಗೂ ಬೇನೆಬಿದ್ದ ಕಾಡು ಪ್ರಾಣಿಗಳ ಶುಶ್ರೂಷೆಯನ್ನು ಈ ರೀತಿ ಮಾಡುವ ಉದಾಹರಣೆ ಇಡಿ ಜಗತ್ತಿನಲ್ಲೇ ಬೇರೊಂದು ಇರಲಿಕ್ಕಿಲ್ಲ. ಲೋಕಸೇವಕರ ಸಂಸ್ಥೆಗಳಿರುವುದು ನಮಗೆ ಗೊತ್ತು. ಸಾಕು ಪ್ರಾಣಿಗಳ ಮೇಲೆ ದಯೆದೋರುವವರ ಬಗ್ಗೆಯೂ ನಾವು ಕೇಳಿರುತ್ತೇವೆ. ಆದರೆ ಕಾಡುಪ್ರಾಣಿಗಳನ್ನು ಕರುಣೆಯಿಂದ ಕಾಣುವ, ಅವುಗಳ ಸೇವೆಯಿಂದ ಕೃತಕೃತ್ಯನಾಗುವ ವ್ಯಕ್ತಿ ನನಗೆ ಗೊತ್ತಿರುವ ಮಟ್ಟಿಗೆ ಇವನೊಬ್ಬನೇ.

ಪೂಂಜಾಬಾಬಾನ ಹೆಸರು ಮತ್ತು ಕಾರ್ಯ ಇವುಗಳ ಪರಿಚಯ ನನಗೆ ಅಕಸ್ಮಾತ್ತಾಗಿ ಆಯಿತು. ಮಾಟಿಲಾ, ಶೋಭಲಾ ಮತ್ತು ಡುಂಗರಬಾಬಾ ಎಂಬ ಮೂವರು ಭಿಲ್ಲ ಸಹಕಾರಿಗಳೊಂದಿಗೆ ನಾನು ಒಂದು ವಸತಿಯಿಂದ ಇನ್ನೊಂದು ವಸತಿಗೆ ಜಾನಪದ ಕಥೆಗಳ

‘ ನವನೀತ ’ ದಿಂದ

ಸಂಶೋಧನೆ ಮಾಡುತ್ತಾ ನಡೆದಾಗ ಕಾಡಿನಲ್ಲಿ ಒಂದು ಹೆಣ್ಣು ನರಿ ಗಾಯಗೊಂಡು ಚಡಪಡಿಸುತ್ತಿರುವುದನ್ನು ಕಂಡೆನು. ಅದರ ಎಡ ಮುಂಗಾಲಿಗೆ ಗಾಯವಾಗಿತ್ತು. ನಮ್ಮನ್ನು ನೋಡಿ ಅದು ಹೆದರಿ ಓಡಲೆತ್ನಿಸಿತು. ಮೂರೇ ಕಾಲಿನಿಂದ ನೆಗೆಯಲು ಹೋಗಿ ಬಿದ್ದು ಚೀರತೊಡಗಿತು. ಅದರ ಚೀತ್ಕಾರ ಕೇಳಿ ನೊಂದು "ಪಾಪ ಯಾರಾದರೂ ಇದಕ್ಕೆ ಗುಂಡುಹಾಕಿ ಇದನ್ನು ಅಸಹ್ಯ ವೇದನೆಗಳಿಂದ ಪಾರು ಮಾಡಬೇಕು" ಎಂದು ನಾನಂದೆ. ಇದನ್ನು ಕೇಳಿ ಡುಂಗರಬಾಬಾ "ಛೆ! ಛೆ! ಇದನ್ನು ಪೂಂಜಾ ಬಾಬಾನ ಆಶ್ರಮಕ್ಕೆ ಒಯ್ದು ಒಪ್ಪಿಸಬೇಕು. ಅವನು ಇದರ ಆರೈಕೆಮಾಡಿ ಇದನ್ನು ಗುಣಪಡಿಸುವನು" ಎಂದನು.

ಅವನ ಮಾತುಕೇಳಿ ನನಗೆ ಆಶ್ಚರ್ಯವೆನಿಸಿತು. ಅಷ್ಟರಲ್ಲಿ ಡುಂಗರಬಾಬಾನ ಹೇಳಿಕೆಯ ಮೇರೆಗೆ ಮಾಟಿಲಾ ಮತ್ತು ಶೋಭಲಾ ಇವರಿಬ್ಬರೂ ಹೇಗೊ ಆ ನರಿಯನ್ನು ಎತ್ತಿ ಚಾದರಿನ ಜೋಳಿಗೆಯಲ್ಲಿ ಹಾಕಿಕೊಂಡರು.

ನಾವೆಲ್ಲ ಆಶ್ರಮಕ್ಕೆ ಹೋದಾಗ ಅಲ್ಲಿ ಸಾಮಾನ್ಯ ಎತ್ತರದ, ಬಡಕಲು ಮೈಯ ಭಿಲ್ಲನೊಬ್ಬ ಕೋಡು ಮುರಿದ ಜಿಂಕೆಯೊಂದನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಅದಕ್ಕೆ ಪಟ್ಟಿ ಕಟ್ಟುತ್ತಿದ್ದ. ಆತ ತೊಟ್ಟದ್ದು ಬರೇ ಒಂದು ಲಂಗೋಟಿ. ತಲೆಗೊಂದು ಅರಿವೆಯ ತುಂಡನ್ನು ಸುತ್ತಿದ್ದ ಅಷ್ಟೇ. ತಲೆ ಕೂದಲು, ಗಡ್ಡ ಮೀಸೆ ಬೆಳ್ಳಗಾಗುತ್ತಿದ್ದವು. ನಮ್ಮ ಸದ್ದು ಕೇಳಿ ಆತ ನಮ್ಮತ್ತ ಹೊರಳಿ ನೋಡಿದ. ಎಡಗಿವಿಯಿಂದ ಬಲಕಿವಿಯ ವರೆಗೆ ಮುಖದ ಮೇಲೆ ಗಾಯದ ಕಚ್ಚು ಮೂಡಿತ್ತು. ಆತ ನಗು-ನಗುತ್ತಲೇ ನಮ್ಮನ್ನು ಸ್ವಾಗತಿಸಿದ. ಮುತ್ತಿನಂತೆ ಹೊಳೆಯುವ ದಂತ ಪಂಕ್ತಿಗಳನ್ನು ಆತ ತೆರೆದುದರಿಂದ ಗಾಯಗೊಂಡ ಅವನ ಮುಖ ಇನ್ನಷ್ಟು ಅಂದವಾಗಿ ಕಾಣತೊಡಗಿತು.

ಜಿಂಕೆಯನ್ನು ಹತ್ತಿರದ ಹುಲ್ಲಿನ ಮೆತ್ತಗಿನ ಹಾಸಿಗೆಯ ಮೇಲೆ ಇಟ್ಟು ಎದ್ದು "ಬನ್ನಿ ಬಾಬಾ" ಎಂದು ಡುಂಗರ ಬಾಬಾನನ್ನು ಆಲಿಂಗಿಸಿದ. ಶೋಭಲಾ ಮತ್ತು ಮಾಟಿಲಾ ಇವರು ಮುಂದೆ ಮಾಡಿದ ಕೈಗಳನ್ನು ತನ್ನ ಕೈಗಳಿಂದ ಅದುಮಿದ. ನನ್ನತ್ತ ಜಿಜ್ಞಾಸೆಯಿಂದ ನೋಡಿ ಅತಿಶಯ ದಯಾರ್ದ್ರ ಸ್ವರದಲ್ಲಿ "ರೋಗಿ ಪ್ರಾಣಿಯನ್ನು ಜೋಳಿಗೆಯಲ್ಲಿ ಹಾಕಿ ತಂದಿರೇನು?" ಎಂದು ಕೇಳಿದ.

ಇವನೇ ಪೂಂಜಾಬಾಬಾ.

ಪೂಂಜಾಬಾಬಾ ಕೂಡಲೆ ನರಿಯನ್ನು ಜೋಳಿಗೆಯಿಂದ ಹೊರತೆಗೆದು ಅದರ ಗಾಯಗಳಿಗೆ ಔಷಧಿ ಹಚ್ಚಿ ಪಟ್ಟಿ ಕಟ್ಟಿದನು. ಅವನ ದೃಷ್ಟಿಯಲ್ಲಿ ಹಾಗೂ ಸ್ಪರ್ಶದಲ್ಲಿ ಅದೇನು ಅದ್ಭುತ ಶಕ್ತಿಯಿತ್ತೋ ಅಂಥ ಕಾಡು ನರಿಯೂ ಯಾವ ವಿರೋಧವೂ ಇಲ್ಲದೆ ಆರೈಕೆ ಮಾಡಿಸಿಕೊಂಡಿತು.

ನನ್ನ ಪರಿಚಯವಾದ ಮೇಲೆ ನನ್ನ ಜಿಜ್ಞಾಸೆ ಅರಿತು ಪೂಂಜಾಬಾಬಾ ಅತಿಶಯ ಉತ್ಸಾಹದಿಂದ ತನ್ನ ಆಶ್ರಮವನ್ನೂ ಆಶ್ರಮದ ಪ್ರಾಣಿಗಳನ್ನೂ ತೋರಿಸಿದ. ಆಗ ಅಲ್ಲಿ ಸುಮಾರು ನೂರಾಇಪ್ಪತ್ತೈದು ಪಶು-ಪಕ್ಷಿಗಳು ಅವನ ಶುಶ್ರೂಷೆಯ ಲಾಭ ಹೊಂದುತ್ತಿದ್ದವು.

ಹತ್ತು ಹರಿಣಗಳಿದ್ದವು. ಒಂದರ ಪಾದಕ್ಕೆ ಪೆಟ್ಟು ಬಿದ್ದಿತ್ತು. ಇನ್ನೊಂದರ ಮೊಳಕಾಲಿಗೆ ಪೆಟ್ಟು ಬಿದ್ದಿತ್ತು. ಕೆಲವುದರ ಕೋಡುಗಳು ಮುರಿದಿದ್ದವು. ಎರಡರ ಬೆನ್ನ ಮೇಲೆ ಗಾಯಗಳಾಗಿದ್ದವು. ಒಂದರ ಕಿವಿ ಹರಿದಿತ್ತು.

ನಾಲ್ಕು ಬಿಳೇಕಾಲಿನ ಜಿಂಕೆಗಳಿದ್ದವು. ಮೂರು ಮಂಗಗಳಿದ್ದವು. ಮತ್ತು ನಾವು ಒಯ್ದ ನರಿ ಹಿಡಿದು ನಾಲ್ಕು ನರಿಗಳಿದ್ದವು. ಮೊಲಗಳು ಎಲ್ಲಕ್ಕಿಂತ ಹೆಚ್ಚು— ೧೦-೧೨ ಆದರೂ ಇರಬೇಕು. ಎಂಟು ಹತ್ತು ಕಾಡು ಇಲಿಗಳಿದ್ದವು. ಒಂದು ಇಣಚಿ (ಅಳಿಲು) ಇತ್ತು. ಒಂದು ಕುಂಟ ಕತ್ತೆ ಇತ್ತು. ತಗ್ಗಾದ ಒಂದು ಕಡೆ ಬಾಲ ಕಳಚಿ ಬಿದ್ದ ಒಂದು ಮೊಸಳೆಯೂ ಇತ್ತು. ಎರಡು ಆಮೆಗಳಿದ್ದವು. ಒಂದಕ್ಕೆ ಮೂರೇ ಕಾಲುಗಳಿದ್ದವು. ಇನ್ನೊಂದು ಬಹುಶಃ ನೀರರೋಗಿ

ಇರಬೇಕು.

ಪಕ್ಷಿಗಳಲ್ಲಿ ಕಾಲು ಮತ್ತು ಪುಚ್ಛ ಕಳೆದು ಕೊಂಡ ಒಂದು ನವಿಲು ಇತ್ತು. ಹರಿದ ಅಂಗಾಲುಗಳ ಮತ್ತು ತರಿದ ರೆಕ್ಕೆಗಳ ಗಂಡು ಗಿಳಿ, ಕಾಗೆ, ಹೆಣ್ಣು ಗಿಳಿ, ಕೋಕಿಲೆ ಮತ್ತು ನನಗೆ ಹೆಸರು ಸಹ ಗೊತ್ತಿಲ್ಲದ ಅನೇಕ ಬಗೆಯ ಪಕ್ಷಿಗಳು ಇದ್ದವು. ಹಾಗೇ ಬಕಪಕ್ಷಿಯ ಒಂದು ಜೋಡಿಯೂ ಇತ್ತು. ಈ ಕಾಡಿನಲ್ಲಿ ಇವು ಹೇಗೆ ಬಂದಿದ್ದವೊ! ಹೆಣ್ಣು ಬಕಪಕ್ಷಿಯ ಮೊಳಕಾಲಿಗೆ ಪಟ್ಟಿ ಕಟ್ಟಲಾಗಿತ್ತು. ಅದಕ್ಕೆ ಎದ್ದು ನಿಲ್ಲಲಿಕ್ಕೂ ಬರುತ್ತಿದ್ದಿಲ್ಲ.

ಎಲ್ಲವನ್ನೂ ನೋಡಿಯಾದ ಮೇಲೆ ನಾನು ಅಂದೆ: "ಪೂಂಜಾಬಾಬಾ, ನಿಜವಾಗಿಯೂ ನಿಮ್ಮ ಕೆಲಸ ಬಹು ಘನವಾದದ್ದು."

ಅದಕ್ಕವನು ಗಟ್ಟಿಯಾಗಿ ನಕ್ಕು ಉತ್ತರಿಸಿದನು. "ಅಂಥ ಘನತೆ ಏನು ಬಂತು ಅದಕ್ಕೆ? ಪಶು ಪಕ್ಷಿಗಳು ಮೂಕ ಪ್ರಾಣಿಗಳು. ಅವಾವಕ್ಕೂ ಕೈಗಳಿಲ್ಲ. ನಾನು ನನ್ನ ಕೈಗಳಿಂದ ಅವಕ್ಕೆ ಎಲ್ಲೋ ಸ್ವಲ್ಪ ಸಹಾಯ ಮಾಡುವೆ ಅಷ್ಟೇ. ಮತ್ತೇನೂ ಇಲ್ಲ."

ಕೆಲಹೊತ್ತಿನ ಮೇಲೆ ನಾನು ಕೇಳಿದೆ: "ಈ ಪ್ರಾಣಿಗಳನ್ನು ಎದುರಿಸುವ ಪ್ರಸಂಗವೆಂದೂ ಬರುವುದಿಲ್ಲವೆ?"

ಅದಕ್ಕೆ ಡುಂಗರ ಬಾಬಾ, "ಒಮ್ಮೆ ಒಂದು ತೋಳವನ್ನು ಉಪಚರಿಸುತ್ತಿದ್ದಾಗ ಅದು ತನ್ನ ಉಗುರಿನಿಂದ ಇವರ ಮುಖಕ್ಕೆ ಜೋರಾಗಿ ಹೊಡೆಯಿತು. ಅವರ ಮುಖದ ಮೇಲೆ ಈಗಲೂ ಕಾಣುವ ಗಾಯ ಆ ದಿನದ್ದೇ! ಆದರೆ ಪೂಂಜಾ ಬಾಬಾ ಹೀಗಾಯಿತೆಂದು ತನ್ನ ವ್ರತ ಬಿಡುತ್ತಾರೆಯೇ?" ಎಂದ

"ಒಮ್ಮೆ ಹತ್ತಿದ ಚಟ ಬಿಟ್ಟು ಹೋಗುವುದೆ? ಪ್ರಾಣಿಗಳು ಪ್ರಾಣಿಗಳ ರೀತಿಯಂತೆ ವರ್ತಿಸುತ್ತವೆ. ಅವುಗಳ ರೀತಿ ನಿಶ್ಚಿತವಾಗಿರುತ್ತದೆ. ಆದರೆ ನಾವು ಮನುಷ್ಯರು ಮನುಷ್ಯರ ರೀತಿಯಂತೇ ವರ್ತಿಸಬೇಕಲ್ಲ!" ಪೂಂಜಾ ಬಾಬಾ ಹೇಳಿದ.

ಮಾನವತೆಯಲ್ಲಿ ಅಚಲ ನಂಬಿಕೆ ಇಟ್ಟಿರುವ ಈ 'ಕಾಡು' ಮಹಾತ್ಮನನ್ನು ನಾನು ಮನಸ್ಸಿನೊಳಗೇ ವಂದಿಸಿದೆ. ನಮ್ಮ ನಾಡು ಎಷ್ಟು ವಿಚಿತ್ರ! ಇದರಲ್ಲಿ ಎಂಥೆಂಥ ಅಲೌಕಿಕ ದುರ್ಲಭ ನರರತ್ನರು ನವನಾಗರಿಕತೆಯ ಬೆಳಕಿನಿಂದ ಗಾವುದ ಗಾವುದ ದೂರದಲ್ಲಿ ಬಿದ್ದಿರುವರಲ್ಲ! ಎಂದುಕೊಂಡೆ. *



## ನಾಯಿಗಳಿಗೇ ಪ್ರತ್ಯೇಕ ಹೋಟೆಲ್!

ರೋಮ್ ನಗರದಲ್ಲಿ ನಡೆದ ಒಲಿಂಪಿಕ್ ಕ್ರೀಡಾಕೂಟಕ್ಕೆಂದು ಬಂದವರು ತಮ್ಮ ಜೊತೆ ಕರೆತಂದ ನಾಯಿಗಳಿಗೆ ವಸತಿ ಸೌಕರ್ಯ ಏರ್ಪಡಿಸಲಾಗಿತ್ತು.

ಇಟಲಿಯ ಪಶು ಸಂರಕ್ಷಣಾ ಸಂಸ್ಥೆಯು ನಗರ ಭಾಗದಿಂದ ಎಂಟು ಮೈಲಿ ದೂರದಲ್ಲಿ ನಿರ್ಮಿಸಿರುವ ಈ ನಾಯಿಗಳ ಹೋಟೆಲ್‌ನಲ್ಲಿ ತಣ್ಣನೆ ಹಾಗೂ ಬಿಸಿ ನೀರಿನ ವ್ಯವಸ್ಥೆ ಇದೆ. ರೋಂ ಕ್ರಿಡಾಕೂಟ ಮುಗಿದ ಮೇಲೆ ಈ ನಾಯಿಗಳಿಗಾಗಿ ನಿರ್ಮಿಸಿದ ಹೋಟೆಲನ್ನು ಇಟಲಿಯ ರಾಜಧಾನಿಯ ಬಿಡಾಡಿ ನಾಯಿಗಳಿಗಾಗಿ ಉಪಯೋಗಿಸಲಾಗುತ್ತಿದೆ.

— ಇಂದಿರಾಪ್ರಿಯ

# 'ಅವರನ್ನು ಮೆಚ್ಚಿಸುವುದು ಸುಲಭವಲ್ಲ...'

'ಅವರನ್ನು ಮೆಚ್ಚಿಸುವುದು ಸುಲಭವೆಂದು ನೀವು ತಿಳಿದಿದ್ದರೆ ಅದು ತಪ್ಪು ಗ್ರಹಿಕೆ' ಎಂದು ಶ್ರೀಮತಿ ಆರ್. ಆರ್. ಪ್ರಭು, ಹೇಳುತ್ತಾರೆ. 'ಬಟ್ಟೆಗಳ ವಿಷಯ ಹೇಳುವುದಾದರೆ... ಈಗ ನಾನು ಅವರ ಎಲ್ಲಾ ಬಟ್ಟೆಗಳನ್ನು ಸನ್‌ಲೈಟ್‌ನಿಂದಲೇ ಒಗೆಯುತ್ತೇನೆ—ಅದರಿಂದ ಅವರಿಗೆ ತೃಪ್ತಿಯಾಗುತ್ತದೆ. ನನಗೂ ತೃಪ್ತಿಯೆ. ಸನ್‌ಲೈಟ್‌ನಿಂದ ಹೇರಳ ನೊರೆಯಾಗುತ್ತದೆ, ನನ್ನ ಕೆಲಸವೂ ಬಹಳ ಸುಲಭವಾಗುತ್ತದೆ! ಬಟ್ಟೆಗಳೆಲ್ಲ ಅತ್ಯಂತ ಬೆಳ್ಳಗೆ ಮತ್ತು ಪ್ರಕಾಶಮಾನವಾಗುತ್ತವೆ. ನನಗೆ ಯಾವಾಗಲೂ ಸನ್‌ಲೈಟೇ ಬೇಕು!'

ಬಟ್ಟೆಗಳ ರಕ್ಷಣೆಗೆ ಶುದ್ಧ ಹಾಗೂ ಸೌಮ್ಯವಾದ ಸನ್‌ಲೈಟ್ ಸೋಪು ಅತ್ಯುತ್ತಮವಾಗಿದೆಯೆಂದೂ, ಅದರಂಥಾದ್ದು ಬೇರೆ ಇಲ್ಲವೆಂದೂ ಗೃಹಿಣಿಯರಿಗೆ ತಿಳಿದಿದೆ. ನಿಮಗೂ ಗೊತ್ತಾಗುವುದು.

# ಸನ್‌ಲೈಟ್




*ನಿಮ್ಮ ಬಟ್ಟೆಗಳಿಗೆ ಅತ್ಯಂತ ಹಿತಕರ!*

S. 30-X29 KN

ಹಿಂದುಸ್ತಾನ್ ಲೀವರ್ ಅವರ ತಯಾರಿಕೆ

# ಬಲ್ಲವರ ಬೆಲ್ಲ ನುಡಿ

ಸಂಗ್ರಹ : ವಿ. ವಿ. ಶಡ್ಕೆ

ಪ್ರಪಂಚಕ್ಕೆ ದೇವರು ಹೇಗೆ ಬೇಕೋ ಹಾಗೆಯೇ ದೇವರಿಗೂ ಪ್ರಪಂಚ ಬೇಕೇ ಬೇಕು.

— ಎಸ್. ರಾಧಾಕೃಷ್ಣನ್

ಯಾರು ಅಪ್ಪಣೆಯನ್ನು ಪಾಲಿಸುತ್ತಾರೋ ಅವರಿಗೆ ಮಾತ್ರ ಅಪ್ಪಣೆಕೊಡುವ ಅಧಿಕಾರವಿದೆ.

— ಎಮರ್‌ಸನ್

ಎಲ್ಲ ಬಗೆಯ ಅಧಿಕಾರವೂ ಮನುಷ್ಯನನ್ನು ಕೆಡಿಸುತ್ತದೆ. ಮಿತಿ ಇಲ್ಲದ ಅಧಿಕಾರ ಮಿತಿ ಇಲ್ಲದೆ ಕೆಡಿಸುತ್ತದೆ.

— ಲಾರ್ಡ್ ಆಕ್ಟನ್

ಮನುಷ್ಯರು ಅನ್ಯಾಯವನ್ನು ಒಪ್ಪದಿರುವುದು ತಾವು ಅದರ ಬಲಿಗೆ ಬಿದ್ದೇವೆಂಬ ಭಯದಿಂದಲೇ ಹೊರತು ನ್ಯಾಯಪ್ರಿಯತೆಯಿಂದಲ್ಲ.

— ಪ್ಲೇಟೋ

ಜನಾಂಗದ ಅಭ್ಯುದಯಕ್ಕೆ ಮೂರು ಮುಖ. ಜ್ಞಾನದ ಜಾಗೃತಿ, ಆತ್ಮದ ಸಂಸ್ಕೃತಿ ಹಾಗೂ ರಾಜ್ಯದ ಪ್ರಗತಿ.

— ಗೌರೀಶ ಕಾಯ್ಕಿಣಿ

ಕೆಟ್ಟದ್ದನ್ನು ಮಾಡಲು ದಿನಕ್ಕೆ ನೂರು ಅವಕಾಶ ಸಿಕ್ಕುತ್ತದೆ. ಒಳ್ಳೆಯದನ್ನು ಮಾಡಲು ವರುಷಕ್ಕೊಮ್ಮೆ ಮಾತ್ರ ಅವಕಾಶ ಸಿಕ್ಕುತ್ತದೆ.

— ವಾಲ್ಟೇರ್

ಗುಣವಿಲ್ಲದವನು ಗುಣವಂತನಿಗೆ ಸಲ್ಲಿಸುವ ವಿಕಾರರೂಪದ ಗೌರವವೇ ಅಸೂಯೆ.

— ಡಿ. ಪುಸಿಯಕ್ಸ್

ಉಪವಾಸವು ಮನುಷ್ಯನನ್ನು ಶಾಂತನನ್ನಾಗಿಯೂ ಶುದ್ಧನನ್ನಾಗಿಯೂ ಮಾಡುತ್ತದೆ.

— ಗಾಂಧೀಜಿ

ಪ್ರಪಂಚಕ್ಕೆ ಬರುವಾಗ ಬರಿಗೈಯಲ್ಲಿ ಬಂದೆ. ಹೋಗುವಾಗ ಪಾಪದ ಮೂಟೆಯನ್ನೆ ಹೊತ್ತುಕೊಂಡು ಹೋಗುತ್ತಿದ್ದೇನೆ.

— ಔರಂಗಜೇಬ

ಈ ಪದಚ್ಯುತ ರಾಜ ಒಕ್ಕಲುತನದಿಂದ ಜೀವಿಸುತ್ತಿದ್ದಾನೆ

# ರುಮಾನಿಯಾದ ದುರ್ದೈವಿ ರಾಜ

ಗಂಗಾಧರ

ಈ ಶತಮಾನದ ಎರಡು ಮಹಾಯುದ್ಧಗಳ ಫಲವಾಗಿ ಕಿರೀಟವನ್ನು ಕಳೆದುಕೊಂಡ ಯುರೋಪಿನ ಆರೇಳು ರಾಜರು ದೇಶಾಂತರ ವಾಸ ಮಾಡುತ್ತಿದ್ದಾರೆ. ಯಾವುದಾದರೊಂದು ರಾಜಕೀಯ ಚಮತ್ಕಾರದಿಂದ ತಮ್ಮ ಸಿಂಹಾಸನಗಳು ತಿರುಗಿ ದೊರೆತಾವೆಂಬ ಕನಸನ್ನವರು ಕಾಣುತ್ತ, ತಾವು ದೂರಾಲೋಚನೆಯಿಂದ ವಿದೇಶಗಳಲ್ಲಿ ಬಚ್ಚಿಟ್ಟಿದ್ದ ಧನಬಲದಿಂದ ಭೋಗ ಜೀವನವನ್ನು ನಡೆಸುತ್ತಿದ್ದಾರೆ. ಆದರೆ ರುಮಾನಿಯಾದ ಪದಚ್ಯುತ ರಾಜ ಮೈಕೆಲನ ಜೀವನವೊಂದು ಇದಕ್ಕೆ ಹೊರತಾಗಿದೆ. ಆತ ರಾಜಕುಮಾರಿಯೊಬ್ಬಳ ಕೈಹಿಡಿದಿದ್ದರೂ ಬಡತನದಿಂದ ಸಾಮಾನ್ಯ ರೈತನ ಜೀವನ ನಡೆಸುತ್ತಿದ್ದಾನೆ. ಮೈಕೆಲ್ ಎರಡು ಸಾರೆ ಪಟ್ಟಕ್ಕೇರಿ ಎರಡು ಸಾರೆ ಅದರಿಂದ ಇಳಿಸಲ್ಪಟ್ಟ ಅಪರೂಪ ರಾಜನಾಗಿದ್ದಾನೆ.




ರುಮಾನಿಯಾದ ಅರಸು ಮನೆತನ ಪ್ರಾಚೀನವಾದುದೇನಲ್ಲ. ತುರ್ಕಿಯ ಅರಸರ ದಾಳಿಯನ್ನೆದುರಿಸಲು ರುಮಾನಿಯಾದ ರಾಜಕಾರಣಿಗಳು ಜರ್ಮನಿಯ ಹೋಹೆನ್‌ಝೋಲನ್ ಮನೆತನದ ರಾಜಕುಮಾರ ಕೆರೋಲ್‌ನನ್ನು ಕರೆತಂದು ೧೮೬೧ರಲ್ಲಿ ಪಟ್ಟಕ್ಕೇರಿಸಿದಾಗಲೆ ಆ ಮನೆತನ ಪ್ರಾರಂಭವಾದದ್ದು. ನಾಲ್ಕೇ ತಲೆಮಾರು ಆಳಿದ ಈ ಮನೆತನ ಅರಮನೆಯ ಒಳಸಂಚು, ನೀತಿಬಾಹಿರತೆ, ವ್ಯಭಿಚಾರಗಳಿಂದ ಇಡೀ ಯುರೋಪಿನಲ್ಲಿ ಅತ್ಯಂತ "ಜನಜನಿತ" ಮನೆತನವೆನಿಸಿತ್ತು.

ಮೈಕೆಲನ ತಂದೆ ಎರಡನೇ ಕೆರೋಲ್ ಯುರೋಪಿನ ಕಾಮದೇವನಾಗಿದ್ದ. ಅವನ ತಾಯಿ—ಇಂಗ್ಲಿಷ್ ರಾಜಕುವರಿ—ಮೇರಿ ನೀತಿ ಭ್ರಷ್ಟಳಾಗಿದ್ದರೂ ಗಟ್ಟಿ ಮನಸಿನ ರಾಣಿಯಾಗಿದ್ದಳು. ಕೆರೋಲ್ ಅವಳ ಪ್ರೀತಿಯ ಪುತ್ರ. ರೂಪವಂತನಾಗಿದ್ದ ಆತ ಯುರೋಪಿನ ಬಹು ವಿವಾಹಿತ ರಾಜಕುಮಾರನೆನಿಸಿ ಲಂಪಟತನದಲ್ಲಿ ನಿಸ್ಸೀಮನಾಗಿದ್ದ. ಯುವರಾಜನಾಗಿದ್ದಾಗ ಕೆರೋಲ್ ತನ್ನ ತಾಯಿ ತನಗಾಗಿ ಯುರೋಪಿನ ರಾಜಮನೆತನಗಳಲ್ಲಿ ಹೆಣ್ಣು ಹುಡುಕುತ್ತಿದ್ದಾಗ ಅವಳ ಕಣ್ಣು ತಪ್ಪಿಸಿ ಜಿಝಿ ಲಾಂಬ್ರಿನೋ ಎಂಬ ಸಾಮಾನ್ಯ ನಾಗರಿಕ ಹುಡುಗಿಯನ್ನು ಮದುವೆಯಾಗಿ ಒಬ್ಬ ಮಗನನ್ನೂ ಹಡೆದಿದ್ದ. ಈ ಮದು

ವೆಯಿಂದ ರುಮಾನಿಯದ ಅರಸು ಪರಿವಾರದಲ್ಲಿ ಕೋಲಾಹಲವೆದ್ದುದರಿಂದ ಕೆರೋಲ್ ವಿವಾಹ ವಿಚ್ಛೇದನ ಮಾಡಿಕೊಳ್ಳಬೇಕಾಯಿತು. ತಾಯಿ ಮೇರಿ ಗ್ರೀಸಿನ ರಾಜಕುಮಾರಿ ಹೆಲೆನ್‌ಳೊಂದಿಗೆ ಮಗನ ಲಗ್ನ ಮಾಡಿದಳು. ಆದರೆ ಹೆಲೆನ್ ಗರ್ಭವತಿಯಾದ ನಂತರ ಕೆರೋಲ್ ಅವಳನ್ನು ಮರೆತೇಬಿಟ್ಟ.

ಆ ಮೇಲೆ ಆತ ಎಲೀನಾ ಲುಪೆಸ್ಕು ಎಂಬ ಯಹೂದಿ ರಮಣಿಯಲ್ಲಿ ಮೋಹಿತನಾದ. ಇವಳೊಡನೆ ತನ್ನ ಇಡೀ ಜೀವನವನ್ನು ಕಳೆದ. ಯುರೋಪಿನ ಪತ್ರಿಕೆಯೊಂದು ಲುಪೆಸ್ಕು ಎಂದು ಬರೆಯುವ ಬದಲು ತಪ್ಪಾಗಿ ಮಗ್ದಾ ಎಂದು ಇವಳ ಹೆಸರನ್ನು ಬರೆದುದರಿಂದ ಇವಳಿಗೆ ಮುಂದೆ ಅದೇ ಹೆಸರು ಬಿದ್ದುಹೋಯಿತು. ಈ ಪ್ರಸಂಗ ಮುಂದೆ ರುಮಾನಿಯದ ಯಹೂದಿಗಳ ಸರ್ವನಾಶಕ್ಕೆ ಕಾರಣವಾಯಿತು.

ಸಿನಾಯಿಯಾ ಅರಮನೆಯಲ್ಲಿ ತಂದೆ ತಾಯಿಗಳೊಡನೆ ಒಮ್ಮೆ ಜೋರಾಗಿ ಜಗಳವಾಡಿ, ಸಿಂಹಾಸನದ ಮೇಲಿನ ಹಕ್ಕನ್ನು ತ್ಯಜಿಸಿ ಲಂಚವೆಂದು ೨೨,೫೦,೦೦೦ ರೂಪಾಯಿಗಳನ್ನು ಪಡೆದು ಕೆರೋಲ್ ಪ್ಯಾರಿಸ್ಸಿಗೆ ತೆರಳಿ ಅಲ್ಲಿ ಮಗ್ದಾಳೊಡನೆ ಬಾಳ್ವೆ ಮಾಡತೊಡಗಿದ.

ಇಷ್ಟರಲ್ಲಿ ಅವನ ಹೆಂಡತಿ ಹೆಲೆನ್‌ಳಿಗೆ ಗಂಡು ಮಗುವೊಂದು ಜನಿಸಿತ್ತು. ಮಗುವಿಗೆ ಮೈಕೆಲ್ ಎಂದು ಹೆಸರನ್ನಿಟ್ಟರು.

ನಾಚಿಕೆ - ಅವಮಾನಗಳಿಂದ ತ್ರಸ್ತವಾಗಿದ್ದ ಕುಟುಂಬದಲ್ಲಿ ಮೈಕೆಲ್ ಹುಟ್ಟಿದ್ದ. ಅವನ ತಂದೆಯ ಹೆಸರನ್ನು ಮನೆಯಲೊಬ್ಬರೂ ಉಚ್ಚರಿಸುತ್ತಿರಲಿಲ್ಲ. ೧೯೨೭, ಜುಲೈ ೨೦ ರಂದು ಕೆರೋಲ್‌ನ ತಂದೆ ಫರ್ಡಿನೆಂಡ್ ಸತ್ತಾಗ ದೇಶಾಂತರವಾಸಿ ಕೆರೋಲ್‌ನ ಬದಲು ಬಾಲಕ ಮೈಕೆಲ್ ಪಟ್ಟಕ್ಕೇರಿಸಲ್ಪಟ್ಟ.

ಪ್ಯಾರಿಸ್‌ನಲ್ಲಿದ್ದ ಕೆರೋಲ್ ಇದರಿಂದ ಉದ್ರಿಕ್ತನಾದ. ರುಮಾನಿಯಾದಲ್ಲಿ ಪರಿಸ್ಥಿತಿ ಅವನಿಗೆ ಅನುಕೂಲವಾಗಿತ್ತು. ರುಮಾನಿಯದ ರಾಜಕಾರಣವು ಹದಗೆಡುವುದನ್ನು ತಪ್ಪಿಸಲು ಇನ್ನೂ ಮಗುವಾಗಿದ್ದ ಒಬ್ಬ ರಾಜ ಮತ್ತು ಅವನ ಗ್ರೀಕ್ ತಾಯಿ ಸಮರ್ಥರಾಗರು ಎಂದು ಜನ ಹೆಚ್ಚೆಚ್ಚಾಗಿ ಆಡಿಕೊಳ್ಳತೊಡಗಿದರು. ೧೯೩೦ ರಲ್ಲಿ ಪ್ರಧಾನ ಮಂತ್ರಿ, ಜ್ಯೂಲಿಯಸ್ ಮಾನಿಯು ದೇಶದ ಸಕಲ ಪಕ್ಷಗಳ ಬೆಂಬಲದಿಂದ ಕೆರೋಲ್‌ನನ್ನು ತಿರುಗಿ ಕರೆಸುವ ನಿರ್ಧಾರ ಮಾಡಿದ. ಲುಪೆಸ್ಕುವನ್ನು ಸಂಗಡ ಕರತರಬಾರದು ಎಂಬ ಒಂದೇ ಒಂದು ಕರಾರು ಹಾಕಲ್ಪಟ್ಟಿತ್ತು. ಕೆರೋಲ್ ಒಪ್ಪಿದ. ಲುಪೆಸ್ಕು ಕೆರೋಲ್‌ನನ್ನು ಬಿಟ್ಟುಕೊಡಲು ಸಮ್ಮತಿಸಿದಳು. ಅವಳು ಪ್ಯಾರಿಸ್ಸಿನ ಪತ್ರಿಕಾಕರ್ತರೆದುರು "ನಾನೊಬ್ಬ ಪರಿತ್ಯಕ್ತೆಯೆಂದು ನನ್ನ ಶತ್ರುಗಳು ಹೇಳುತ್ತಾರೆ. ಆದರೆ ನಾನಾಗಿಯೆ ಇದಕ್ಕೆ ಒಪ್ಪಿಕೊಂಡಿದ್ದೇನೆ ಈಗಲಾದರೂ ನನ್ನ ಶತ್ರುಗಳು ನನ್ನ ತ್ಯಾಗದ ಬೆಲೆ ಕಟ್ಟುವರೆಂದು ತಿಳಿದಿದ್ದೇನೆ" ಎಂದು ಹೇಳಿದಳು.

ಈ ಸಮಯದಲ್ಲಿ ಬಾಲರಾಜ ಮೈಕೆಲನ ವಿಚಾರವನ್ನಾರೂ ಮಾಡಲಿಲ್ಲ. ಆತ ದುಃಖ ಜರ್ಜರಳಾದ ತನ್ನ ತಾಯಿಯ ಹತ್ತಿರ "ನಾನು ಅರಸನಾಗಿರುವಾಗ ಅಪ್ಪ ಹೇಗೆ ಅರಸನಾಗಬಲ್ಲ?" ಎಂದು ಕೇಳಿದ. ಹೀಗೆ ಮೈಕೆಲನ ರಾಜ್ಯಭಾರದ ಪ್ರಥಮ ಅಂಕ ಮುಗಿದು ಅವನ ತಂದೆ ಎರಡನೆಯ ಕೆರೋಲ್‌ನ ಆಳಿಕೆ ಆರಂಭವಾಯಿತು.

ಕೆರೋಲ್ ಬಂದೊಡನೆಯೆ ಮಗ ಮೈಕೆಲನನ್ನು "ಆರೋಗ್ಯ ಸಾಧನೆಗಾಗಿ" ಬೇರೆಡೆಗೆ ಕಳಿಸಿಬಿಟ್ಟ. ಮೂರು ವಾರಗಳ ನಂತರ ಆತ ಪ್ರಧಾನಿ ಮಾನಿಯುನನ್ನು ಕರೆಸಿಕೊಂಡ. ಕಣ್ಣಲ್ಲಿ ನೀರು ತುಂಬಿಕೊಂಡು "ನಾನು ಇಲೀನಾ ಲುಪೆಸ್ಕುಳನ್ನು ಬಿಟ್ಟು ಬದುಕಿರಲಾರೆ" ಎಂದ. ಅಳುತ್ತಳುತ್ತಲೇ ಲುಪೆಸ್ಕು ರುಮಾನಿಯಕ್ಕೆ ಬಂದಿದ್ದಾಳೆಂದು ತಿಳಿಸಿದ. ಬುದ್ಧಿವಂತನಾದರೂ ತಾನು ಮೋಸಹೋದೆ ಎಂದು ಮಾನಿಯುಗೆ ತಿಳಿಯಿತು.

ಅಶಾಂತ ಪರಿಸ್ಥಿತಿ ತಲೆದೋರಿತು. ಲುಪೆಸ್ಕು ಪ್ರಭಾವ ಆಡಳಿತದಲ್ಲಿ ಕಾಣಿಸಿತು. "ಅಯರ್ನ್ ಗಾರ್ಡ್" ಎಂಬ ಹಸಿರು ಅಂಗಿ ಸಂಸ್ಥೆಯೊಂದು ಜನ್ಮವೆತ್ತಿ ನಾಝಿಗಳ ಅನುಕರಣಮಾಡುತ್ತ ಯಹೂದ್ಯರನ್ನು ಬೇಟೆಯಾಡತೊಡಗಿತು.

೧೯೩೮ ರಲ್ಲಿ ನಿರಾಶಳಾಗಿ ಅಪಯಶಸ್ವಿಯಾಗಿ ರಾಣಿ ಮೇರಿ ಸತ್ತಳು. ಅದೇ ವರ್ಷ ನಡೆದ ಚುನಾವಣೆಗಳಿಂದ ಅಸಮಾಧಾನಗೊಂಡ

# ಮೊದಲ ಹೆಜ್ಜೆ

ಒಂದು ಸೇವಿಂಗ್ಸ್ ಬ್ಯಾಂಕ್ ಖಾತೆಯನ್ನು ತೆರೆಯಲು ನೀವಿಡುವ ಮೊದಲ ಹೆಜ್ಜೆ-ನಿಮ್ಮ ಪ್ರಥಮ ಪ್ರಯತ್ನ ಅತ್ಯಂತ ಪ್ರಾಮುಖ್ಯವಾದುದು. ಯಾಕಂದರೆ ಅದು ನಿಮಗೆ ಆರ್ಥಿಕ ಸುಸ್ಥಿರತೆ, ಸಾಮಾಜಿಕ ಯಶಸ್ಸುಗಳಿಗೆ ಹೊಸ ಅವಕಾಶವನ್ನು ಒದಗಿಸಿಕೊಟ್ಟು ಭವಿಷ್ಯತ್ತಿನ ಸುಖದತ್ತ ನಿಮ್ಮನ್ನು ಮುನ್ನಡೆಸುವುದು.



ಒಂದು ಸೇವಿಂಗ್ಸ್ ಬ್ಯಾಂಕ್ ಖಾತೆಯನ್ನು ತೆಗೆಯಿರಿ

# ಸಿಂಡಿಕೇಟ್ ಬ್ಯಾಂಕ್

ದಿ ಕೆನರಾ ಇಂಡಸ್ಟ್ರಿಯಲ್ & ಬ್ಯಾಂಕಿಂಗ್ ಸಿಂಡಿಕೇಟ್ ಲಿಮಿಟೆಡ್

ರಿಜಿಸ್ಟರ್ಡ ಆಫೀಸ್: ಮುಕುಂದ ನಿವಾಸ, ಉಡುಪಿ, (ಮೈಸೂರು ರಾಜ್ಯ)

ಸ್ಥಾಪನೆ: ೧೯೨೫.

ಕೆರೋಲ್ ಅವು ಕ್ರಮಬದ್ಧವಲ್ಲ ಎಂದು ಸಾರಿ ಮೌಖಿಕ ಸಾರ್ವಜನಿಕಾಭಿಪ್ರಾಯವೊಂದನ್ನು ಅವಸರವಸರವಾಗಿ ಕಲೆ ಹಾಕಿ ಆ ಮೂಲಕ ತನಗೆ ಸರ್ವ ಸ್ವಾತಂತ್ರ್ಯವನ್ನೂ ಪಡೆದುಕೊಂಡು ಯುರೋಪಿನಲ್ಲೆಲ್ಲ ಒಬ್ಬನೇ ಒಬ್ಬ ಸರ್ವಾಧಿಕಾರಿಯಾದ ಅರಸನಾದ. ಯುರೋಪಿನ ಪ್ರಬಲ ರಾಷ್ಟ್ರಗಳನ್ನು ಕುಣಿಸಲೆಂದು ಅನೇಕಾನೇಕ ನಿರುಪಯುಕ್ತ ಒಪ್ಪಂದಗಳನ್ನು ಮಾಡಿಕೊಂಡ.

ಎರಡನೇ ಮಹಾಯುದ್ಧ ಆರಂಭವಾಗಿ ಫ್ರಾನ್ಸಿನ ಪತನಾನಂತರ ಸಮೃದ್ಧ ಎಣ್ಣೆಯ ದೇಶವಾದ ರುಮಾನಿಯದಲ್ಲಿ ಕೆರೋಲ್‌ನಂಥ ಅರಸನಿರುವುದು ಅಸಾಧ್ಯವಾದಂತಾಯಿತು. ಜರ್ಮನಿಯ ಆಘಾತಕ್ಕೆ ರುಮಾನಿಯ ಕುಸಿಯಿತು. "ಅಯರ್ನ್ ಗಾರ್ಡ್" ಜನರು ಅರಮನೆಯನ್ನು ಮುತ್ತಿ "ನಮಗೆ ಅರಸನನ್ನು ಒಪ್ಪಿಸಿ. ಆ ಹೆಣ್ಣು ತೋಳ ಲುಪೆಸ್ಕುವನ್ನು ಒಪ್ಪಿಸಿ" ಎಂದು ಕೂಗಿದರು. ಕೆರೋಲ್ ಧೃತಿಗೆಟ್ಟು ಜರ್ಮನಿಯಲ್ಲಿ ತನಗೆ ಆಶ್ರಯವೀಯಲು ಹಿಟ್ಲರನಿಗೆ ಬಿನ್ನವಿಸಿಕೊಂಡ. "ಒಳ್ಳೇದು. ನೀನು ಬರಬಹುದು. ಆದರೆ ನಿನ್ನ ಆ ಹೆಂಗಸಿಗೆ ಆಶ್ರಯ ಸಿಗಲಾರದು" ಎಂದ ಹಿಟ್ಲರ್.

ಹಿಟ್ಲರ್‌ಪಕ್ಷಪಾತಿ ಸೈನಿಕ ಕೂಟದ ಪ್ರಮುಖನಾದ ಮಾರ್ಶಲ್ ಆಯೋನ್ ಅಂಟೊನೆಸ್ಕು ಅರಮನೆಗೆ ಬಂದು ಕೆರೋಲ್ ಸಿಂಹಾಸನತ್ಯಾಗ ಮಾಡಬೇಕೆಂದು ಕೇಳಿದ. ಕೆರೋಲ್ ದೀನನಂತೆ ಅವನೊಡನೆ ತನಗೆ ಸಿಗಬಹುದಾದ ಸೌಲಭ್ಯಗಳ ವಿಚಾರದಲ್ಲಿ ಚವಕಸಿ ನಡೆಸಿದ್ದಾಗ ನೆರೆಯ ಕೋಣೆಯಲ್ಲಿದ್ದ ೧೯ ವರ್ಷದ ಮೈಕೆಲ್ ದಿಗ್ಭ್ರಾಂತನಾಗಿ ಅತ್ತುಬಿಟ್ಟ.

ಈ ನಡುವೆ ಕೆರೋಲನಿಗೆ ಆಶ್ರಯವೀಯಲು ಸ್ವಿಜರ್ಲಂಡ್ ಒಪ್ಪಿ ವಾಹನ ಸೌಕರ್ಯವನ್ನೂ ಒದಗಿಸಿತು. ಪ್ರೇಯಸಿ ಲುಪೆಸ್ಕು, ಮಿಲಿಟರಿ ಏಡ್-ಡಿ-ಕ್ಯಾಂಪರು, ಸೇವಕರು, ಐದು ನಾಯಿಗಳು, ಮೋಟರ್ ಕಾರುಗಳು, ಟ್ರಂಕುಗಳು ಸಹಿತ ಕೆರೋಲನ ಪಲಾಯನ ಪ್ರಾರಂಭವಾಯಿತು. ಟಿಮಿಸೋರಾದಲ್ಲಿ "ಅಯರ್ನ್ ಗಾರ್ಡಿನ" ಜನ ಕಾಯುತ್ತಿದ್ದಾರೆಂದೂ ಅಲ್ಲಿ ಅವರು ಲುಪೆಸ್ಕುವನ್ನು ಗುಂಡಿಕ್ಕಿ ಕೊಲ್ಲುವರೆಂದೂ ಹಾದಿಯಲ್ಲಿ ಸಮಾಚಾರ ಸಿಕ್ಕಿತು. ಲುಪೆಸ್ಕು ಸ್ನಾನದ ಡಬ್ಬಿಯಲ್ಲಿ ಅಡಗಿದಳು. ಟಿಮಿಸೋರಾದಲ್ಲಿ ನೀರು ತುಂಬಿಕೊಳ್ಳಬೇಕಾಗಿದ್ದ ಗಾಡಿ ಅಲ್ಲಿ ನಿಲ್ಲದೆ ವೇಗದಿಂದ ಮುಂದೋಡಿತು. ಅಲ್ಲಿದ್ದ "ಅಯರ್ನ್ ಗಾರ್ಡ"ನವರು ಪೆಚ್ಚಾದರು. ಹೀಗೆ ರುಮಾನಿಯಾದ ಅರಸು ಎರಡನೆಯ ಕೆರೋಲ್ ರುಮಾನಿಯವನ್ನು ತನ್ನ ಉಪಪತ್ನಿಯೊಂದಿಗೆ ಸ್ನಾನದ ಡಬ್ಬಿಯಲ್ಲಿ ಅಡಗಿಕೊಂಡು ಕೊನೆಯ ಬಾರಿ ಬಿಟ್ಟುಹೋದ.

ಮೈಕೆಲ್ ಮತ್ತೆ ಪಟ್ಟವೇರಿದ, ಆದರೆ ತೀರ ದುರವಸ್ಥೆಯಲ್ಲಿ. ಈ ಹುಡುಗ ರಾಜನನ್ನು ಹತ್ತಿಕ್ಕಿಡಲು ಅಂಟೊನೆಸ್ಕು ತತ್ಪರನಾಗಿದ್ದ. ಇನ್ನೂ ಆತ್ಮವಿಶ್ವಾಸವಿಲ್ಲದ ಮೈಕೆಲ್ ಅವನ ಬಹಿರಂಗ ತಿರಸ್ಕಾರ ತಾತ್ಸಾರಗಳನ್ನು ಸಹಿಸಿಕೊಳ್ಳುತ್ತಿದ್ದ. ಮೈಕೆಲ್ ಏನಾದರೂ ಮರುಮಾತಾಡಿದರೆ "ನೀನಿನ್ನೂ ಮಗು, ನಿನಗೇನು ತಿಳಿಯುವುದು?" ಎಂದು ಅಂಟೊನೆಸ್ಕು ಹೇಳುತ್ತಿದ್ದನಲ್ಲದೆ ಹೆಚ್ಚು ಗದ್ದಲ ಮಾಡಿದರೆ ನಿನ್ನನ್ನು ಪದಚ್ಯುತಗೊಳಿಸಿ ನಿನ್ನ ಅತ್ತೆಯ ಕುಟುಂಬದವರನ್ನು ಪಟ್ಟಕ್ಕೇರಿಸುತ್ತೇನೆ ಎಂದು ಹೆದರಿಸುತ್ತಿದ್ದ.

ಮೈಕೆಲನ ಅತ್ತೆ ರಾಜಕುಮಾರಿ ಇಲೀನಾ ಪರಮ ಸುಂದರಿಯಾಗಿದ್ದಳು. ಆಸ್ಟ್ರಿಯದ ಆರ್ಚ್‌ಡ್ಯೂಕ್ ಎಂಟನ್‌ನನ್ನು ಲಗ್ನವಾದ ಅವಳಿಗೆ ಇಬ್ಬರು ಗಂಡು ಮಕ್ಕಳು, ನಾಲ್ವರು ಹುಡುಗಿಯರಿದ್ದರು. ಅವಳು ಅಂಟೊನೆಸ್ಕುನ ಆಶ್ರಿತಳಾಗಿದ್ದಳು. ಅಂಟೊನೆಸ್ಕು ಅವಳಿಗೂ ಮೈಕೆಲನಿಗೂ ಹುಟ್ಟಿಸಿದ ಮನಸ್ತಾಪ ಇಂದಿಗೂ ಜೀವಂತವಾಗಿದೆ. ಈಗ ಅಮೇರಿಕದಲ್ಲಿರುವ ಇಲೀನಾ ಮತ್ತು ಸ್ವಿಝರ್ಲಂಡಿನಲ್ಲಿರುವ ಮೈಕೆಲನಲ್ಲಿ ಪತ್ರವ್ಯವಹಾರ ಕೂಡ ನಡೆಯುತ್ತಿಲ್ಲ.

ಮೈಕೆಲ್ ಆರು ಅಡಿ ಮೂರಂಗುಲ ಎತ್ತರದ ಆಜಾನುಬಾಹು. ಅವನಿಗೆ ಮೋಟಾರ್ ಕಾರು ಮತ್ತು ಯಂತ್ರಗಳಲ್ಲಿ ವಿಶೇಷ ಅಭಿರುಚಿ ಇತ್ತು. ಕೆಲಕಾಲ ಆತ ಫೋರ್ಡ್ ಮೋಟಾರ್ ಕಾರ ಖಾನೆಯೊಂದರಲ್ಲಿ ಕೆಲಸ ಮಾಡಿದ್ದ. ಮೈಕೆಲ್ ನಗುವುದು ಅಪರೂಪವಾಗಿತ್ತು. ಆದರೆ ಆತ

ಬುದ್ಧಿವಂತನೂ ನಿಶ್ಚಯ ಸ್ವಭಾವದವನೂ ಆಗಿದ್ದ.

ಮೈಕೆಲ್ ಪಟ್ಟವೇರಿ ಒಂದು ವರ್ಷವಾದಾಗ ಅಂಟೊನೆಸ್ಕು ಜರ್ಮನಿಯನ್ನು ಕೂಡಿಕೊಂಡು ಅದರೊಂದಿಗೆ ರಶಿಯದ ಮೇಲೆ ಯುದ್ಧವನ್ನು ಸಾರಿದ. ರುಮಾನಿಯದ ಸೈನ್ಯ ರಶಿಯನ್ನರಿಂದ ಓಡೆಸಾವನ್ನು ಗೆದ್ದುಕೊಂಡಿತು.

ಆದರೆ ಮುಂದೆ ತಕ್ಕಡಿ ತಿರುಗಿತು. ರಶಿಯವು ಅಚ್ಚಿನ ರಾಷ್ಟ್ರಗಳ ಸೈನ್ಯವನ್ನು ಹಿಂದಕ್ಕೆ ದೂಡ ತೊಡಗಿತು. ಯುದ್ಧದಿಂದ ಹೊರಬಿದ್ದು ಅಮೇರಿಕ ಮತ್ತು ಬ್ರಿಟನ್ನುಗಳ ಮೊರೆ ಹೊಕ್ಕರೇನೇ ರಶಿಯನ್ನರಿಂದ ಉಳಿದುಕೊಳ್ಳಬಹುದು ಎಂದು ಮೈಕೆಲ್ ಮತ್ತು ಅವನ ಸಲಹೆಗಾರರು ಮನಗಂಡರು. ಆದರೆ ಅವರು ಮತ್ತು ಅವರ ಹಂಚಿಕೆಗೆ ಅಡ್ಡವಾಗಿ ಅಂಟೊನೆಸ್ಕು ಇದ್ದ.

ಈಗ ಜೀವನ—ಮರಣಗಳ, ಈಗ ಇಲ್ಲವೆ ಎಂದೂ ಇಲ್ಲ ಎಂಬ ಪರಿಸ್ಥಿತಿ ಇತ್ತು. ಮೈಕೆಲ್ ಮನಸ್ಸು ಗಟ್ಟಿಮಾಡಿದ. ಆತ ಸರ್ವಾಧಿಕಾರಿ ಅಂಟೊನೆಸ್ಕುನನ್ನು ಭೆಟ್ಟಿಗಾಗಿ ಕರೆದ. ಅಂಟೊನೆಸ್ಕು ಬರುವಾಗ ತಾಳ್ಮೆಗೆಟ್ಟೇ ಬಂದ. "ಅರಸರು ದೀರ್ಘಾಯುಗಳಾಗಲಿ" ಎಂಬ ಅವನ ಪ್ರಣಾಮ ಧಾರ್ಷ್ಟ್ಯದಿಂದಲೇ ಕೂಡಿತ್ತು. ಮೈಕೆಲ್ ತನ್ನ ಮೇಜಿನ ಕೆಳಗಿದ್ದ ಒಂದು ಸ್ವಿಚ್ಚನ್ನು ಒತ್ತಿದ. ಅವರ ಸಂಭಾಷಣೆಯ ರಿಕಾರ್ಡ್ ಅವನಿಗೆ ಬೇಕಾಗಿತ್ತು.

"ಈಗ ಅವಕಾಶವುಳಿದಿಲ್ಲ. ನಾನೆಷ್ಟು ಹೇಳಿದರೂ ಕೇಳದೆ ನೀನು ದೇಶವನ್ನು ಕಠಿನ ಪರಿಸ್ಥಿತಿಗೆ ನೂಕಿರುವಿ. ಯುದ್ಧವನ್ನು ನಿಲ್ಲಿಸಿ ಜರ್ಮನ್ನರನ್ನು ಹೊರಗೆ ಹಾಕದಿದ್ದರೆ ಉಳಿಗಾಲವಿಲ್ಲ" ಎಂದು ಮೈಕೆಲ್ ಹೇಳಿದ.

ಅಂಟೊನೆಸ್ಕು ತಿರಸ್ಕಾರದಿಂದ ನಕ್ಕು "ನೀನಿಲ್ಲಿಯೆ ತಪ್ಪುತ್ತೀ" ಎಂದವನೇ ಹೊರಟು ನಿಂತ. ಆದರೆ ತರುಣ ರಾಜನಲ್ಲಿ ರಾಜದರ್ಪ ಜಾಗ್ರತವಾದುದನ್ನು ಆತ ಕಾಣಬೇಕಾಯಿತು. "ನನ್ನೊಡನೆ ಮಾತಾಡುವಾಗ ವಿನಯದಿಂದ ಮಾತಾಡಲು ಕಲಿ. ನನಗೆ 'ನೀನು' ಎಂದು ಕರೆಯುವುದೆಂದರೇನು ?" ಮೈಕೆಲ್ ಗುಡುಗಿದ.

ಅಂಟೊನೆಸ್ಕು ಅಪ್ರತಿಭನಾಗಿ "ತಾವು-ತಾವು-ಮಹಾರಾಜರು ಇಂದು ಅಸ್ವಸ್ಥರಾಗಿರುವಂತೆ ಕಾಣುತ್ತದೆ," ಎಂದು ತಡವರಿಸುತ್ತ ಹೇಳಿದ.

"ಹೌದು. ಇಂದು ಬೆಳಿಗ್ಗೆ ನೀನು ನಾನೆಂದರೆ ಕಃಪದಾರ್ಥ ಎಂಬಂತೆ ನಡೆದುಕೊಂಡೆ" ಮೈಕೆಲ್ ಮೇಜನ್ನು ಗುದ್ದಿ ಹೇಳಿದ. "ನೀನು ಹೀಗೆಲ್ಲ ನನ್ನೊಡನೆ ಅಸಭ್ಯವಾಗಿ ವರ್ತಿಸಲಾಗದು. ನನ್ನ ಅಧಿಕಾರವನ್ನು ನೀನು ವಹಿಸಿಕೊಂಡು ದೇಶವನ್ನು ಹಾಳುಮಾಡುತ್ತಿರುವುದನ್ನು ನೋಡುತ್ತ ನಾನು ಸುಮ್ಮನಿರಲಾದೀತೆ ?"

"ಒಪ್ಪಂದದಿಂದ ದೇಶವನ್ನು ರಕ್ಷಿಸಬಹುದು ಎಂಬ ನಿಮ್ಮ ಕಲ್ಪನೆ ತಪ್ಪಾಗಿದೆ."

"ನಿನ್ನ ಅಭಿಪ್ರಾಯ ಅಥವಾ ಸಲಹೆ ಕೇಳಲು ನಾನು ನಿನ್ನನ್ನಿಲ್ಲಿ ಕರೆಸಿಲ್ಲ. ಯುದ್ಧ ನಿಲ್ಲಿಸಿರುವ ವಿಚಾರದಲ್ಲಿ ಸಂಯುಕ್ತರಾಷ್ಟ್ರ ಸಂಘಕ್ಕೆ ಈ ತಂತಿಯನ್ನು ಕಳಿಸಲು ನಿನಗೆ ಹೇಳುವುದಕ್ಕಾಗಿ ನಿನ್ನನ್ನು ಕರೆಸಿದ್ದೇನೆ."

ಮೈಕೆಲ್ ಕೊಟ್ಟ ಕಾಗದವನ್ನು ಅಂಟೊನೆಸ್ಕು ಓದಿ "ನಾನು ಜರ್ಮನರಿಗೆ ದ್ರೋಹ ಮಾಡಿ ಅವರನ್ನು ರಶಿಯನ್ನರ ಬಾಯಿಗೆ ಕೊಟ್ಟೆನೆಂದು ನೀವು ಹೇಗೆ ತಿಳಿದುಕೊಂಡಿರಿ ?" ಎಂದ.

ಮೈಕೆಲ್ ಪುನಃ ಅಬ್ಬರಿಸಿದ. "ಎಂಥ ದ್ರೋಹ ? ನೀನು ಜರ್ಮನಿಯ ಗಡಿಯ ಸಂರಕ್ಷಣೆಯ ಹೊಣೆಯನ್ನೇನಾದರೂ ಹೊತ್ತಿರುವಿಯಾ ?"

"ಯಾಕೆ ಕೂಗುತ್ತೀರಿ ? ನಾನು ಕಿವುಡನಲ್ಲ."

"ನೀನು ಕಿವುಡನೇ ಸರಿ. ಇಲ್ಲವಾದರೆ ದೇಶದ ಕೂಗು ನಿನ್ನ ಕಿವಿಗೆ ಬೀಳುತ್ತಿತ್ತು. ಇರಲಿ. ನೀನು ಈ ತಂತಿಯನ್ನು ಕಳಿಸುತ್ತೀಯೊ ಇಲ್ಲವೊ ?"

"ಆ ರೀತಿಯಲ್ಲಿ ತಂತಿ ಕಳಿಸಲಾರೆ."

"ಮತ್ತಾವ ರೀತಿಯಲ್ಲಿ ?"

"ಜರ್ಮನಿಯೊಡನೆ ಮೊದಲು ವಿಚಾರ ಮಾಡಿ..."

"ಏನು, ಇಲ್ಲಿ ವ್ಯಾಪಾರ ಮಾಡುತ್ತಿದ್ದೇನೆಯೆ ಅಂಟೊನೆಸ್ಕು ?"

"ಮಾರ್ಶಲ್ ಅಂಟೊನೆಸ್ಕು ಎನ್ನಿ."

ಕಳೆದ 55 ವರ್ಷಗಳಿಂದಲೂ ಜನಾದರಣೆಯನ್ನು ಕಾಯ್ದಿಟ್ಟುಕೊಂಡು,
ಏಳಿಗೆಯ ಪಥದಲ್ಲಿ-ದಿನದಿಂದ ದಿನಕ್ಕೆ ಮುನ್ನಡೆಯುತ್ತಿರುವ ದಕ್ಷಿಣ
ಕನ್ನಡದ, ಏಕೆ? ದಕ್ಷಿಣ ಭಾರತದ ಮೊದಲನೇ ಸಂಸ್ಥೆ....
ಮತ್ತದರ ಬೃಹತ್ ಉದ್ಯಮದ ಉತ್ಪಾದನೆಗಳು




*Manufacturers:* **P. V. S. BEEDIES PRIVATE LTD.**
Post Box No. 7, Kodiyalbail MANGALORE - 3
Telegrams: "PUTHUBIDIS" PHONE: 83, 83 A RESIDENCE: 593,

"ಇಲ್ಲ. ನಾನು ಈ ದೇಶದ ಅರಸ. ನನ್ನ ದೇಶದ ರಕ್ಷಣೆಯನ್ನು ನಾನು ಮಾಡಬೇಕು."

ಅಂಟೊನೆಸ್ಕು ಬೆಪ್ಪಾಗಿ "ನಿಮ್ಮ ಸಿಂಹಾಸನವನ್ನೇ ನೀವು ಕಳೆದುಕೊಳ್ಳಬೇಕಾದೀತೆಂಬ ಅರಿವು ನಿಮಗಿದೆಯೆ ?" ಎಂದ.

"ಏನು ನನಗೆ ಬೆದರಿಕೆ ಹಾಕುತ್ತೀಯಾ ? ಎರಡನೆಯವರಿಗೆ ಅಪ್ಪಣೆ ಮಾಡುವ ಅಧಿಕಾರ ಇನ್ನು ನಿನಗಿದೆಯೆಂದು ತಿಳಿದುಕೊಂಡಿರುವಿಯೇನು ? ಇನ್ನು ಮುಂದೆ ನಿರ್ಧಾರ, ಅಪ್ಪಣೆಗಳನ್ನು ಮಾಡುವವನು ನಾನು. ನೀನು ಈಗ ಬಂಧನದಲ್ಲಿರುವಿ" ಎಂದು ಗುಡುಗಿ ಮೈಕೆಲ್ ಒಂದು ಗುಂಡಿಯನ್ನು ಒತ್ತಿದ. ಅವನ ಅಂಗರಕ್ಷಕರು ಬಂದರು. ಅಂಟೊನೆಸ್ಕು "ನಾನು ದೇಶದ ಮಾರ್ಶಲ್, ಸರಿಯಾಳೇ ? ಇಲ್ಲ" ಎಂದು ಕೂಗಿದ. "ಅವನನ್ನೊಯ್ಯಿರಿ" ಎಂದ ಮೈಕೆಲ್. ಆಜ್ಞೆ ಮಾಡಿದೊಡನೆಯೆ ಅಂಗರಕ್ಷಕರು ಅಂಟೊನೆಸ್ಕುವನ್ನು ಬಂಧಿಸಿಕೊಂಡು ಹೋದರು.

ರುಮಾನಿಯ ಯುದ್ಧದಿಂದ ಹೊರಬಿದ್ದಿದೆ ಎಂದು ಜರ್ಮನಿಗೆ ತಿಳಿಸಲಾಯಿತು. ರಶಿಯನ್ನರು ಮುಂದುವರಿಯುತ್ತಲೇ ಇದ್ದರು. ದೇಶದಲ್ಲಿ ಅರಾಜಕತೆ ಹಬ್ಬಿತ್ತು. ಆದರೆ ಯುದ್ಧ ರುಮಾನಿಯದಿಂದ ಮುಂದೆ ಹೋಗಿ ಜರ್ಮನಿಯಲ್ಲಿ ಹಬ್ಬಿದಾಗ ಮೈಕೆಲನ ಜೀವನದಲ್ಲಿ ಅನೇಕಾನೇಕ ಘಟನೆಗಳು ಜರುಗತೊಡಗಿದವು. ರುಮಾನಿಯದಿಂದ ಓಡಿ ಹೋದವರು ಎಂದು ಹೇಳಿಕೊಳ್ಳುವ ಅನೇಕರು ಮಾಸ್ಕೊದಿಂದ ಬಂದರು. ಅವರು ದೇಶದ ಸೂತ್ರಗಳನ್ನು ಹಿಡಿದುಕೊಳ್ಳತೊಡಗಿದರು.

ಅವಾಕ್ಕಾದ ಮೈಕೆಲ್ ಸಂಪ್ರದಾಯದಂತೆ ಸರಕಾರ ರಚಿಸಲು ಪ್ರಯತ್ನಿಸಿದ. ಆದರೆ ರಶಿಯನ್ನರು ರುಮಾನಿಯದ ಭೂಮಾಲಿಕ ಕಮ್ಯುನಿಸ್ಟನಾದ ಪೆಟ್ರು ಗ್ರೋಝಾನನ್ನು ಅಧಿಕಾರಕ್ಕೇರಿಸುವಂತೆ ಒತ್ತಾಯ ತಂದರು.

ಯುದ್ಧ ಮುಗಿಯಿತು. ಆದರೆ ಶೀತಲ ಯುದ್ಧ ಆರಂಭವಾಯಿತು. ನ್ಯಾಶನಲ್ ಡೆಮೊಕ್ರಾಟಿಕ್ ಫ್ರಂಟ್ ಎಂಬ ಹೆಸರಿನ ಕಮ್ಯುನಿಸ್ಟ್ ಪಕ್ಷವೊಂದು ಅಧಿಕಾರಕ್ಕೆ ಬಂತು. ಮೈಕೆಲ್ ತಾನು ಎಂದೂ ಕಂಡು ಕೇಳರಿಯದಂಥ ರಾಜಕಾರಣಗಳೊಡನೆ ಗುದ್ದಾಡಬೇಕಾಯಿತು.

ಮೈಕೆಲನೊಬ್ಬನೇ ಕಮ್ಯುನಿಸ್ಟ್ ದೇಶಗಳಲ್ಲಿ ರಾಜನಾಗಿ ಉಳಿದಿದ್ದ. ನಿತ್ಯವೂ ಅವನ ಪತನವಾಗುವುದು ಎಂಬ ನಿರೀಕ್ಷೆಯಿದ್ದರೂ ಎರಡು ವರ್ಷ ಹಾಗೆಯೆ ಕಳೆಯಿತು. ಕಮ್ಯುನಿಸ್ಟರು ಈ ರಾಜನ ಬಗ್ಗೆ ಔದಾರ್ಯ ತೋರುವಂತಿತ್ತು. ಲೆನಿನ್, ಸ್ಟಾಲಿನ್, ಗ್ರೋಝಾ ಮೊದಲಾದವರ ಭಾವಚಿತ್ರಗಳಂತೆ ಅರಸು ಮೈಕೆಲನ ಚಿತ್ರವೂ ಮೆರವಣಿಗೆಗಳಲ್ಲಿರುತ್ತಿತ್ತು. ರಶಿಯನ್ನರು ಮೈಕೆಲನಿಗೆ "ಸೋವಿಯಟ್ ವಿಜಯ" ಪದಕವನ್ನಿತ್ತರು. ಅರಸನ ಭಾಷಣಗಳಲ್ಲಿ ಕಮ್ಯುನಿಸ್ಟ ಧೋರಣವು ಸಾರಲ್ಪಟ್ಟಿತು.

ಆದರೆ ಈ ನಾಟಕ ಹಾಗೆಯೆ ನಡೆಯುವುದು ಸಾಧ್ಯವಿರಲಿಲ್ಲ. ದೇಶದಲ್ಲಿ ಕಮ್ಯುನಿಸ್ಟ್ ವಿರೋಧಿಶಕ್ತಿಗೆ ಆಸರೆಯಾಗಿ ಅರಸೊತ್ತಿಗೆಯನ್ನು ಇಡುವುದು ಕಮ್ಯುನಿಸ್ಟರಿಗೆ ಸುರಕ್ಷಿತವೆಂದು ಕಾಣಲಿಲ್ಲ. ಇಂಗ್ಲೆಂಡಿನ ರಾಜಕುಮಾರಿ ಎಲಿಜಬೇಥಳ ಲಗ್ನಕ್ಕೆಂದು ಮೈಕೆಲ್ ಬಂದ. ಆಗ ಯುಗೋಸ್ಲಾವಿಯದ ಅರಸು ಪೀಟರ್ "ನೋಡಪ್ಪಾ, ರಶಿಯನ್ನರು ನಿನ್ನನ್ನು ಒಂದೇ ಕೊಲ್ಲುವರು ಇಲ್ಲವೆ ಎಲ್ಲಿಗಾದರೂ ಗಡೀಪಾರು ಮಾಡುವರು. ಈಗ ಹೇಗೂ ಬಂದಿರುವಿ. ತಿರುಗಿ ಯಾಕೆ ಹೋಗುವಿ ?" ಎಂದ.

ಮೈಕೆಲ್ ನಿರ್ದಿಷ್ಟವಾಗಿ ಏನೂ ಹೇಳಲಿಲ್ಲ. ಈ ವಾಸ್ತವ್ಯದಲ್ಲಿ ಅವನಿಗೆ ರಾಜಕುಮಾರಿ ಆನ್ಳ ಪರಿಚಯವಾಯಿ. ಅವಳು ಫ್ರೆಂಚ್ ಅರಸು ಮನೆತನಕ್ಕೆ ಸೇರಿದವಳು.

ಮೈಕೆಲ್ ತಿರುಗಿ ರುಮಾನಿಯಕ್ಕೆ ಹೋದ ಮೇಲೆ ಆನ್ಳನ್ನು ಮದುವೆಯಾಗಲು ಗ್ರೋಝಾನ ಅಪ್ಪಣೆ ಕೇಳಿದ. ಆದರೆ ಅನುಮತಿ ಸಿಗಲಿಲ್ಲ.

೧೯೪೭ ರ ಡಿಸೆಂಬರ್ ೨೯ ರಂದು ಗ್ರೋಝಾ ಮೈಕೆಲನಿಗೆ ಮರುದಿನ ಬೆಳಿಗ್ಗೆ ತನ್ನನ್ನು ಕಾಣಬೇಕೆಂದು ಹೇಳಿಕಳಿಸಿದ.

ಮಾರನೆಯ ಮುಂಜಾನೆ ಕಾರಿನಲ್ಲಿ ಮೈಕೆಲ್, ಅವನ ತಾಯಿ ಹೆಲೆನ್, ಏಡ್-ಡಿ-ಕ್ಯಾಂಪ್‌ರು ಬುಖಾರೆಸ್ಟ್‌ಕ್ಕೆ ಹೋದರು. ಅಲ್ಲಿ ಕಮ್ಯುನಿಸ್ಟ

ಅಧಿಕಾರಿಗಳು ಕಾರನ್ನು ಮುತ್ತಿ ತಾಯಿ–ಮಗನನ್ನು ಅವರ ಪರಿವಾರದಿಂದ ಬೇರ್ಪಡಿಸಿದರು. ಬಾಗಿಲು ಕಾಯುವವರೆಲ್ಲ ಹೊಸಬರು ಎಂದು ಮೈಕೆಲ್ ಕಂಡುಕೊಂಡ.

ಸಿಂಹಾಸನ ತ್ಯಾಗಪತ್ರದ ಮೇಲೆ ಸಹಿ ಮಾಡಲು ಗ್ರೋಝಾ ಮೈಕೆಲನಿಗೆ ಹೇಳಿದ.

"ನಾನು ನಿರಾಕರಿಸಿದರೆ ನೀವೇನೂ ನನ್ನನ್ನು ಬಲಾತ್ಕರಿಸಲಾರಿರಿ," ಎಂದ ಮೈಕೆಲ್.

"ಇಲ್ಲ. ಆದರೆ ಎಚ್ಚರಿಕೆ ಕೊಡುತ್ತೇನೆ ನಿಮಗೆ. ಈ ಶಹರವನ್ನು ಧ್ವಂಸ ಮಾಡಲು ಬಂದೂಕುಗಳು ಸಿದ್ಧವಾಗಿವೆ. ರಕ್ತಪಾತವಾಗುವುದು. ನಿಮ್ಮ ಬೆಂಬಲಿಗರೆಲ್ಲ ಜೇಲು ಕಾಣುವರು. ರುಮಾನಿಯ ಅನನ್ವಿತ ಕಷ್ಟಕ್ಕೆ ಗುರಿಯಾಗುವುದು. ಈಗ ನಿಮ್ಮನ್ನು ಪ್ರೀತಿಸುವವರು ನಿಮ್ಮನ್ನು ದ್ವೇಷಿಸುವಂತಾಗುವುದು."

ಮೈಕೆಲನಿಗೆ ಇಪ್ಪತ್ತು ನಿಮಿಷದ ಅವಕಾಶ ಕೊಡಲಾಯಿತು. ತಾಯಿ ಮಗ ಚರ್ಚಿಸಿದರು. ಕೊನೆಗೆ ಮೈಕೆಲ್ ಸಹಿ ಹಾಕಿದ. ಅವನಿಗೊಂದು ಪಾಸ್‌ಪೋರ್ಟ್ ಕೊಟ್ಟರು. ರುಮಾನಿಯದ ನಾಗರಿಕತ್ವದಿಂದ ನಿಮ್ಮನ್ನು ವಂಚಿತನಾಗಿ ಮಾಡುವುದಿಲ್ಲ ಎಂದೂ ಹೇಳಲಾಯಿತು.

ಸಹಿ ಹಾಕಿದ ನಂತರ ಗ್ರೋಝಾ ತನ್ನ ಕಿಸೆಯಲ್ಲಡಗಿಸಿಟ್ಟಿದ್ದ ಪಿಸ್ತೂಲನ್ನು ತೋರಿಸಿದ. "ಎಲ್ಲದಕ್ಕೂ ಸಿದ್ಧನಾಗಿಯೆ ಇದ್ದೆ," ಎಂದನಾತ.

ಮೈಕೆಲ್ ದೇಶ ಬಿಟ್ಟು ಹೊರಟ. ಸ್ವಿಝರ್ಲಂಡಿನಲ್ಲಿ ಆನ್ ಅವನಿಗಾಗಿ ಕಾದಿದ್ದಳು. ಗಡೀಪಾರಾದರೂ ಸ್ವಾತಂತ್ರ್ಯ ಅವನಿಗೆ ಸಿಗಲಿತ್ತು.

ಇನ್ನೂ ಇಪ್ಪತ್ತೆಂಟು ವರ್ಷಗಳಾಗುತ್ತಿದ್ದಾಗಲೇ ಮೈಕೆಲನ ಜೀವನದ ಆಗುಹೋಗುಗಳೆಲ್ಲ ಮುಗಿದಂತಾದವು. ಆಳಿಕೆಯ ಕೆಲವೇ ವರ್ಷಗಳಲ್ಲಿ ಅವನು ಒಂದೇ ಒಂದು ದಿನವನ್ನು ಸುಖಪ್ರದವಾಗಿ ಕಳೆಯಲಿಲ್ಲ.

ಕ್ಯಾಥೊಲಿಕ್‌ಳಾದ ಆನ್‌ಳನ್ನು ಮೈಕೆಲ್ ಲಗ್ನವಾಗುವುದಕ್ಕೆ ಕೆಲವು ಘಟನಾತ್ಮಕ ಆತಂಕಗಳಿದ್ದವು. ಆದರೆ ಅಪಾರ ಕಷ್ಟ ಸಹಿಸಿದ ಮೈಕೆಲನ ತಾಳ್ಮೆಯ ಪರೀಕ್ಷೆ ಮಾಡಲು ಯಾರೂ ಸಿದ್ಧರಿರಲಿಲ್ಲ. ೧೯೪೮ರಲ್ಲಿ ಅಥೆನ್ಸ್‌ನಲ್ಲಿ ಮೈಕೆಲ್ ಆನ್‌ಳನ್ನು ಮದುವೆಯಾದ. ಅಲ್ಲಿ ಅವರು ಕೆಲಕಾಲ ವಾಸಿಸಿದರು. ಅಲ್ಲಿಯೆ ಅವರಿಗೆ ಇಬ್ಬರು ಮಕ್ಕಳು ಹುಟ್ಟಿದರು. ೧೯೫೩ ರಲ್ಲಿ ಅವರು ಬರ್ನಾರ್ಡ್ ಶಾ ವಾಸಿಸಿದ್ದ ಅಯೋಟ್ ಸೇಂಟ್-ಲಾರೆನ್ಸ್‌ಗೆ ಹೋಗಿ ವಾಸಿಸತೊಡಗಿದಳು.

ಪದಭ್ರಷ್ಟರಾದ ಅರಸರಲ್ಲಿ ಮೈಕೆಲ್ ಅತ್ಯಂತ ಬಡವನಾಗಿದ್ದ. ಕುಟುಂಬದ ಬಳಿ ಇದ್ದುಬಿದ್ದುದೆಲ್ಲ ಕೆರೋಲನ ಬಳಿ ಇತ್ತು. ಕೆರೋಲ್ ಲಂಡನ್ನಿಗೆ ಬಂದಾಗ ಕರೆಯ ಕಳಿಸಿದರೂ ಮೈಕೆಲ್ ಅವನಲ್ಲಿಗೆ ಹೋಗಲಿಲ್ಲ. ಮೈಕೆಲ್ ಒಕ್ಕಲತನ ಮಾಡುತ್ತ ಜೀವಿಸಹತ್ತಿದ.

೧೯೫೩ ರಲ್ಲಿ ಕೆರೋಲ್ ತೀರಿಕೊಂಡ.

ಮೈಕೆಲ್ ಅನೇಕಾನೇಕ ಬಗೆಯ ನೌಕರಿಗಳನ್ನು ಮಾಡಿದ್ದಾನೆ. ಬಡವನಾಗಿದ್ದರೂ ಆತ ಅಮೇರಿಕನ್ ಪತ್ರಿಕೆಯೊಂದರ ಕೊಡುಗೆಯನ್ನು ನಿರಾಕರಿಸಿದ. ಜೀವನದ ನೆನಹುಗಳನ್ನು ಬರೆದು ಕೊಟ್ಟರೆ ೧,೦೦,೦೦೦ ಡಾಲರುಗಳನ್ನು ಕೊಡುವುದಾಗಿ ಆ ಪತ್ರಿಕೆ ಹೇಳಿತ್ತು.

ಬಡವನಾದರೂ ಮೈಕೆಲ್ ಸುಖಿಯಾಗಿದ್ದಾನೆ ಈಗ. ಕುಟುಂಬ ಜೀವನ ಅವನಿಗೆ ಹಿಡಿಸುತ್ತದೆ. ಗತಕಾಲವನ್ನು ಅವನು ಚರ್ಚಿಸುವುದು ತೀರ ಕಡಿಮೆ. *



"ನಮ್ಮ ಭಾಷೆಯನ್ನು ಮಾತೃಭಾಷೆಯೆಂದು ಕರೆಯುವುದೇಕೆ?"

"ಕಾರಣ, ಅಪ್ಪನಿಗೆ ಅದನ್ನು ಉಪಯೋಗಿಸಲು ಅವಕಾಶವೇ ಸಿಗುವುದಿಲ್ಲ."



# ಆಳು ಒಡತಿಯಾದಳು

**ಶ್ರೀಮತಿ ಚಂದ್ರಿಕಾ ನಾಡಿಗೇರ**

ಇದೇನು, ಇಡೀ ಬೆಂಚನ್ನೇ ಆಕ್ರಮಿಸುತ್ತಿದ್ದೀಯಲ್ಲ! ಎಷ್ಟು ದಿನಗಳ ಪ್ರವಾಸ ಮಾಡುವದಿದೆ?"

—ವ್ಯಂಗ್ಯಬಾಣದ ಜತೆಗೆ ಸಹಪ್ರಯಾಣಿಕರ ನಗುಶಲ್ಯಗಳು ಬಂದಿರಿದಾಗ ಬೆಚ್ಚಿ ಬಿದ್ದೆ. ಅಬ್ಬ, ಅಂಥ ಕರ್ಕಶ ಸ್ವರವನ್ನು ನನ್ನ ಜನ್ಮದಲ್ಲಿಯೇ ಕೇಳಿರಲಿಲ್ಲ. ಜಮಖಾನೆ ಹಾಸುವುದನ್ನು ಬಿಟ್ಟು ಹಿಂದೆ ನೋಡಿದಾಗ ಸ್ವರಕ್ಕಿಂತ ತಾನೇನೂ ಕಡಿಮೆಯಿಲ್ಲವೆಂದು ಅವಳ ವಿಕಾರ ಸ್ವರೂಪ ಸೂಚಿಸಿತು. ಡಾಂಬರಿನ ಪೀಪಾಯಿಗೆ ಸೀರೆಯುಡಿಸಿದಂತಿದ್ದ ಅವಳನ್ನು ಕಂಡು ಅವಳಿಗಾದ ಸ್ಥಳದ ಭಯವು ನಿಜವಾದುದೆನಿಸಿತು. ಗಂಡಾಂತರದ ಗಂಟೆಯಂತಿದ್ದ ಅವಳ ಸ್ವರವನ್ನು ಕೇಳಿ ಇಂದು ಹೊರಟ ಗಳಿಗೆಯೇ ಸರಿಯಾಗಿಲ್ಲವೆಂದುಕೊಂಡೆ.

"ಈಗ ನಮ್ಮ ಜನ ಬರುವವರಿದ್ದಾರೆ. ಅದಕ್ಕಾಗಿ ಮೊದಲೇ ಬಂದು ಅವರಿಗಾಗಿ ಸ್ಥಳ ಕಾದಿರಿಸಿದ್ದೇನೆ" ಎಂದು ನಮ್ರತೆಯಿಂದ ಉದ್ಗರಿಸಿದೆ. ಆವಳ ಜತೆಗೆ ಕುಳಿತಿದ್ದ ಮರಿಯಾನೆಗಳಂತಿದ್ದ ಮೂವರು ಸುಪುತ್ರಿಯರು ತಿರಸ್ಕಾರ ದೃಷ್ಟಿಯಿಂದ ನೋಡಿದಾಗ ಬೆದರಿ ಸರಿದು ಕುಳಿತೆ. ಆದರೆ ನಾನೂ ಅವರ ಸಹಪ್ರವಾಸಿ

ಕಳು, ಅವರಷ್ಟೇ ನನಗೂ ಸ್ವಾತಂತ್ರ್ಯವಿದೆ ಎಂದು ಬೆದರಿದ ಮನವನ್ನು ಸಂತೈಸಿ ಹೊರಗೆ ನೋಡತೊಡಗಿದೆ.

ಇಂದು ಬೆಳಗಿನಿಂದ ಹೀಗೆಯೇ ಮಾಡಿದ ಕೆಲಸಗಳ ಪರಿಣಾಮವೆಲ್ಲ ತಿರುವುಮುರುವಾಗಿತ್ತು. ಮುಂಜಾನೆ ಪತ್ರ ಬಂದಾಗಿನಿಂದ ಅಣ್ಣನಿಗೆ ಕಾಹಿಲೆಯೆಂಬ ಸುದ್ದಿ ಓದಿ ಮನಸ್ಸು ಚಂಚಲವಾಗಿತ್ತು. ಕುಂಕುಮ ಹಚ್ಚಿಕೊಳ್ಳಲು ಕನ್ನಡಿಗಾಗಿ ಮನೆಯನ್ನೆಲ್ಲ ಹುಡುಕಿದ್ದೆ. ಆದರೆ ಕನ್ನಡಿ ಕೈಯಲ್ಲಿಯೇ ಇತ್ತು. ತವರುಮನೆಗೆ ಹೊರಡುವ ಗಡಿಬಿಡಿಯಲ್ಲಿ ಕಾಫಿಗೆ ಹಾಲು ಬೆರಸುವ ಬದಲು ಮಜ್ಜಿಗೆ ಬೆರಸುವದರಲ್ಲಿದ್ದೆ! ರೇಲ್ವೆ ಸ್ಟೇಶನ್ ಎಂದು ಪೋಲೀಸ್ ಸ್ಟೇಶನ್ನಿಗೆ ನುಗ್ಗಿರಲಿಲ್ಲ. ಇದೇ ನನ್ನ ಪುಣ್ಯ!

ಒಮ್ಮೆಲೆ ನನ್ನ ದೃಷ್ಟಿ ಆಳು ತಂದಿಟ್ಟ ಹ್ಯಾಂಡ್ ಬ್ಯಾಗಿನ ಕಡೆಗೆ ಹರಿಯಿತು. ಅವಸರದಲ್ಲಿ ಹೊಸದಾಗಿ ಬಂದ ಕೆಲಸದವಳಿಗೆ ನನ್ನ ಬಟ್ಟೆ ಬರೆಗಳನ್ನು ಬ್ಯಾಗಿನಲ್ಲಿಡಲು ಹೇಳಿದ್ದೆ. ಆದರೆ ಅವಳು ನಾವು ನಿರುಪಯೋಗಿಯೆಂದು ಒಂದೆಡೆ ಎಸೆದಿದ್ದ ಬ್ಯಾಗಿನಲ್ಲಿ ಸಾಮಾನು ತುಂಬಿ ನನ್ನನ್ನು ಅವಮಾನಕ್ಕೆ ಗುರಿಮಾಡಿದ್ದಳು.

ಜನಗಳ ಗಲಾಟೆ ಹೆಚ್ಚಾಗಲು ನನ್ನ ಸ್ಥಳದಲ್ಲಿ ಕುಳಿತುಕೊಳ್ಳಲು ಮುಂದೆ ಕಾಲಿಟ್ಟಾಗ ಎಡವಿ ಕುಸಿದೆ. ಪತ್ತಲವನ್ನು ನೋಡಿದಾಗ ಇನ್ನೇನು ಗತಿ ಎಂದೆನಿಸಿತು. ಇಸ್ತ್ರಿಯ ಪತ್ತಲ ಅಗಸರವನ ದಯೆಯಿಂದ ಒಂದೆಡೆ ಸುಮಾರು ಅರ್ಧ ಫೂಟು ಹರಿದಿತ್ತು. ಬಿಳಿ ಪತ್ತಲದ ಮೇಲಿನ ಅರಿಸಿನ ಎಣ್ಣೆಗಳ ಕಲೆಯು ಅಗಸರವನ ಮಗಳು ಮಾಡಿದ ಅಡಿಗೆಯನ್ನು ಸೂಚಿಸುತ್ತಿತ್ತು. ನನ್ನ ಪ್ರೀತಿಯ ಪತ್ತಲಕ್ಕೆ ಬಂದ ಅವಸ್ಥೆ ಕಂಡು ಮನಸ್ಸು ಮರುಗಿತು. ನನ್ನ ಈ ಅವ್ಯವಸ್ಥಿತ ಪೋಷಾಕನ್ನುಕಂಡೇ ನನ್ನ ಎದುರು ಬೆಂಚಿನ ಮೇಲೆ ಕುಳಿತು ನನ್ನನ್ನು ದುರುಗುಟ್ಟಿ ನೋಡುತ್ತಿರುವ ಸಹಪ್ರಯಾಣಿಕಳು ಹಾಗೆ ಹೇಳಿರಬಹುದು....

"ನಮಸ್ಕಾರ ಊರ್ಮಿಳಾ, ಎಷ್ಟು ಹುಡುಕಬೇಕು ನಿನ್ನ? ಇನ್ನೆಂದೂ ನಿನ್ನ ಜತೆಗೆ ಬರುವುದಿಲ್ಲ ನೋಡು."

ಹೊರಗೆ ನೋಡಿದಾಗ ಮನೋರಮೆ ತನ್ನ ಮೂರು ಮಕ್ಕಳು, ನಾಲ್ಕು ಸಾಮಾನುಗಳ ಸಹಿತ ನಿಂತಿದ್ದಳು. ಅವಳನ್ನು ನೋಡಿ ಅಚ್ಚರಿಯಿಂದ ಎದ್ದು ನಿಂತೆ. ಇದ್ದುದನ್ನು ಇದ್ದಂತೆ ನಟಿಸುವದು ಮಾನವನ ಮನಸ್ಸಿನ ಒಂದು ಮುಖವಾದರೆ ಇಲ್ಲದುದನ್ನು ಇದ್ದಂತೆ ನಟಿಸುವದೂ ಇನ್ನೊಂದು ಮುಖವೇನೊ! ಜರತಾರಿಯ ಸೀರೆಯುಟ್ಟ ಮನೋರಮೆಯ ಆ ರೀತಿಯ ಅಲಂಕಾರ ಕಂಡವರು ಅವಳು ಮಧ್ಯಮ ವರ್ಗದವಳೆಂದು ಹೇಳಿದರೆ ನಂಬುವಂತಿರಲಿಲ್ಲ. ಅವಳ ಮಕ್ಕಳು ಗಾಡಿ ಹತ್ತಲಾ-ರದೆ ಪೇಚಾಡುತ್ತ ನಿಂತಿರುವಾಗಲೂ ಸೀರೆಯ ಇಸ್ತ್ರಿ ಮುರಿಯುವದೆಂದು ಅವಳು ಹಾಗೆಯೇ ನಿಂತಿದ್ದು ಕಂಡು ನನ್ನಲ್ಲಿಯ ಸ್ವಯಂಸೇವಿಕೆಯ ಚಟುವಟಿಕೆ ಜಾಗೃತವಾಯಿತು. ಕೂಡಲೆ ಇಳಿದು ಮಕ್ಕಳನ್ನೆತ್ತಿ ಒಳಗೆ ಕೂಡ್ರಿಸಿದೆ. ಅವಳ ಸಾಮಾನುಗಳನ್ನೆಲ್ಲ ಸರಿಯಾಗಿಡುವಷ್ಟರಲ್ಲಿ ಗಾಡಿ ಹೊರಟಿತು.

"ಇದೇನು ಮನೋರಮಾ, ಎಷ್ಟು ದಿನಗಳಿಂದ ಭೆಟ್ಟಿಯೇ ಆಗಿಲ್ಲವಲ್ಲ? ಮೂರು ವರ್ಷಗಳ ಹಿಂದೆ ಅತ್ತಿಗೆಯ ಮನೆಗೆ ಬಂದಿದ್ದಾಗ ನಿನ್ನನ್ನು ನೋಡಿದ್ದೆ. ನಮ್ಮ ಮನೆಗೆ ಬರುತ್ತೇನೆಂದು ಹೇಳಿ ಕೊನೆಗೆ ತಪ್ಪಿಸಿದೆಯಲ್ಲವೇ! ಈಗೆಲ್ಲಿಗೆ ಹೋಗಬೇಕು?"

ನಾನು ಅಚ್ಚರಿಯಿಂದ ನೋಡತೊಡಗಿದೆ. ಇಷ್ಟು ಹೊತ್ತು ಶಿಲೆಯಂತೆ ಕುಳಿತಿದ್ದ ದುರ್ಗಾಬಾಯಿ ಈಗ ಅವಳೊಂದಿಗೆ ಮಾತಾಡುವಾಗ ಹೇಗೆ ಬೆಣ್ಣೆಯಂತಾಗಿದ್ದಾಳೆ ಎಂದೆನಿಸಿತು. ಇನ್ನು ಮನೋರಮೆ ನನ್ನ ವಿಷಯ ಹೇಳಿದಾಗ ನನ್ನ ಬಗ್ಗೆ ಇದ್ದ ಅವಳ ಅಭಿಪ್ರಾಯವು ಬದಲಾಗಬಹುದೆಂದು ಸಮಾಧಾನಗೊಂಡೆ. ವೇಳೆ ಕಳೆಯಲು ಪುಸ್ತಕ ಓದಬೇಕೆಂದು ಬ್ಯಾಗನ್ನು

ಮುಂದಕ್ಕೆಳೆದುಕೊಂಡೆ.

"ಪುಣೆಗೆ ಹೋಗಬೇಕಾಗಿದೆ ಕಕ್ಕಿ. ಈ ಮಕ್ಕಳನ್ನು ಕಟ್ಟಿಕೊಂಡು ದೂರದ ಪ್ರವಾಸ ಮಾಡುವುದೆಂದರೆ ಬಹಳ ಕಷ್ಟ ನೋಡಿ. ಅದಕ್ಕೇ ನಾನು ......"

"ನಿಜ, ಅದಕ್ಕೇ ನೀನು ಜತೆಗೆ ಕೆಲಸದವಳನ್ನು ಕರೆತಂದೆಯೆಂದು ನಾನು ಆಗಲೇ ಊಹಿಸಿದೆ. ವಿಧೇಯಳಂತೆ ಕಾಣುತ್ತಾಳೆ. ನಿನಗಾಗಿ ಸ್ಥಳ ಹಿಡಿದು ಕುಳಿತಿದ್ದಳು. ಎಲ್ಲಿ ಸಂಪಾದಿಸಿದೆ ಇವಳನ್ನು ?"

ನಾನು ಹಾವು ಮೆಟ್ಟಿದವಳಂತೆ ಎದ್ದು ನಿಂತೆ! ತವರುಮನೆಯಲ್ಲಿ ಅಕ್ಕರೆಯಿಂದ ಬೆಳೆದು ನಾಲ್ಕು ವರ್ಷ ಕಾಲೇಜಿಗೆ ಮಣ್ಣು ಹೊತ್ತುದಕ್ಕೆ ಸಾರ್ಥಕವಾಯಿತು ಎಂದೆನಿಸಿತು. ಅನುಕೂಲವಂತರ ಮನೆ ಸೇರಿ ಆಳುಗಳೊಡನೆ ಯಜಮಾನಿಯಂತೆ ವ್ಯವಹರಿಸುತ್ತಿದ್ದ ನಾನು ಇಂದು ಇವಳ ಕಣ್ಣಿಗೆ ಸೇವಕಿಯಂತೆ ಕಾಣಿಸಬೇಕಾದರೆ ನನ್ನ ಮುಖದ ಮೇಲೆ ವಿದ್ಯೆಯ, ಸಂಸ್ಕೃತಿಯ ತೇಜ ಲವಲೇಶವೂ ಇಲ್ಲವೇ? ಕೇವಲ ಉಡುಪೇ ಮನುಷ್ಯನ ಸ್ಥಾನಮಾನವನ್ನೆತ್ತಿ ತೋರಿಸುವ ಚಿನ್ಹವೇ? ಹಾಗಿದ್ದರೆ ಜಗತ್ತಿನ ಮಹಾಪುರುಷರೆಲ್ಲ ಉಡುಪಿನ ಬಗೆಗೆ ದುರ್ಲಕ್ಷಿಸುವವರಾಗಿದ್ದರಲ್ಲ! ನಿಜ, ಅವರ ಮುಖದ ಮೇಲಿದ್ದ ಆ ತ್ಯಾಗದ, ನಿಷ್ಠೆಯ ತೇಜಸ್ಸು ನನಗೆಲ್ಲಿಂದ ಬರಬೇಕು?

ಯೋಚನೆ ಬಗೆಹರಿಯದೆ ಮನೋರಮೆಯನ್ನು ನೋಡಿದೆ. ದುರ್ಗಾಬಾಯಿಯ ಮಾತನ್ನು ಕೇಳಿ ಕ್ಷಣ ಕಾಲ ಬೆಚ್ಚಿದರೂ ಮರುಕ್ಷಣವೇ ತಲೆ ತಗ್ಗಿಸಿ ಕುಳಿತ ಅವಳನ್ನು ಕಂಡು ನನಗೆ ಅವಳ ಮನೋಭಾವವನ್ನೋದಲಾಗಲಿಲ್ಲ.

ಗಾಡಿ ನಿಂತಾಗ ದುರ್ಗಾಬಾಯಿ ಯಾರೋ ಗುರುತಿನವರನ್ನು ಕಂಡು ಮಾತನಾಡಿಸಲೆಂದು ಹೊರಟಾಗ ಮನೋರಮೆ ಗದ್ಗದ ಸ್ವರದಿಂದ ಹೇಳಿದಳು, "ನನ್ನಿಂದ ನೀನು ಎಂಥ ಮಾತು ಕೇಳಬೇಕಾಯಿತು ಊರ್ಮಿಳಾ? ಅನಾಥಳಾಗಿ ನಿಮ್ಮ ಮನೆ ಸೇರಿದ ನಾನು ನಿನ್ನ ತಂದೆ ತಾಯಿಗಳ ಕರುಣೆಯಿಂದ ಮನುಷ್ಯಳಂತಾದೆ. ಈಗ ನಿನಗೆ ಇಂಥ ಮಾತುಗಳನ್ನಾಡಿಸಿದ ಮೇಲೆ ಬದುಕಿಯೂ ವ್ಯರ್ಥವೆಂದೆನಿಸುತ್ತದೆ. ದುರ್ಗಾ-ಬಾಯಿಗೆ ನಿಜ ಸಂಗತಿ ತಿಳಿಸಿದ ಹೊರತು ನನಗೆ ಸಮಾಧಾನವಿಲ್ಲ."

ನನ್ನ ವ್ಯಸನ ಹಾರಿಹೋಯಿತು. ಮನೋರಮೆಯ ಕೃತಜ್ಞತೆ ಕಂಡು ಮನಸ್ಸು ಹಗುರವಾಯಿತು. "ಛೆ ಛೆ, ಎಂಥ ಮಾತಾಡುತ್ತೀ ಮನೋರಮೆ? ಇದರಲ್ಲಿ ನಿನ್ನ ತಪ್ಪೇನಿದೆ? ನಿಜ ಹೇಳಬೇಕೆಂದರೆ ನನಗೆ ಒಂದು ಕ್ಷಣ ವ್ಯಸನವೆನಿಸಿತು. ಆದರೆ ಈಗ ಮೋಜೆನಿಸುತ್ತಿದೆ. ಜೀವನವೆಂದರೆ ಒಂದು ನಾಟಕ ಮನೋರಮೆ. ತಿಳಿದಿದ್ದುದಕ್ಕಿಂತ ತಿಳಿಯದಿದ್ದುದರಲ್ಲಿ ಆಸಕ್ತಿ ಹೆಚ್ಚಾಗುವಂತೆ ಅರಿತವರ ಸ್ವಭಾವ ಪರೀಕ್ಷೆಗಿಂತ ಅರಿಯದವರ ಸ್ವಭಾವ ಪರೀಕ್ಷೆಯೆ ಕುತೂಹಲಕರವೆನಿಸುತ್ತದೆ. ನೀನು ಸುಮ್ಮನಿದ್ದುಬಿಡು. ನಿರ್ಜೀವ ಪುಸ್ತಕವನ್ನೋದುವದಕ್ಕಿಂತ ಈ ಸಜೀವ ಪುಸ್ತಕವನ್ನೋದಲು ಪ್ರಯತ್ನಿಸೋಣ. ಬೆಳಗಾವಿಯ ವರೆಗೆ ಮೋಜಿನಿಂದ ಹೊತ್ತಾದರೂ ಕಳೆಯಲಿ."

"ನಿನಗೆ ಗೊತ್ತಿಲ್ಲ ಊರ್ಮಿಳಾ. ನಮ್ಮ ಅತ್ತಿಗೆಯಿದ್ದ ಚಾಳಿಗೆ ಇವಳೇ ಅನಭಿಷಿಕ್ತರಾಣಿಯಾಗಿದ್ದಾಳೆ. ಇವಳು ಹಚ್ಚದ ಜಗಳವಿಲ್ಲ. ಹೇಳದ ಚಾಡಿಯಿಲ್ಲ. ಮಾಡದ ಅನರ್ಥವಿಲ್ಲ. ಇವಳ ಹಿಂದೆ ಎಲ್ಲರೂ ಇವಳನ್ನು ಶಪಿಸಿದರೂ ಮುಂದೆ ಮಾತ್ರ ಮರ್ಯಾದೆಯಿಂದ ಮಾತನಾಡುತ್ತಾರೆ. ಅದಕ್ಕಾಗಿ ಎಲ್ಲರೂ ತನಗೆ ಅಂಜುತ್ತಾರೆಂಬ ಭ್ರಮೆ ಇವಳ ತಲೆಗೇರಿದೆ. ಇನ್ನು ಇವಳು ನಿನಗೆ ಅನ್ನುವ ಹೀನವಾದ ಮಾತುಗಳನ್ನು ನಾನಂತೂ ಕೇಳಲಾರೆ."

ಅಷ್ಟರಲ್ಲಿ ದುರ್ಗಾಬಾಯಿ ಯಾರನ್ನೋ ಕರೆದುಕೊಂಡು ಬಂದದ್ದರಿಂದ ನಾನು ಮನೋರಮೆಗೆ ಸನ್ನೆ ಮಾಡಿ ಸುಮ್ಮನಿರಿಸಿದೆ.

"ಇಲ್ಲಿ ಬಾ ತಾರಾ. ಇಲ್ಲಿ ಬೇಕಾದಷ್ಟು ಸ್ಥಳ





ನೊಡೆಲ್ ೧೩೭೪: ೬ವಾಲ್ವ, ಅಲ್ ವೇವ್ ೪ ಬ್ಯಾಂಡ ಪಿಯಾನೋ ಕೀ ಸ್ವಿಚ್ ಎಸಿ ಅಥವಾ ಎಸಿ/ಡಿಸಿ (ಎರಡು ಮಾಡಲ್)

ನೀವು ಯಾರೇ ಇದ್ದರೂ ....



# ನೀವು ಮರ್ಫಿ ರೇಡಿಯೋದಿಂದ

ಉಲ್ಲಸಿತರಾಗುವಿರಿ



ಮಾಡಲ್ ೧೩೨೨: ೭ ವಾಲ್ವ ಅಲ್ ವೇವ್ ೩ ಬ್ಯಾಂಡ ಎಸಿ ಇಲ್ಲವೆ ಎಸಿ/ಡಿಸಿ (೨ ಮಾಡಲ್)



ಮೊಡೆಲ್ ೨೬೬

೭ ವಾಲ್ವ್, ಆಲ್ ವೇವ್, ೫ ಬ್ಯಾಂಡ್,
ಪಿಯಾನೋ ಕೀಸ್ವಿಚ್ ಏಸಿ.



ಮೊಡೆಲ್ ೦೭೨೪
೬ ವಾಲ್ವ
ಆಲ್ ವೇವ್ಹ
೮ ಬ್ಯಾಂಡ, ಪೂರ್ಣ
ಬ್ಯಾಂಡ ಸ್ಪ್ರೆಡ್
ಏಸಿ ಇಲ್ಲವ ಎಸಿ
ಡಿಸಿ (ಮೂಡಲ್
ಮೊಡೆಲ್ ೦೭೩೭
(ಡ್ರಾಯ ಬ್ಯಾಟರಿ)
೭ ವಾಲ್ವ್ಸ



ಮೊಡೆಲ್ ೦೩೫೨ :
೫ ವಾಲ್ವ ಆಲ್ ವೇವ ೩ ಬ್ಯಾಂಡ್ ಏಸಿ
ಇಲ್ಲವೆ ಏಸಿ/ಡಿಸಿ (ಎರಡು ಮೂಡಲ್)



ಮೊಡೆಲ್ ೦೭೨೬ :
೭ ವಾಲ್ವ, ಆಲ್
ವೇವ ೪ ಬ್ಯಾಂಡ,
ಪೂರ್ಣ ಬ್ಯಾಂಡ
ಸ್ಪ್ರೆಡ್ ಎಸಿ ಇಲ್ಲವೆ
ಏಸಿ ಡಿಸಿ (ಎರಡು
ಮೊಡೆಲ್ಲು)



ಮೊಡೆಲ್ ೦೨೯೮
೫ ವಾಲ್ವ, ಆಲ್ ವೇವ ೩ ಬ್ಯಾಂಡ
ಏಸಿ/ಡಿಸಿ ಹಾಗೂ ಮೊಡೆಲ್ ೦೨೯೯ :
(ಡ್ರಾಯ ಬ್ಯಾಟರಿ) ೪ ವಾಲ್ವ



ಮೊಡೆಲ್ ೧೭೫೨
೫ ವಾಲ್ವ, ಆಲ್
ವೇವ ೩ ಬ್ಯಾಂಡ್
ಎಸಿ ಇಲ್ಲವೆ
ಎಸಿ/ಡಿಸಿ
(ಎರಡು ಮೂಡಲ್)
ಹಾಗೂ
ಮೊಡೆಲ್ ೦೭೫೧ :
(ಡ್ರಾಯ ಭ್ಯಾಟರಿ)
▪ ವಾಲ್ವ್ಸ

**murphy radio**

delights
the home!

ವಿದೆ. ಇವಳ ಹೆಸರೇನು ಮನೋರಮಾ ?"

"ಊರ್ಮಿಳಾ" ಮನೋರಮೆ ಪ್ರೀತಿ ತುಂಬಿದ ದನಿಯಲ್ಲಿ ಹೇಳಿದಳು. ಇಷ್ಟು ಹೊತ್ತಿನಿಂದ ಒಂದು ದಿಶೆಯಲ್ಲಿ ವಿಚಾರಮಾಡುತ್ತಿದ್ದ ನಾನು ಈಗ ಇನ್ನೊಂದು ದಿಶೆಯಲ್ಲಿ ವಿಚಾರಮಾಡ ತೊಡಗಿದ್ದೆ. ದುರ್ಗಾಬಾಯಿಯ ಭಯಾನಕ ರೂಪ ಕಂಡು ಕ್ಷಣ ಕಾಲ ಮೊದಲು ಅಂಜಿದ ನಾನು ಈಗ "ಯುದ್ಧವೇ ಆಗುವದಿದ್ದರೆ ಬೇಗನೆ ಸೋಕ್ಷಮೋಕ್ಷ ವಾಗಿಬಿಡಲಿ" ಎಂಬ ನಿರ್ಲಿಪ್ತ ಭಾವನೆಯಿಂದ ಅವಳನ್ನು ನೋಡತೊಡಗಿದೆ. ನನ್ನಲ್ಲಿ ಮೊಂಡು ಧೈರ್ಯ ಉದಯಿಸಿತ್ತು.

"ಹಾಗೇಕೆ ನೋಡುತ್ತಿ ಹುಚ್ಚಿಯಂತೆ! ಇವರು ಬಂದದ್ದು ಕಾಣುವದಿಲ್ಲವೇ ? ಮನೋರಮೆ, ಆಳುಗಳಿಗೆ ಹೀಗೆ ಸಲಿಗೆ ಕೊಟ್ಟರೆ ನಾಳೆ ನಿನ್ನ ತಲೆಯನ್ನೇರಿ ಕೂಡ್ರುತ್ತಾರೆ. ಆದರೆ ನಾನು ಮಾತ್ರ ಇವಳು ನಮ್ಮಂತೆ ಬೆಂಚಿನ ಮೇಲೆ ಕೂಡ್ರುವದನ್ನು ಕೂಡ ಸಹಿಸಲಾರೆ. ಕೆಳಗೆ ಕೂಡ್ರು, ಮಹಾರಾಯಿತಿ, ನಿನ್ನ ಮಾನವೇನು ಮುಕ್ಕಾಗುವದಿಲ್ಲ."

ನಾನು ಗಡಬಡಿಸಿ ಎದ್ದುನಿಂತೆ. ಇಷ್ಟುಹೊತ್ತಿಗಾಗಲೇ ಆಳಿನಲ್ಲಿರಬೇಕಾದ ಗುಣಗಳು ನನ್ನಲ್ಲ ಉದಯಿಸಿದ್ದವು. ಕೆಳಗೆ ಕೂಡ್ರಬೇಕೆಂದಾಗ ಒಂದು ಕ್ಷಣ ಅಸಹ್ಯವೆನಿಸಿತು. ದುರ್ಗಾಬಾಯಿಯ ಮೂವರು ಅಪೂರ್ವ ಕನ್ಯಾಮಣಿಗಳು ರೈಲೆಂದರೆ ತಮ್ಮಪ್ಪನ ಮನೆಯೆಂದು ತಿಳಿದಂತಿತ್ತು. ಕಬ್ಬಿನ ಸಿಪ್ಪೆಗಳು, ತಿಂಡಿಯ ಕಾಗದಗಳು, ಕಿತ್ತಳೆಹಣ್ಣಿನ ಸಿಪ್ಪೆಗಳು, ಶೇಂಗಾ ಸಿಪ್ಪೆಗಳಿಂದ ತಿಪ್ಪೆಯಂತೆ ಕಾಣುತ್ತಿದ್ದ ಆ ಸ್ಥಳದಲ್ಲಿ ಕಣ್ಣು ಮುಚ್ಚಿ ಕುಳಿತೆ.

"ಎಲ್ಲಿಂದ ಬರುತ್ತಿದ್ದೀರಿ ದುರ್ಗಾಬಾಯಿ ?" 'ಎಲ್ಲಿಗೆ ಹೋಗುತ್ತೀರಿ' ಎಂದು ಕೇಳುವದು ಅಪಶಕುನವೆಂಬಂತೆ 'ಎಲ್ಲಿಗೆ ಹೋಗಿದ್ದಿರಿ' ಎಂಬ ಮಾತಿನಿಂದ ಕೂಡ ಜಗಳವಾಗಬಹುದೆಂಬ ಮುಂಜಾಗ್ರತೆಯಿಂದ ಮನೋರಮೆ ಕೇಳಿದಳು.

"ನಮ್ಮ ನಾದಿನಿಯ ಮನೆಗೆ ಹೋಗಿದ್ದೆವು. ಇವರನ್ನು 'ತೋರಿಸುವ' ಕೆಲಸವಿದೆಯಲ್ಲ! ಒಮ್ಮೆ ಮದುವೆಯಾಯಿತೆಂದರೆ ನನ್ನಷ್ಟು ಸುಖಿ ಯಾರೂ ಇಲ್ಲ ನೋಡು. ಆದರೆ ನನ್ನ ಮಕ್ಕಳನ್ನು ಒಪ್ಪದವರು ಯಾರಿದ್ದಾರೆ ಹೇಳು ?"

ನಾನು ಪ್ರಯಾಸದಿಂದ ನಗು ತಡೆದುಕೊಂಡು ದುರ್ಗಾಬಾಯಿಯ ಸುಪುತ್ರಿಯರನ್ನು ನೋಡಿದೆ. ಅವರು ತಾಯಿಯ ಮಾತನ್ನು ಸತ್ಯವೆಂದೇ ತಿಳಿದಂತಿತ್ತು !

ಲೋಂಡಾದಲ್ಲಿ ಗಾಡಿ ನಿಂತಾಗ ದುರ್ಗಾಬಾಯಿ ಎಲ್ಲರಿಗಿಂತ ಮುಂಚೆ ಇಳಿದು ಕಿಡಕಿಯಲ್ಲಿ ತಲೆಹಾಕಿ ಹೇಳಿದರು, "ನಮ್ಮ ಸ್ಥಳ ನೋಡುತ್ತಿರು ಉರಿ. ಬೇರೆ ಯಾರಾದೂ ಬಂದರೆ ನಾನು ಸಹಿಸಲಿಕ್ಕಿಲ್ಲ ನೋಡು !"

ಹೆಂಗಸರ ಡಬ್ಬಿಯೆಂದು ಹೆಂಗಸರು ನಿರ್ಭಯವಾಗಿ ಬರತೊಡಗಿದಾಗ ಉಭಯ ಸಂಕಟದಲ್ಲಿ ಬಿದ್ದೆ. ಇಲ್ಲಿಗೆ ಬರಬೇಡಿರೆಂದು ನಿಷ್ಠುರತೆಯಿಂದ ಅವರಿಗೆ ಹೇಗೆ ಹೇಳಲಿ? ಪಾಪ, ಅವರೂ ನಮ್ಮಂತೆಯೇ ಯಾವುದೊಂದು ಅಗತ್ಯದ ಕಾರಣದಿಂದ ಹೊರಟಿರಬಹುದು. ಕೊನೆಗೆ ಒಂದು ಉಪಾಯ ಹೊಳೆಯಿತು. ಸ್ಥಳವನ್ನಾಕ್ರಮಿಸುತ್ತಿದ್ದ ಅವರನ್ನು ಕರೆದು ಆತ್ಮೀಯತೆಯಿಂದ ಹೇಳಿದೆ, "ನೋಡಿ, ಇಲ್ಲಿ ನಮ್ಮ ಸಂಬಂಧಿಕರೊಬ್ಬರು ಕುಳಿತಿದ್ದಾರೆ. ಹುಣ್ಣಿಮೆ, ಅಮಾವಾಸ್ಯೆಗಳಿಗೆ ಅವರು ಭ್ರಮೆಯಿಂದ ಹುಚ್ಚಾಪಟ್ಟೆ ಕೂಗುವರು. ಈಗ ಅವರು ಬಂದರೆ ನನ್ನ ಮಾತು ನಿಮಗೆ ನಿಜವೆನಿಸೀತು. ಅದಕ್ಕಾಗಿ ದಯವಿಟ್ಟು ಆ ಬೆಂಚುಗಳ ಬಳಿಗೆ ಹೋಗಿ."

ನಾನು ಹೀಗೆ ಹೇಳುವದೊಂದೇ ತಡ, ಪಾಪ, ಅವರೆಲ್ಲ ಆದಷ್ಟು ನಮ್ಮಿಂದ ದೂರ ಕುಳಿತರು. ನಾನು ನಿಶ್ಚಿಂತೆಯಿಂದ ಹೊರಗೆ ನೋಡ ತೊಡಗಿದೆ.

"ಹೀಗೇಕೆ ಕುಳಿತಿದ್ದಿ ಉರಿ? ಕುಡಿಯುವ ನೀರು ತಂದಿಡು. ಗಾಡಿ ಹೊರಡುವ ಹೊತ್ತಾಯಿತು," ಪ್ರಯಾಸದಿಂದ ಒಳಗೆ ಬರುತ್ತಿದ್ದ

ದುರ್ಗಾಬಾಯಿ ಗುಡುಗಿದರು. ಲೋಂಡಾದ ನೀರಿಗೆ ಆಸೆಪಡುವ ಅವರನ್ನು ನಮ್ಮ ಸಹಪ್ರ-ಯಾಣಿಕರು ಕಣ್ಣರಳಿಸಿ ನೋಡಿದರು. ಆದರೆ ದುರ್ಗಾಬಾಯಿಗೆ ನೀರಿನ ಮೇಲೆ ಆಶೆಯಾಗಿರದೆ ನನಗೆ ಯಜಮಾನಿಯಂತೆ ಆಜ್ಞೆ ಮಾಡುವ ಆಶೆಯಾಗಿತ್ತೆಂದು ನನಗೆ ಗೊತ್ತಾಯಿತು.

"ನಿನಗೆ ಏನೂ ತಿಳಿಯುವದಿಲ್ಲ ಮನೋ-ರಮಾ, ಈಗಿನ ಕೆಲಸದವರು ಮನೆಯ ಯಜಮಾನಿಗಿಂತ ಚುರುಕಾಗಿರುತ್ತಾರೆ. ಇದರಿಂದ ಎಷ್ಟೋ ಮನೆಗಳಲ್ಲಿ ಒಡಕುಂಟಾಗಿ ಅನರ್ಥವಾಗಿದೆ. ನಮ್ಮ ಪಕ್ಕದ ಮನೆಯ ಅಡಿಗೆಯ-ವಳು ಯಜಮಾನಿಗಿಂತ ಚೆನ್ನಾಗಿ ಮನೆಯ ವ್ಯವಸ್ಥೆಯನ್ನು ನೋಡುತ್ತಿದ್ದಳು. ಅವಳ ಮನೆಗೆ ಬಂದವರು ಅವಳು ಮನೆಯ ಯಜಮಾನಿಯನ್ನು ಆಳಿನಂತೆ ತುಚ್ಛತೆಯಿಂದ ಮಾತಾಡಿಸುವದನ್ನು ಕೇಳಿ ಬೆರಗಾಗುತ್ತಿದ್ದರು. ಅದಕ್ಕಾಗಿ ನಿನಗೆ ಹೇಳುತ್ತೇನೆ, ಇವಳಿಗೆ ಹೀಗೆ ಸಲಿಗೆ ಕೊಟ್ಟರೆ ಮುಂದೆ ನಿನಗೇ ಕಷ್ಟವಾಗುವುದು!"

ದುರ್ಗಾಬಾಯಿಯ ಅಮೂಲ್ಯ ಉಪದೇಶ ಕೇಳಿದ ಮನೋರಮೆ ನಿಟ್ಟುಸಿರಿಟ್ಟು 'ಇಷ್ಟೆಲ್ಲ ಅನರ್ಥಕ್ಕೆ ನಿನ್ನ ತುಂಟತನವೇ ಕಾರಣ' ಎಂ-ಬಂತೆ ಚುಚ್ಚುನೋಟದಿಂದ ನನ್ನನ್ನು ನೋಡಿದಳು.

"ಈ ಟ್ರಂಕನ್ನು ಇಳಿಸಿಕೊಡು ಉರಿ."

ದುರ್ಗಾಬಾಯಿಯ ಸುಪುತ್ರಿ ನಾನು ತನ್ನ ಮನೆಯಲ್ಲಿ ಹತ್ತು ವರ್ಷದಿಂದ ದುಡಿಯುತ್ತಿರುವೆನೋ ಎಂಬಂತೆ ನಿರ್ಭಯದಿಂದ ಆಜ್ಞಾಪಿಸಿದಳು. ಸಿಟ್ಟು ಕುದಿಯುತ್ತಿದ್ದರೂ ನನ್ನ ಶಕ್ತಿ-ಪ್ರದರ್ಶನದ ಹಂಬಲ ಗೆದ್ದು ಬೆವರು ಸುರಿಸುತ್ತ ಟ್ರಂಕನ್ನಿಳಿಸಿ ಕುಸಿದು ಕುಳಿತೆ. ಅಬ್ಬ! ದುರ್ಗಾಬಾಯಿ ಅದರಲ್ಲಿ ಕಲ್ಲುಗಳನ್ನು ತುಂಬಿದಂತೆ ಅನಿಸಿತು.

ಒಂದೊಂದೇ ಸ್ಟೇಶನ್ನುಗಳು ಹಿಂದಾಗತೊಡಗಿದವು. ನಾನು ಮಾತ್ರ ಇನ್ನೊಮ್ಮೆ ದುರ್ಗಾಬಾಯಿಯ ಅವಲಕ್ಷಣ ಮುಖ ನೋಡಬಾರದೆಂದು ಪ್ರತಿಜ್ಞೆ ಮಾಡಿದವಳಂತೆ ಮುಖ ತಿರುವಿ ಹೊರಗೆ ನೋಡತೊಡಗಿದೆ. ಸೃಷ್ಟಿಕರ್ತನ ಅಪೂರ್ವ ಹಸಿರು ರತ್ನಗಂಬಳಿಯ ಕೌಶಲ್ಯದ ಕುಸುರುಗಳನ್ನುನೋಡುವದರಲ್ಲಿ ತನ್ಮಯಳಾದೆ. ತಾಯಿಯ ಹಾಲು ಕುಡಿದ ಮಗು ಪ್ರಸನ್ನತೆಯಿಂದ ನಗುವಂತೆ ಹಸಿರುಮುರಿಯುವ ಪೈರು ಆನಂದದಿಂದ ಬಳುಕುತ್ತಿತ್ತು. ಪೂರ್ಣ ಸುಖಿಯಾದ ಮನುಷ್ಯ ಇತರರಿಗೂ ಆನಂದವನ್ನೇ ಹಂಚುವನೆಂಬಂತೆ ತಂಗಾಳಿ ಮನಸ್ಸಿಗೆ ಆಲ್ಹಾದ ವೀಯುತ್ತಿತ್ತು. ಸ್ವಾಮಿಸೇವಕರೆಂಬ ಭೇದಭಾವವಿಲ್ಲದ ಅಪೂರ್ವ ಜಗತ್ತಿನಲ್ಲಿ ಪ್ರಸನ್ನತೆಯಿಂದ ಒಂದಾಗಿ ಹೋದೆ.....

ರೈಲಿನ ವೇಗ ಕಡಿಮೆಯಾಯಿತು. ಇಷ್ಟು ಹೊತ್ತು ನಡೆದುದು ಕನಸೇ ಎಂದು ಅಚ್ಚರಿಗೊಂಡೆ. ಅಬ್ಬ, ಇಂದು ಎಂಥ ಅಪೂರ್ವ ಅನುಭವ ಪಡೆದಿದ್ದೆ ನಾನು! ಹಿಂದಾದುದನ್ನೆಲ್ಲ ರಮ್ಯವಾದ ಕನಸೆಂದು ತಿಳಿಯುವದೇ ಜೀವನ ಎಂದುಕೊಂಡೆ.

ಗಾಡಿ ನಿಂತಾಗ ಇಳಿಯುವವರಿಗಿಂತ ಹತ್ತುವವರ ಆತುರ ಹೆಚ್ಚಾಗಿತ್ತು. ಆದರೆ ನಮ್ಮ ವೀರ ದುರ್ಗಾಬಾಯಿ ಕಿತ್ತೂರಿನ ಚನ್ನಮ್ಮನ ಆವೇಶದಲ್ಲಿ ಬಾಗಿಲಿನ ಬಳಿ ನಿಂತಾಗ ಯಾರಿಗೂ ಒಳಗೆ ಬರುವ ಧೈರ್ಯವಾಗಲಿಲ್ಲ. ಕೊನೆಯ ಸೇವೆಯನ್ನಾದರೂ ಏಕೆ ಬಿಡಬೇಕು ಎಂದುಕೊಂಡು ಅವರ ಸಾಮಾನುಗಳನ್ನಿಳಿಸಲು ನೆರ-ವಾದೆ.

"ಇದೇನು ಊರ್ಮಿಳಾತಾಯಿ, ಎಂಥ ಅಕಲ್ಪಿತ ಭೆಟ್ಟಿಯ ಯೋಗ! ಪುಣೆಯ ವರೆಗೆ ಜತೆಯಾಗುವಿರಲ್ಲವೇ? ಹಾಗಾದರೆ ನಿಶ್ಚಿಂತೆಯಾಯಿತು ಬಿಡಿ. ಇಲ್ಲಿ ನೋಡು ರಾಜು, ಊರ್ಮಿಳಾತಾಯಿ ಜತೆಯಲ್ಲಿದ್ದರೆಂದು ಮನೆಯಲ್ಲಿ ಹೇಳು. ನಿಮ್ಮ ಭೆಟ್ಟಿಯಿಂದ ನನಗೆ ಬಹಳ ಆನಂದವಾಗಿದೆ ಊರ್ಮಿಳಾಬಾಯಿ!"

ಪ್ರೀತಿಯ ಗೆಳತಿ ಸರಲೆಯೆದುರಿಗೆ ನನ್ನ ಈ ದೀನಾವಸ್ಥೆ! ಭೂಮಿ ಬಿರಿದಿದ್ದರೆ ಒಳಿತಾಗುತ್ತಿತ್ತು.

ಎಂದೆನಿಸಿತು.

ಮನೋರಮೆಯು ಕಣ್ಣು ಹನಿಗೂಡಿದ್ದವು. ಸರಲೆ ನೀರು ತರಲು ಲಗುಬಗೆಯಿಂದ ಹೊರಟಳು. ವಿಷಣ್ಣಳಾಗಿ ಕುಳಿತುಕೊಳ್ಳಬೇಕೆನ್ನುವಷ್ಟರಲ್ಲಿ ಯಾರೋ ಕಾಲುಗಳನ್ನು ಹಿಡಿದಂತಾಯಿತು. ಎದುರಿಗೆ ನೋಡಿ ಆಶ್ಚರ್ಯದಿಂದ ತತ್ತರಿಸಿದೆ!

"ನನಗೆ ನಿಮ್ಮ ಗುರುತು ತಿಳಿಯಲಿಲ್ಲ ಊರ್ಮಿಳಾಬಾಯಿ. ಕ್ಷಮಿಸಿರೆಂದು ಯಾವ ಬಾಯಿಯಿಂದ ಕೇಳಲಿ?"

ದುರ್ಗಾಬಾಯಿಯ ದೈನ್ಯರೂಪ ಕಂಡು ಕರುಳು ಹಿಂಡಿದಂತಾಯಿತು. ಆದರೆ ಇಷ್ಟು ಹೊತ್ತಿನಿಂದ ತಿಂದ ಚಾಟಿಯೇಟನ್ನು ಇಷ್ಟು ಬೇಗ ಮರೆಯಲು ಅಭಿಮಾನಿ ಮನಸ್ಸು ಸಿದ್ಧವಿರಲಿಲ್ಲ.

"ನನಗೊಂದು ಉಪಕಾರ ಮಾಡಬೇಕು ಊರ್ಮಿಳಾಬಾಯಿ. ಈ ಕೆಲಸವಾದರೆ ನಿಮ್ಮಿಂದಲೇ ಆಗುವದೆಂದು ನಂಬಿದ್ದೇನೆ. ಸರಲಾಬಾಯಿಯ ಅಣ್ಣನಿಗೆ ನಮ್ಮ ಸುಲೋಚನೆಯನ್ನು ತೋರಿಸಿದ್ದೇವೆ. ನೀವು ನಿಮ್ಮ ಗೆಳತಿಗೆ ಹೇಳಿ ನನ್ನ ಚಿಂತೆಯನ್ನು ದೂರ ಮಾಡಬೇಕು ಊರ್ಮಿಳಾಬಾಯಿ. ಇಂದಿನ ದಿನವನ್ನು ಎಂದೂ ಮರೆಯಲಾರೆ. ನೀವು ನನ್ನನ್ನು ಕ್ಷಮಿಸುವವರೆಗೆ ನಾನು ನಿಮ್ಮ ಕಾಲು ಬಿಡುವದಿಲ್ಲ. ನಿಮಗೆ ನನ್ನ ಮೇಲೆ ಎಷ್ಟೇ ಕೋಪವಿದ್ದರೂ ನನ್ನ ಮಗಳಿಗಾಗಿ ಇಷ್ಟು ಪ್ರಯತ್ನ ಮಾಡಲು ನಿಮ್ಮನ್ನು ಬೇಡಿಕೊಳ್ಳುತ್ತೇನೆ."

ನಾನು ಭಾವನಾವಶಳಾಗಿ ದುರ್ಗಾಬಾಯಿಯನ್ನು ನೋಡುತ್ತಿದ್ದೆ. ಅವರ ಮಾತಿನಿಂದ ನನ್ನ ದುರಭಿಮಾನ ಕಣ್ಮರೆಯಾಗಿ ಮನಸ್ಸು ತಿಳಿಯಾಗಿತ್ತು. ಮಗಳಿಗಾಗಿ ತನ್ನ ಸ್ವಾಭಾವಿಕ ಅಹಂಕಾರವನ್ನು ಕೂಡ ತ್ಯಜಿಸುವ ತಾಯಿಯನ್ನು ನಾನೀಗ ನೋಡುತ್ತಿದ್ದೆ. ಗಾಳಿಗೆ ಚದರುವ ಮೋಡಗಳಂತೆ ಕಟು ಅನುಭವಗಳು ಚದರಿ ಹೋದವು.

"ನೀವು ಹಿರಿಯರು ದುರ್ಗಾಬಾಯಿ. ಚಿಕ್ಕವರನ್ನು ದಂಡಿಸುವ ಅಧಿಕಾರ ನಿಮಗಿದೆ. ನನ್ನಿಂದಾದಷ್ಟು ಪ್ರಯತ್ನಿಸುತ್ತೇನೆ. ಮನಃಪೂರ್ವಕವಾಗಿ ನಾನು ಯಾರಿಗೂ ಕೇಡು ಬಗೆಯಲಾರೆ. ನನ್ನಿಂದ ಈ ಕಾರ್ಯ ಸಾಧ್ಯವಾದರೆ ನನಗೂ ಆನಂದವಾಗುವದು. ನೀವು ನಿಶ್ಚಿಂತರಾಗಿರಿ." ✱



ಮೆಡಗಾಸ್ಕರ್ ದ್ವೀಪದ ಅಂಟನ ಲಾಸ್ ಎಂಬ ಜನಾಂಗ ಎಡಚರ ಜನಾಂಗವಾಗಿದೆ. ಒಟ್ಟು ೧,೦೦,೦೦ ಅಂಟನ ಲಾಸ್ ಜನರ ಪೈಕಿ ಒಬ್ಬನೇ ಒಬ್ಬನಿಗೆ ಕೂಡ ಬಲಗೈಯನ್ನುಪಯೋಗಿಸುವ ಅಭ್ಯಾಸವಿಲ್ಲ.

—ರವೀಂದ್ರನಾಥ ಎಸ್. ಬಿ. ಶ್ರವಣಬೆಳಗೊಳ

* * *

ಜಟೆಗಳನ್ನು ಬಿಟ್ಟರೇನು? ನೆಲದ ಮೇಲೆ ಮಲಗಿದರೇನು? ಧೂಳು ಬಳಿದುಕೊಂಡರೇನು? ಆಸೆಗಳನ್ನು ಬಿಡದಾತ ಶುದ್ಧನಾಗಲಾರ.

—ಭಗವಾನ್ ಬುದ್ಧ

—ಸಂಗ್ರಹ: ವಿ. ವಿ. ಷಡಕ

## ‘ಗೃಹ ನಿರ್ವಹಣೆಯಲ್ಲಿ ಹೊಸ ಕ್ರಮಗಳೆ?’

ಎಂದು ನವ ದೆಹಲಿಯಲ್ಲಿರುವ ಸೆಕ್ರೆಟರಿ
ಶ್ರೀಮತಿ ಚಂದರ್ ಮೋಹಿನಿ ಸರೀನ್ ಕೇಳುತ್ತಾರೆ.






‘ನಿಮ್ಮ ಗೃಹನಿರ್ವಹಣೆಗೆ ಹೊಸ ಕ್ರಮಗಳು ಸರಿಯಾಗಿವೆಯೇ ಎಂದು ನೀವು ಪರೀಕ್ಷಿಸಿ ನೋಡಬೇಕು.’ ಎಂದು ಅವರು ಹೇಳುತ್ತಾರೆ. ಶ್ರೀಮತಿ ಸರೀನ್ ಸರ್ಫ್‌ನ ‘ಒಗೆಯುವ ಅಧಿಕ ಶಕ್ತಿ’ ಬಟ್ಟೆಗಳಿಗೆ ಉಜ್ಜ್ವಲ ಬಿಳುಪನ್ನು ಕೊಡುತ್ತದೆಂದು ಮನಗಂಡಿದ್ದಾರೆ. ‘ಎನು ನೊರೆ! ಮುಗ್ಗಲಾಸಿಗೆ, ಫ್ರಾಕ್, ಇಜಾರು ಇತ್ಯಾದಿ ಎಲ್ಲ ಬಟ್ಟೆಗಳನ್ನು ಒಗೆಯಲು ನಾನು ಸರ್ಫನ್ನೇ ಉಪಯೋಗಿಸುತ್ತೇನೆ.’

## ಸರ್ಫ್ ನಿಮ್ಮ ಬಟ್ಟೆಗಳಿಗೆ ಅನುಪಮ ಬಿಳುಪು ಬರುವಂತೆ ಒಗೆಯುತ್ತದೆ

ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ

SU.20-X29 KN




ಕ್ಯಾನರಿ ದ್ವೀಪಗಳ ವಿಚಿತ್ರ ಸಂಪರ್ಕ ವಿಧಾನ

# ಅವರು ಸಿಳ್ಳಿನ ಭಾಷೆ ಮಾತಾಡುತ್ತಾರೆ!

"ಸ್ವಾನ್ ವ್ಯಾಕ್" ಪತ್ರಿಕೆಯಿಂದ

ಕ್ಯಾನರಿ ದ್ವೀಪಗಳಲ್ಲಿ ಅಲ್ಲಿಯ ಪ್ರಾಕೃತಿಕ ಆತಂಕ-ಅಡ್ಡಿಗಳ ಮೂಲಕ ಸಾರಿಗೆ-ಸಂಪರ್ಕದ ಸಾಧನಗಳು ತೀರ ವಿರಳವಾಗಿವೆ. ಆದರೆ ಆ ನಡುಗಡ್ಡೆಗಳಲ್ಲಿ ವಾಸಿಸುತ್ತಿರುವ ಒಂದು ಜನಾಂಗದವರು ಈ ಅಡಚಣಿಯನ್ನು ಅತ್ಯಂತ ಕುಶಲತೆಯಿಂದ ನಿವಾರಿಸಿಕೊಳ್ಳುತ್ತಿದ್ದಾರೆ. ಅತಿ ಆಳವೂ ಅಗಲವೂ ಆಗಿರುವ ಅಗಳವೊಂದರ ಆಚೆ ಈಚೆಯ ಗುಡ್ಡಗಳ ಮೇಲೆ ನಿಂತು ಅವರು ಪರಸ್ಪರ ಸಿಳ್ಳಿನ ಮೂಲಕ ಸಂಭಾಷಿಸುವರು. ಸಿಳ್ಳಿನ ಸ್ವರದ ಏರಿಳಿತ ಬದಲಾವಣೆ ಇತ್ಯಾದಿಗಳ ಮೂಲಕ ಈ ಜನ ಪರಸ್ಪರರಿಗೆ ಸುದ್ದಿ ತಿಳಿಸಬಲ್ಲರು; ಸುಖದುಃಖದ ಹರಟೆ ಹೊಡೆಯಬಲ್ಲರು.

ಆಫ್ರಿಕದ ಉತ್ತರ ಅಟ್ಲಾಂಟಿಕ್ ದಂಡೆಯಲ್ಲಿರುವ ಕ್ಯಾನರಿ ನಡುಗಡ್ಡೆಗಳ ಗುಂಪಿನಲ್ಲಿ ಲಾ ಗೋಮೇರಾ ಒಂದು ನಡುಗಡ್ಡೆ. ಸಿಳ್ಳಿನ ಮೂಲಕ ಸಂಭಾಷಣೆ ಗೈಯಬಲ್ಲ ಜನ ಇರುವುದು ಈ ಲಾ ಗೋಮೇರಾದಲ್ಲಿ. ಟೆನೆರಿಫೆಯಿಂದ ಹದಿಮೂರು ಮೈಲು ಅಗಲದ ಕಾಲುವೆಯಿಂದ ಪ್ರತ್ಯೇಕಿಸಲ್ಪಟ್ಟಿರುವ ಲಾಗೋಮೇರಾ ಸುಮಾರು ೨೩ ಮೈಲು ಉದ್ದ, ಅತಿ ಅಗಲವಿರುವಲ್ಲಿ ೧೦ ಮೈಲು ಅಗಲವಾದ ಪ್ರದೇಶವಾಗಿದೆ. ಲಾ ಗೋಮೇರಾದಲ್ಲಿ ಆಳವಾದ ಕಂದರಗಳಿವೆ. ಜ್ವಾಲಾಮುಖಿಗಳ ಪರಿಣಾಮವಾಗಿ ಲಾ ಗೋಮೇರಾ ಇಂಥ ತಗ್ಗು ದಿನ್ನೆಗಳ ನಾಡಾಗಿದೆ ಎನ್ನುತ್ತಾರೆ ಭೂಗೋಲ ಶಾಸಜ್ಞರು.

೧೩೩೪ ರಲ್ಲಿ ಒಂದು ಫ್ರೆಂಚ್ ಹಡಗ ಕ್ಯಾನರಿ ನಡುಗಡ್ಡೆಗಳನ್ನು ಕಂಡುಹಿಡಿಯಿತು ಎನ್ನು

ತ್ತಾರೆ. ಗ್ರೀಕ ಪುರಾಣಗಳಲ್ಲಿ ಉಲ್ಲೇಖಿಸಲ್ಪಟ್ಟಿರುವ "ಬ್ಲೆಸ್ಡ್" ನಡುಗಡ್ಡೆಗಳೇ ಇವು ಎಂದು ಮೊದಮೊದಲಿನ ಭೂಗೋಲ ಶಾಸ್ತ್ರಜ್ಞರು ನಂಬಿದ್ದರು. ಲ್ಯಾಟಿನ್ ಭಾಷೆಯಲ್ಲಿ "ಕ್ಯಾನಿಸ್" ಎಂದರೆ ನಾಯಿ ಎಂದು ಅರ್ಥ. ಈ ನಡುಗಡ್ಡೆಗಳಲ್ಲಿ ಅತಿ ದೊಡ್ಡದಾಗಿರುವ ಟಿನೆರಿಫೆ ನಾಯಿಯ ಮುಖದಂತಿರುವುದರಿಂದ "ಕ್ಯಾನರಿ" ಎಂಬ ಹೆಸರು ಬಂದಿತು ಎಂಬ ವಾದವಿದೆ. ಇನ್ನು ಕೆಲವರು ಈ ನಡುಗಡ್ಡೆಗಳಲ್ಲಿದ್ದ ಅಸಂಖ್ಯ ದೊಡ್ಡ ದೊಡ್ಡ ನಾಯಿಗಳ ಮೂಲಕ ಈ ಹೆಸರು ಬಂತೆಂದು ಅನ್ನುತ್ತಾರೆ. ರೋಮನ್ನರ ಪ್ರಭಾವ ಇಲ್ಲಿ ಕಂಡುಬರುವುದರಿಂದ ರೋಮನ್ನರಿಗೆ ಗೊತ್ತಿದ್ದ "ಇನಸುಲೆ ಫಾರ್ಚುನೇಟ್" ನಡುಗಡ್ಡೆಗಳಿವು ಎಂದು ಅನೇಕರ ಅಂಬೋಣವಿದೆ. ಸುಂದರವಾಗಿ ಹಾಡುವ ಕ್ಯಾನರಿ ಹಕ್ಕಿಗಳಿಗಾಗಿ ಈ ನಡುಗಡ್ಡೆಗಳು ಪ್ರಸಿದ್ಧವಿದ್ದರೂ ಈ ಹಕ್ಕಿಗಳ ಮೂಲಕ ಈ ನಡುಗಡ್ಡೆಗಳಿಗೆ ಹೆಸರು ಬಂದಿರದೆ ನಡುಗಡ್ಡೆಯ ಹೆಸರೇ ಹಕ್ಕಿಗಳಿಗೆ ಬಂತೆಂದು ತಜ್ಞರ ಅಭಿಪ್ರಾಯವಿದೆ.

ಫ್ರೆಂಚರು ತಮ್ಮದೆಂದು ಹೇಳುತ್ತಿದ್ದರೂ ೧೪೯೬ ರಲ್ಲಿ ಈ ನಡುಗಡ್ಡೆಗಳೆಲ್ಲ ಸ್ಪೇನಿನ ಆಧೀನಕ್ಕೆ ಒಳಗಾದವು. ಸ್ವಾಮಿತ್ವದ ಈ ಹೋರಾಟದಲ್ಲಿ ನಡುಗಡ್ಡೆಗಳ ಮೂಲನಿವಾಸಿಗಳಾದ ಗಾಂಚೆ ಜನರು ತುಂಬಾ ಕಷ್ಟ-ನಷ್ಟನಳಿಗೆ ಗುರಿಯಾದರು.

ಈ ಸಮಯದಲ್ಲಿ ಸ್ಪಾನಿಶ್ ಜನರಿಗೆ ಗಾಂಚೆ ಜನರು ಉಪಯೋಗಿಸುತ್ತಿದ ಸಿಳ್ಳಿನ ಭಾಷೆಯ ಪರಿಚಯವಾಯಿತು. ಸ್ಪಾನಿಶ್ ಭಾಷೆಯಲ್ಲಿ ಇದನ್ನು 'ಸಿಲ್ಬೊ' ಎಂದು ಕರೆಯುತ್ತಾರೆ.

ಈ ಜನ ಸಂಭಾಷಣೆಗಾಗಿ ಇಂಥ ವಿಚಿತ್ರ ಪದ್ಧತಿಯನ್ನೇಕೆ ಬಳಸುತ್ತಿದ್ದರು? ೧೬ ನೆಯ ಶತಮಾನದ ಒಬ್ಬ ಇತಿಹಾಸಕಾರನು "ಲಾ ಗೋಮೆರಾ ನಡುಗಡ್ಡೆಯ ಜನ ನಾಲಿಗೆಯೆ ಇಲ್ಲದವರಂತೆ ತುಟಿಗಳಿಂದ ಮಾತಾಡುತ್ತಾರೆ. ರಾಜನೊಬ್ಬ ಇವರನ್ನು ನಿಷ್ಕಾರಣವಾಗಿ ಗಡೀಪಾರು ಮಾಡಿ ಇವರ ನಾಲಿಗೆಗಳನ್ನೇ ಕತ್ತರಿಸಿ ಹಾಕಿಸಿದ್ದ" ಎಂದು ಬರೆದಿದಾನೆ. ಆದರೆ ಸಿಲ್ಬೊ ಭಾಷೆ ಬಳಕೆಗೆ ಬರಲು ಈ ನಡುಗಡ್ಡೆಗಳ ವಿಶೇಷತಃ ಲಾ ಗೋಮೇರಾದ ಕಠಿಣ ಪ್ರಾಕೃತಿಕ ಸ್ವರೂಪವೇ ಕಾರಣವೆಂಬ ಮಾತು ಹೆಚ್ಚು ಸಮರ್ಪಕವೆನಿಸುತ್ತದೆ.

ಇತ್ತೀಚಿನ ಶತಮಾನಗಳಲ್ಲಿ ಗಾಂಚೆ ಜನಾಂಗ ನಿದಾನವಾಗಿ ಅಳಿದುಹೋಗಿದ್ದರೂ ಸಿಳ್ಳಿನ ಭಾಷೆ ಉಳಿದುಕೊಂಡಿದೆ. ಇಂದು ಲಾ ಗೋಮೇರಾದ ಜನ ನಿತ್ಯ ವ್ಯವಹಾರದಲ್ಲಿ ಸಿಲ್ಬೊ ಮತ್ತು ಕ್ಯಾಸ್ಟಿಲಿಯನ್ ಸ್ಪಾನಿಶ್ (ಈ ನಡುಗಡ್ಡೆಗಳನ್ನು ಗೆದ್ದ ಸ್ಪೇನಿನವರ ಭಾಷೆ) ಭಾಷೆಗಳೆರಡನ್ನೂ ಉಪಯೋಗಿಸುತ್ತಾರೆ. ಫಲವತ್ತಾದ, ಗಿಡಮರಗಳುಳ್ಳ ಕಣಿವೆ ಪ್ರದೇಶದಲ್ಲಿ ಬಟಾಟೆ, ಸಕ್ಕರೆ, ಅರಳೆ, ಹಣ್ಣು ಹಂಪಲುಗಳನ್ನು ಬೆಳೆಯುವ ಲಾ ಗೋಮೇರಾ ಜನರು ಸ್ಪಾನಿಶ್ ಭಾಷೆಯಲ್ಲಿ ಮಾತಾಡಬಲ್ಲವರಾಗಿದ್ದಾರೆ. ಉತ್ತಮ ಬಂದರವಾದ ಸಾನ್ ಸೆಬಾಸ್ಟಿಯನ್‌ನಲ್ಲಿ ಹಡಗುಗಳ ಮೇಲೆ ಕೆಲಸ ಮಾಡುವವರು, ಸಮುದ್ರ ತೀರದಲ್ಲಿ ವಾಸಿಸುವ ಮೀನುಗಾರರಿಗೆ ಸಿಲ್ಬೊ ಭಾಷೆಯ ಅಗತ್ಯವಿರುವುದಿಲ್ಲ. ಏಕೆಂದರೆ ಅವರ ಮನೆಮಾರುಗಳು ಸಮಿಸಮೀಪವಾಗಿವೆ.

ಆದರೆ ನಡುಗಡ್ಡೆಯ ಪರ್ವತಮಯ ಒಳನಾಡಿನಲ್ಲಿ ಹರಡಿರುವ ಹಳ್ಳಿಗಳಲ್ಲಿರುವ ರೈತರಿಗೆ ಅನಗತ್ಯವಾದ ಪ್ರವಾಸವನ್ನು ತಪ್ಪಿಸಿಕೊಳ್ಳಲು ಇರುವ ಸಾಧನವೆಂದರೆ ಸಿಲ್ಬೊ ಭಾಷೆ ಒಂದೇ. ಲಾ ಗೋಮೇರಾದಲ್ಲಿ ರೇಲ್ವೆಗಳಿಲ್ಲ. ರಾಜಧಾನಿ ಸಾನ್‌ಸೆಬಾಸ್ಟಿಯನನ್ನು ಇನ್ನುಳಿದ ಮೂರು ಮುಖ್ಯ ಪಟ್ಟಣಗಳಿಗೆ ಜೋಡಿಸುವ ರಸ್ತೆಗಳನ್ನು ಬಿಟ್ಟರೆ ಹೇಳಿಕೊಳ್ಳುವಂಥ ಒಂದೂ ರಸ್ತೆ ಇಲ್ಲ. ಬಡವರಾಗಿರುವ ಈ ಜನರಿಗೆ ಟೆಲಿಫೋನ್ ಎಟುಕದ ಮಾತು. ಆದ್ದರಿಂದ ಇಲ್ಲಿ ಸಾರಿಗೆ-ಸಂಪರ್ಕವೆನ್ನುವುದು ಒಂದು ಸಮಸ್ಯೆಯಾಗಿದೆ.

ಹೀಗಿರುವಾಗ ಒಂದು ಆಳವೂ ಅಗಲವೂ

ಆದ ಕಂದಕದ ಆಚೆ ಈಚೆ ಇರುವ ನೆರೆಹೊರೆಯವರು ಪರಸ್ಪರ ಸುಖದುಃಖದ, ವ್ಯವಹಾರದ ಮಾತುಗಳನ್ನಾಡಿಕೊಳ್ಳುವುದು ಹೇಗೆ? ಕಂದಕದ ಆಚೆ ಈಚೆಯ ಗುಡ್ಡದ ತುದಿಯ ಮೇಲೆ ನಿಂತಾಗ ಇವರು ಕೆಲವೇ ನೂರು ಯಾರ್ಡುಗಳ ಅಂತರದಲ್ಲಿದ್ದರೂ ಗುಡ್ಡದ ಇಳಿಜಾರಿನಲ್ಲಿರುವ ಅಂಕುಡೊಂಕಾದ ಕಾಲು ಹಾದಿಯಿಂದ ಕಂದಕದಲ್ಲಿಳಿದು ಆಚೆ ಬದಿಯಲ್ಲಿ ಮತ್ತೆ ಅದೇ ರೀತಿಯಾಗಿ ಗುಡ್ಡದ ತುದಿಗೇರುವುದೆಂದರೆ ಕೆಲವಾರು ತಾಸುಗಳೇ ಬೇಕಾಗುತ್ತವೆ.

ಇಲ್ಲಿ ಈ ಜನರಿಗೆ ಕ್ಯಾನರಿ ನಡುಗಡ್ಡೆಗಳ ಮೂಲನಿವಾಸಿಗಳಾಗಿದ್ದ ಗಾಂಚೆ ಜನರ ಸಿಲ್ಬೊ ಭಾಷೆ ಸಹಾಯಕ್ಕೆ ಬರುತ್ತದೆ. ತುಂಬ ಆಲಸಿಗಳಾಗಿದ್ದರೂ ಪ್ರೇಮಮಯರಾಗಿದ್ದ ಜನ ಈ ಭಾಷೆಯನ್ನು ಶೋಧಿಸಿರಬೇಕು ಎಂದೆನಿಸುವುದಾದರೂ ಸಿಲ್ಬೊ ಅಂದರೆ ಸಾಮಾನ್ಯ ಸಿಳ್ಳೇನೂ ಅಲ್ಲ. ನೈಟಿಂಗೇಲ್ ಹಕ್ಕಿಯ ಹಾಡಿನಂತೆ ಈ ಸಿಳ್ಳು ಸ್ಪಷ್ಟವೂ ಕಂಪನವನ್ನುಳ್ಳದ್ದೂ ಆಗಿರುತ್ತದೆ ಎಂದು ಲಾ ಗೋಮೇರಾಕ್ಕೆ ಹೋಗಿ ಬಂದವರು ಹೇಳುತ್ತಾರೆ. ಹಕ್ಕಿಯಂತೆ ಸಿಲ್ಬಾಡೋರರು (ಸಿಲ್ಬಾ ಭಾಷೆ ಬಳಸುವವರು) ಸಿಳ್ಳಿನಲ್ಲಿ ನಾನಾವಿಧದ ಬದಲಾವಣೆಗಳನ್ನು ಮಾಡಬಲ್ಲರು. ಕೆಲವು ಸಲ ಅದು ಮೃದುವಾಗಿ ಇಂಪಾಗಿರುವುದಾದರೆ, ಕೆಲವು ಸಲ ಸಂತೋಷ ಸೂಚಕವಾಗಿದ್ದರೆ, ಕೆಲ ಸಲ ಕರ್ಕಶವಾಗಿ ಕೋಪವನ್ನು ಪ್ರದರ್ಶಿಸುತ್ತದೆ.

ಇಷ್ಟೊಂದು ದೂರ ವರೆಗೆ ಗಾಳಿಯ ಸದ್ದನ್ನು ಅಡಗಿಸಿ ತಲುಪಲು ಈ ಸಿಳ್ಳಿನ 'ಪಿಚ್' ಕಾರಣ. ಗಾಳಿಯಿರದ ದಿನವಾದರೆ ಸಿಲ್ಬಾಡೋರ ಸಿಳ್ಳಿನ ಮೂಲಕ ಮೂರು ಮೈಲು ಆಚೆ ಇರುವವನೊಡನೆ ಸುಲಭವಾಗಿ ಸಂಭಾಷಿಸಬಲ್ಲ. ಒಮ್ಮೆಯಂತೂ ಸಿಲ್ಬೊ ಸಂದೇಶ ಎಂಟು ಮೈಲಿಯಾಚೆ ಕೇಳಿಸಿದ್ದುಂಟು.

ಲಾ ಗೋಮೇರಾದ ನೆರೆಹೊರೆಯವರು ಮಾತಾಡಿಕೊಳ್ಳುವುದು ಈ ರೀತಿಯಲ್ಲಿ. ಗುಡ್ಡಗಳ ಮೇಲೆ ಏಕಾಂಗಿಯಾಗಿ ಕುರಿ-ಆಡುಗಳನ್ನು ಮೇಯಿಸುವವರು ಇನ್ನೊಬ್ಬ ಕುರಿಗಾಹಿಯೊಡನೆಯೊ, ಕೆಳಗೆ ದೂರದಲ್ಲಿ ತಮ್ಮ ಮನೆಯಲ್ಲಿರುವ ಹೆಂಡಂದಿರೊಡನೆಯೊ ಹರಟೆ ಹೊಡೆಯಬಲ್ಲರು. ದೂರದಲ್ಲಿ ಕೆಲಸ ಮಾಡುವ ಆಳುಗಳಿಗೆ ರೈತ ಸೂಚನೆಗಳನ್ನು ಕೊಡಬಲ್ಲ. ಅವನ ಹೆಂಡತಿ ಮನೆಯ ಬಾಗಿಲಿನಲ್ಲಿ ನಿಂತುಕೊಂಡು ಆಚೆ ಗುಡ್ಡದ ಮೇಲಿನ ಹಳ್ಳಿಯಲ್ಲಿರುವ ತನ್ನ ನೆರೆಯಾಕೆಗೆ "ಕೇಳಿದೆಯೇನೇ, ನಮ್ಮ ಮೇರಿ ಹಡೆದಳು. ಮಗು ೮ ಪೌಂಡು ತೂಕವಿದೆ" ಎಂದು ತಿಳಿಸಬಲ್ಲಳು. ಈ ಜನರಿಗೆ ಸಿಲ್ಬೊ ದೂರ ಮತ್ತು ಸಮಯವನ್ನು ಗೆದೆಯುವ ಒಂದು ಸಾಧನವಾಗಿದೆ.

ಸಿಲ್ಬೊ ಭಾಷೆಯಲ್ಲಿ ಮಾತಾಡುವಾಗ ಸಿಲ್ಬಾಡೋರ್ ತನ್ನ ತುಟಿ, ನಾಲಿಗೆ ಮತ್ತು ಕೈಬೆರಳುಗಳನ್ನು ಉಪಯೋಗಿಸುತ್ತಾನೆ. ಪ್ರತಿಯೊಬ್ಬನೂ ಇವನ್ನು ಉಪಯೋಗಿಸುವ ತಂತ್ರ ಅವನವನದೇ ಆಗಿರುತ್ತದೆ. ಬೆರಳುಗಳನ್ನು ಬಾಯ ಮೂಲೆಯಲ್ಲಿಟ್ಟುಕೊಂಡು, ನಾಲಿಗೆಯನ್ನು ಹಲ್ಲುಗಳಿಗೆ ಅಂಟಿಸಿ ಆತ ಸಿಳ್ಳು ಹಾಕತೊಡಗುತ್ತಾನೆ. ಮಾತಾಡುವ ರೀತಿಯಲ್ಲೆ ಸಿಳ್ಳಿನಲ್ಲಿ ಶಬ್ದಗಳನ್ನು ನುಡಿಸುತ್ತಾ ಹೋಗುತ್ತಾನೆ.

ಸಿಲ್ಬೊಕ್ಕೆ ಸ್ಪಾನಿಶ್ ಭಾಷೆ ಅತಿ ಉಪಯುಕ್ತವಾಗಿದೆ. ಸ್ಪಾನಿಶ್ ಶಬ್ದಗಳನ್ನೆಲ್ಲ ಸಿಲ್ಬೊನಲ್ಲಿ ನುಡಿಸಬಹುದು. ಕೆಲ ಸಿಲ್ಬಾಡೋರರು ಕೈಗಳನ್ನು ಮೆಗಾಫೋನಿನಂತೆ ಉಪಯೋಗಿಸುವರಾದರೂ ಒಬ್ಬ ಸಿಲ್ಬಾಡೋರನೂ ಸಿಳ್ಳಿನ ಸಂದೇಶ ಕಳಿಸುವಾಗ ಕೈ ಬೆರಳುಗಳನ್ನಾಗಲಿ ತುಟಿಗಳನ್ನಾಗಲೀ ಅಲ್ಲಾಡಿಸುವುದಿಲ್ಲ. ನಾಲಿಗೆ ಮತ್ತು ಗದ್ದಗಳ ಚಲನವಲನವನ್ನಷ್ಟೆ ಆತ ಅವಲಂಬಿಸುತ್ತಾನೆ.

ಸಿಲ್ಬೊ ಸಂದೇಶ ಕಳಿಸುವಾಗ ಸಿಲ್ಬಾಡೋರ್ ಮೊದಲಿಗೆ "ಆಹ-ಹ-ಹ-ಹ" ಎಂಬ ಸೂಚಕ ಶಬ್ದವನ್ನು ನುಡಿಸುತ್ತಾನೆ. ಆಗ ಸಿಳ್ಳು ಕೇಳಿ ಬರುವ ಅಂತರದಲ್ಲಿದ್ದವರೆಲ್ಲ ಸಂದೇಶ ಸ್ವೀಕಾ-

ರಕ್ಕಾಗಿ ಸಿದ್ಧರಾಗುತ್ತಾರೆ. ಸಿಲ್ಬೊ ಭಾಷಿಕರಿಗೆ ಕಿವಿ ಅತ್ಯಂತ ಚುರುಕಾಗಿರುವುದಲ್ಲದೆ ಅವರ ಸುಪ್ತ ಮನಸ್ಸು ಈ ಸಂಕೇತ ಸ್ವೀಕರಿಸಲು ಸದಾ ಸಿದ್ಧವಾಗಿರುತ್ತದೆ. ಸಂಪರ್ಕದ ಸುಲಭ ಸಾಧನ ಇದೊಂದೇ ಆಗಿರುವುದರಿಂದ ಜನ ಯಾವಾಗಲೂ ಅದರತ್ತ ಲಕ್ಷ್ಯವಿಟ್ಟುಕೊಂಡೇ ಇರುತ್ತಾರೆ.

ಸ್ಪಾನಿಶ್ ಭಾಷೆ ಬಲ್ಲವರೆಲ್ಲರೂ ಸಿಲ್ಬೊವನ್ನು ಸುಲಭವಾಗಿ ಕಲಿಯಬಲ್ಲರು ಎಂದು ಲಾ ಗೋ-ಮೇರಾ ಜನ ಹೇಳುತಾರೆ. ಅವರ ಮಕ್ಕಳಿಗೆ ಈ ಭಾಷೆ ಸಹಜವಾಗಿ ಬಂದುಬಿಡುತ್ತದೆ. ೮-೯ ವರ್ಷದವರಾಗುವಷ್ಟು ಹೊತ್ತಿಗೆ ಮಕ್ಕಳಿಗೆ ಈ ಭಾಷೆ ಬಹುಮಟ್ಟಿಗೆ ಅರ್ಥವಾಗತೊಡಗುತ್ತದೆ. ೧೨ ವರ್ಷದ ಮಕ್ಕಳು ತಜ್ಞರಾಗಿ ಸಿಲ್ಬೊ ಸಂದೇಶವನ್ನು ಯಥಾವತ್ತಾಗಿ ಗ್ರಹಿಸಿಕೊಳ್ಳುತ್ತಾರೆ. ಸಾಕಷ್ಟು ಹಲ್ಲುಗಳು ಬಾಯಲ್ಲಿ ಉಳಿದಿದ್ದರೆ ಮುದುಕರು ಕೂಡ ಈ ಭಾಷೆಯನ್ನು ಕಲಿಯಬಲ್ಲರು. ಚೆನ್ನಾಗಿ ಗಟ್ಟಿಯಾಗಿ ಸಿಳ್ಳು ಹಾಕಬಲ್ಲ, ಚೆನ್ನಾಗಿ ಸ್ಪಾನಿಶ್ ಮಾತಾಡಬಲ್ಲ ಬುದ್ಧಿವಂತನು ಒಂದೇ ದಿನದಲ್ಲಿ ಸಿಲ್ಬೊ ಕಲಿಯಬಲ್ಲ ಎಂದು ಸಿಲ್ಬೊ ಭಾಷೆಯನ್ನು ಅಭ್ಯಾಸ ಮಾಡಿರುವ ಮಾನವಶಾಸ್ತ್ರಜ್ಞರು ಹೇಳು-ತ್ತಾರೆ.

ಕೆಲ ಸಲ ಸಿಲ್ಬೊ ಭಾಷೆ ವಿಚಿತ್ರ ಸನ್ನಿವೇಶಗಳನ್ನು ಕಲ್ಪಿಸುವುದೂ ಉಂಟು. ಹಕ್ಕಿಗಳು ಸಿಲ್ಬೊ ಭಾಷೆಯನ್ನು ಕಲಿಯಬಲ್ಲವಾದ್ದರಿಂದ ಗೊಂದಲವುಂಟಾಗುವುದೂ ಇದೆ. ಲಾ ಗೋಮೇರಾಕ್ಕೆ ಹೋದ ಒಬ್ಬಾತ ನಡುಗಡ್ಡೆಯ ಪರ್ವತವೊಂದರಲ್ಲಿ ಶೋಧ ಕಾರ್ಯ ನಡೆಸುತ್ತಿದ್ದಾಗ ಅವನ ಕಿವಿಗೆ ಹಠಾತ್ತಾಗಿ "ಆಹ-ಹ-ಹ-ಹ! ಅಲ್ಫಾನ್ಸೊ, ಅಲ್ಫಾನ್ಸೊ" ಎಂಬ ಧ್ವನಿ ಕೇಳಿಸಿತು. ಹಾಗೆ ಸಿಳ್ಳು ಹಾಕಿದ್ದು ಒಂದು ಹಕ್ಕಿಯಾಗಿತ್ತು. ಕೆಲ ನಿಮಿಷಗಳಲ್ಲಿ ಅಲ್ಲಿ ಹತ್ತಾರು ಹಕ್ಕಿಗಳು ನೆರೆದು "ಅಲ್ಫಾನ್ಸೊ, ಫ್ರೆಡ್ರಿಕೊ, ಫಿಲಿಪ್" ಎಂದು ಮುಂತಾಗಿ ಸಿಲ್ಬೊ ಭಾಷೆಯಲ್ಲಿ ಒದರತೊಡಗಿದವು.

ಸ್ಪೇನು ಕ್ಯಾನರಿ ನಡುಗಡ್ಡೆಗಳನ್ನು ವಶಪಡಿಸಿಕೊಂಡ ನಂತರ ಲಾ ಗೋಮೇರಾವನ್ನು ಬಿಟ್ಟು ಉಳಿದ ಭಾಗಗಳಲ್ಲಿ ಸಿಲ್ಬೊ ಬಳಕೆ ಕಡಿಮೆಯಾಗಿದೆ. ಲಾ ಗೋಮೇರಾದಲ್ಲಿ ದಾಟಲು ಬಾರದ ಕಂದಕಗಳು ತುಂಬಿರುವುದೇ ಇದಕ್ಕೆ ಮುಖ್ಯ ಕಾರಣವಾಗಿದೆ. ಇತರ ಕಡೆಗಳಲ್ಲಿ ರಸ್ತೆಗಳು ಆಗುತ್ತಿರುವುದು, ಅಂಚೆ-ತಂತಿ ಸಂಪರ್ಕವೇರ್ಪಡುತ್ತಿರುವುದೂ ಕಾರಣವಾಗಿವೆ.

ಲಾ ಗೋಮೇರಾದಲ್ಲಿ ಸಿಲ್ಬೊ ಭಾಷೆಯ ಪ್ರತಾಪ ಎಷ್ಟಿದೆಯೆನ್ನುವುದು ಒಂದು ಉದಾಹರಣೆಯಿಂದ ತಿಳಿಯುವಂತಿದೆ. ಒಮ್ಮೆ ಒಬ್ಬ ಕರವಸೂಲಿಗಾರ ಗುಡ್ಡಗಳಲ್ಲಿರುವ ರೈತರಿಂದ ತೆರಿಗೆ ವಸೂಲಿ ಮಾಡಲೆಂದು ಸಾನ್ ಸೆಬಾಸ್ಟಿಯನ್‌ಗೆ ಬಂದ. ಆತ ಒಂದು ಕತ್ತೆಯನ್ನು ಬಾಡಿಗೆಗೆ ತೆಗೆದುಕೊಂಡು ತನ್ನ ಕಠಿಣಸಾಧ್ಯ ಕಾರ್ಯಕ್ಕಾಗಿ ಹೊರಟ. ಆದರೆ ಆತ ಮೊದಲನೆ ರೈತನ ಮನೆ ಮುಟ್ಟುವ ಮೊದಲೇ ಆತನ ಆಗಮನದ ಸುದ್ದಿ ಸಿಲ್ಬೊ ಮುಖಾಂತರ ಮೂಲೆಮೂಲೆಗೂ ತಲುಪಿತ್ತು. ಆ ರೈತ ಮನೆಯಲ್ಲಿರಲಿಲ್ಲ. ಕರ-ವಸೂಲಿ ಅಧಿಕಾರಿಗೆ ಬೇರೆ ಮನೆಗಳಲ್ಲಿ ಕೂಡ ಯಜಮಾನರು ಕಾಣಸಿಗಲಿಲ್ಲ. ಆತ 'ಬಂದ ಹಾದಿಗೆ ಸುಂಕವಿಲ್ಲ' ವೆಂಬಂತೆ ಪೆಚ್ಚು ಮೋರೆ ಹಾಕಿಕೊಂಡು ಒಂದು ಕಾಸನ್ನೂ ವಸೂಲು ಮಾಡಲಾರದೆ ಮರಳಿದ. ಸಿಲ್ಬೊ ಸರಕಾರವನ್ನು ಸೋಲಿಸಿತ್ತು.

ಗಂಡಾಂತರದ ಪ್ರಸಂಗಗಳಲ್ಲಿ ಸಿಲ್ಬೊ ತುಂಬ ಉಪಯುಕ್ತವಾಗುತ್ತದೆ. ಸಿಲ್ಬಾಡೋರ್ ನಿಮಿಷಾರ್ಧದಲ್ಲಿ ದೂರದೂರದ ಜನರಿಗೂ ಗಂಡಾಂತರದ ಸೂಚನೆಯನ್ನು ಕೊಟ್ಟು ಎಲ್ಲರನ್ನೂ ಸತರ್ಕರನ್ನಾಗಿ ಮಾಡುತ್ತಾನೆ. *



# 'ಅನಾಸಿನ್'

## ನಾಲ್ಕು ಔಷಧಗಳಿಂದ ಕೂಡಿದ

ನೋವನ್ನು ಗುಣಪಡಿಸುತ್ತದೆ

ನರಗಳನ್ನು ಶಾಂತಪಡಿಸುತ್ತದೆ

ನಿರುತ್ಸಾಹವನ್ನು ಹೋಗಲಾಡಿಸುತ್ತದೆ

ಜ್ವರವನ್ನು ಕಡಿಮೆಗೊಳಿಸುತ್ತದೆ

ಡಾಕ್ಟರರ ಸುರಕ್ಷಿತ ಔಷಧದಂತೆ ಶಾಸ್ತ್ರೀಯ ರೀತಿಯಲ್ಲಿ ಸಮ್ಮಿಲನವಾದ ನಾಲ್ಕು ಔಷಧಗಳಿಂದ ಕೂಡಿದ 'ಅನಾಸಿನ್' ನೋವನ್ನು ಸಂಪೂರ್ಣವಾಗಿ, ಅತಿ ಶೀಘ್ರವಾಗಿ ಗುಣಪಡಿಸುತ್ತದೆ. ಅನಾಸಿನ್ (1) ತಲೆನೋವು, ಶೀತ, ಜ್ವರ, ಹಲ್ಲುನೋವು ಹಾಗೂ ಸ್ನಾಯುಗಳ ನೋವನ್ನು ಅಧಿಕ ಶೀಘ್ರವಾಗಿ ಉಪಶಮನಗೊಳಿಸುತ್ತದೆ; (2) ಗಾಬರಿಗೊಳಿಸುವ ನರಗಳಿಗೆ ಶಾಂತತೆಯನ್ನೀಯುತ್ತದೆ—ನೀವು ಸುಖವಾಗಿ, ಆರಾಮದಿಂದಿರುವಂತೆ ಮಾಡುತ್ತದೆ; (3) ನಿರುತ್ಸಾಹವನ್ನು ಹೋಗಲಾಡಿಸುತ್ತದೆ; (4) ಜ್ವರವನ್ನು ಕಡಿಮೆ ಮಾಡುತ್ತದೆ. ನಾಲ್ಕು ಔಷಧಗಳಿಂದ ಕೂಡಿರುವ ಅನಾಸಿನ್, ನೋವನ್ನು ಉಪಶಮನಗೊಳಿಸುವುದಕ್ಕೆ ಅಧಿಕ ಉತ್ತಮವಾಗಿದೆ. ಯಾವಾಗಲೂ ಮನೆಯಲ್ಲಿ 'ಅನಾಸಿನ್' ಇಟ್ಟುಕೊಳ್ಳಿರಿ.

- ಆರೋಗ್ಯಕರವಾಗಿರುವ ಸೆಲೋಫೇನ್ ಪ್ಯಾಕ್‌ನಲ್ಲಿ ಸೀಲ್‌ಮಾಡಿದ ಎರಡು ಬಿಲ್ಲೆಗಳೂ, ಭದ್ರವಾಗಿ ಪಿಲ್ಫರ್-ಪ್ರೂಫ್ ಪ್ಯಾಕಿಂಗ್‌ನಲ್ಲಿ ಮುಚ್ಚಲ್ಪಟ್ಟ ಸೀಸೆಗಳಲ್ಲಿ 32 ಬಿಲ್ಲೆಗಳೂ—ಮನೆಗಳಲ್ಲಿ ಉಪಯೋಗಿಸಲು ಅನುಕೂಲವಾಗುವಂತೆ—ದೊರೆಯುತ್ತವೆ.






## ಅನಾಸಿನ್ ಅಧಿಕ ಉತ್ತಮವಾಗಿದೆ

*Registered User:* GEOFFREY MANNERS & CO. LIMITED

KAN. Z-4

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವುದು. ಆಯಾ ಶಬ್ದ ದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾಗಿ ಅರ್ಥಗಳನ್ನು ವಿವರಿಸಿದೆ.

೧. ಕಷಾಯಿತ

(ಅ) ಗಡ್ಡ ಬೆಳಸಿದ (ಆ) ಬೋಳು (ಇ) ಕಂಚಿನ (ಈ) ಕೆಂಪೇರಿದ

೨. ಉಪಪನ್ನ

(ಅ) ಸರಿಯಾದ (ಆ) ಆಶ್ರಿತ (ಇ) ಸಂಬಂಧಿಕ (ಈ) ಹೋಲುವ

೩. ಗಾರು

(ಅ) ಕಾರು (ಆ) ಕಾವಿನ ಬೊಕ್ಕೆ (ಇ) ತಿಕ್ಕು (ಈ) ತಡೆ

೪. [illegible]ತ

(ಅ) ಕುಚೋದ್ಯ (ಆ) ಬಲವಾದ (ಇ) ಯತ್ನ (ಈ) ನೆಕ್ಕಿದ

೫. ನಿಗಡಿತ

(ಅ) ಹೇಳಲಾದ (ಆ) ಮುರಿದ (ಇ) ತಳಕುಹಾಕಲ್ಪಟ್ಟ (ಈ) ಶೀತ

೬. ಪರಾಮರ್ಶೆ

(ಅ) ವಿವೇಚನೆ (ಆ) ನಿಂದೆ (ಇ) ಹಿಂದೆಗೆಯುವುದು (ಈ) ಪುನರಾವೃತ್ತಿ

೭. ಪರಿಷ್ಕಾರ

(ಅ) ಸುತ್ತು ಹಾಕುವಿಕೆ (ಆ) ವಿಸ್ತಾರ (ಇ) ಸಂಚಾರ (ಈ) ಸಿಂಗಾರ

೮. ಆವಿಷ್ಕಾರ

(ಅ) ಒಳಹೋಗುವಿಕೆ (ಆ) ಆರಿ ಹೋಗುವುದು (ಇ) ಪ್ರತ್ಯಕ್ಷಗೊಳಿಸುವಿಕೆ (ಈ) ಸ್ವಚ್ಛಗೊಳಿಸುವಿಕೆ

೯. ಕಕ್ಕುಲತೆ

(ಅ) ಪ್ರೀತಿ (ಆ) ಒಂದು ಬಳ್ಳಿ (ಇ) ಕೆಟ್ಟ ಮಾತು (ಈ) ಪಂಜು

೧೦. ಅಧಿಷ್ಠಾನ

(ಅ) ನಿಯಮ (ಆ) ವಾಸಸ್ಥಾನ (ಇ) ರೋಗ (ಈ) ಹೆಚ್ಚಳ

೧೧. ವಿಚಿಕಿತ್ಸೆ

(ಅ) ಆರೈಕೆ (ಆ) ಮಾಡುವ ಬಯಕೆ (ಇ) ಕೆಡಿಸುವಿಕೆ (ಈ) ಸಂಶಯ

೧೨. ಸಮವಾಯ

(ಅ) ರಕ್ಷಣೆ (ಆ) ಹೋರಾಟ (ಇ) ಜೋಡಣೆ( ಈ) ವೆಚ್ಚ



# ' ಶಬ್ದಭಾಂಡಾರ ' ದ ಸರಿಯಾದ ಅರ್ಥಗಳು

೧. ಕಷಾಯಿತ (ಈ) ಕೆಂಪೇರಿದ, ಕಲಕಿದ, ಬಣ್ಣವೇರಿದ ಉದಾ – ರೋಷಕಷಾಯಿತನೇತ್ರನಾಗಿ. [ಸಂ. ಕಷಾಯದಿಂದ]

೨. ಉಪಪನ್ನ (ಅ) ಪಡೆದ, ಪ್ರಾಪ್ತ, ಒದಗಿದ, ಪರಿಣಮಿಸಿದ, ಮತ್ತು ಆ ಕಾರಣದಿಂದ ಸರಿಯಾದ, ಯೋಗ್ಯವಾದ. ಉದಾ: ನಿನ್ನ ತರ್ಕ ಉಪಪನ್ನವಾದದ್ದೆ. [ಸಂ. ಉಪಪದ್ = ಹತ್ತಿರ ಬಾ ಎಂಬುದರಿಂದ.]

೩. ಗಾರು (ಅ) ಕಾವಿನ ಬೊಕ್ಕೆ, ಕಾವು ; ಕಾಡುತನವುಳ್ಳ, ಒರಟುತನ. ಉದಾ— ಗಾರು ಮಾತುಗಳೇಕೆ ? [ಕನ್ನಡ]

೪. ಚೇಷ್ಟಿತ (ಇ) ಯತ್ನ, ಯತ್ನಪೂರ್ವಕ ಮಾಡಿದ ಕೃತಿ; ಚಲನೆ, ಹಾವಭಾವ. ಉದಾ—ಅವನ ಚೇಷ್ಟಿತಗಳೆಲ್ಲ ವ್ಯರ್ಥವಾದವು, ಅವನ ಚೇಷ್ಟಿತಗಳಿಂದ ಅವನ ಅಂತರಂಗ ತಿಳಿಯುತ್ತದೆ. [ಸಂ. ಚೇಷ್ಟ್ = ಚಲಿಸು ಎಂಬುದರಿಂದ]

೫. ನಿಗಡಿತ (ಇ) ತಳಕು ಹಾಕಲ್ಪಟ್ಟ, ಬೇಡಿ ಅಥವಾ ಸರಪಳಿಯಿಂದ ಬಿಗಿಯಲಾದ, ಕಟ್ಟಲ್ಪಟ್ಟ. ಉದಾ– ಈ ಎರಡು ಪ್ರಶ್ನೆಗಳು ಪರಸ್ಪರ ನಿಗಡಿತವಾಗಿವೆ [ಸಂ. ನಿಗಡ = ಬೇಡಿ

೬. ಪರಾಮರ್ಶೆ (ಅ) ವಿವೇಚನೆ, ವಿಚಾರ, ನಿರ್ಣಯ ; ಯೋಗಕ್ಷೇಮ ತೆಗೆದುಕೊಳ್ಳುವಿಕೆ ; ನೆನಪು. [ಸಂ. ಪರಾಮೃಶ್ = ಯೋಚಿಸು ಎಂಬುದರಿಂದ.]

೭. ಪರಿಷ್ಕಾರ (ಈ) ಸಿಂಗಾರ, ಅಲಂಕಾರ; ಶುದ್ಧಗೊಳಿಸುವಿಕೆ; ಅಡಿಗೆ. ಉದಾ– ಬಹಳ ಪರಿಷ್ಕಾರವಾಗಿದೆ ಅಂದರೆ ಚೆನ್ನಾಗಿದೆ. [ಸಂ. ಪರಿಷ್ಕೃ = ಅಲಂಕರಿಸು].

೮. ಆವಿಷ್ಕಾರ (ಇ) ಪ್ರತ್ಯಕ್ಷಗೊಳಿಸುವಿಕೆ, ಕಾಣಿಸುವಂತೆ ಮಾಡುವಿಕೆ ; ಕಂಡು ಹಿಡಿಯುವಿಕೆ. ಉದಾ— ನ್ಯೂಟನ್ನನು ಅನೇಕ ವೈಜ್ಞಾನಿಕ ಆವಿಷ್ಕಾರಗಳನ್ನು ಮಾಡಿದ್ದಾನೆ. [ಸಂ. ಆವಿಸ್ = ಕಣ್ಣೆದುರು].

೯. ಕಕ್ಕುಲತೆ (ಅ) ಪ್ರೀತಿ, ಮಮತೆ ದಯೆ; ಅತ್ಯಾಶೆ, ಬಯಲಾಸೆ. [ಕನ್ನಡ.

೧೦. ಅಧಿಷ್ಠಾನ (ಅ) ವಾಸಸ್ಥಾನ; ಆಳಿಕೆ ಮೇಲ್ವಿಚಾರಣೆ ನಡೆಸುವಿಕೆ, ಅಧಿಕಾರ ತಳಪಾಯ. ಉದಾ— ಹಣ ಲಕ್ಷ್ಮಿಯ ಅಧಿಷ್ಠಾನ. [ಸಂ. ಅಧಿ = ಮೇಲೆ + ಸ್ಥಾನ].

೧೧. ವಿಚಿಕಿತ್ಸೆ (ಈ) ಸಂಶಯ, ಸಂದೇಹ ಅರೆ ಮನಸು; [ಸಂ.]

೧೨. ಸಮವಾಯ (ಇ) ಜೋಡಣೆ; ರಾಶಿ ನಿಕಟ ಸಂಬಂಧ. [ಸಂ.]

---

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬—೮ ಸರಿಯಿದ್ದರೆ | .... | ಸಾಧಾರಣ |
| ೯—೧೦ ,, | .... | ಉತ್ತಮ |
| ೧೧—೧೨ ,, | .... | ಅತ್ಯುತ್ತಮ |

ಭಾರತೀಯ ಪೋಲೀಸ್ ಇತಿಹಾಸದ ಅತ್ಯಂತ ರಹಸ್ಯಮಯ ಪ್ರಕರಣ

# ಆತ ನಿಜವಾಗಿಯೂ ಮಗುವನ್ನು ಕೊಂದನೆ?

ಪಾವೆಂ

೧ರ್ಷ ಡಿಸೆಂಬರ್ ತಿಂಗಳಲ್ಲೊಂದು ರಾತ್ರಿ ಒಂಭತೂವರೆ ಗಂಟೆ ಸಮಯದಲ್ಲಿ ಕಲಕತ್ತೆಯ ಬೌಬಜಾರ್ ಬೀದಿಯ ಪೋಲೀಸ್ ಠಾಣೆಯಲ್ಲಿ ಗುಜರಾಥಿ ಹಿಂದೂ ಪೋಷಾಕು ಧರಿಸಿದ್ದ ಒಬ್ಬ ಸಂಭಾವಿತ ತರುಣ ಬಂದು "ನಾನೊಂದು ಕೊಲೆ ಮಾಡಿದ್ದೇನೆ" ಎಂದು ಅಲ್ಲಿದ್ದ ಅಧಿಕಾರಿಗೆ ತಿಳಿಸಿದ. ಆ ಅಧಿಕಾರಿ ಪ್ರಸಿದ್ಧ ಅಪರಾಧ ಮನೋವಿಜ್ಞಾನಿ ಪಂಚಾನನ ಘೋಷಾಲರಾಗಿದ್ದರು. ಅಪರಾಧ ಮನೋವಿಜ್ಞಾನದಲ್ಲಿ ಡಾಕ್ಟರ್ ಪದವೀಧರರಾದ ಅವರು ಹಲವು ನಿಗೂಢ ಅಪರಾಧಗಳ ಯಶಸ್ವಿ ಶೋಧ ಮಾಡಿದವರಾಗಿದ್ದರು. ಆದರೆ ಈಗ ಅವರ ಮುಂದೆ ಬಂದ ಪ್ರಕರಣವು ಅವರನ್ನು ಪೂರ್ಣವಾಗಿ ಅಪ್ರತಿಭರಾಗಿ ಮಾಡಲಿತ್ತೆಂದು



ಆಗ ಅವರಿಗೆ ತಿಳಿದಿರಲಿಲ್ಲ.

ತರುಣ ಕೊಟ್ಟ ಹೇಳಿಕೆಯ ಸಾರ ಇದು: ಸೆಂಟ್ರಲ್ ಅವೆನ್ಯೂ (ಕಲಕತ್ತಾ) ವಿನಲ್ಲಿ ವೈದ್ಯಕೀಯ ವೃತ್ತಿ ನಡೆಸುತ್ತಿದ್ದ ಗುಜರಾಥಿ ಡಾ. ಪಟೇಲರಲ್ಲಿ ಕಂಪೌಂಡರನಾಗಿದ್ದ ಆತ ಡಾಕ್ಟರರ ನಾಲ್ಕು ವರ್ಷ ವಯಸ್ಸಿನ ಏಕಮಾತ್ರ ಪುತ್ರನನ್ನು ಅಂದು ಸಂಜೆ ಕೊಲೆ ಮಾಡಿದ್ದ. ಡಾಕ್ಟರ್ ಮತ್ತು ಅವರ ಹೆಂಡತಿಯ ಮೇಲೆ ಸೇಡು ತೀರಿಸಿಕೊಳ್ಳುವುದೇ ಅವನ ಉದ್ದೇಶವಾಗಿತು. ಅಂದು ಬೆಳಿಗ್ಗೆ ಎಂಟು ಗಂಟೆ ಸುಮಾರಿಗೆ ದೇವಸ್ಥಾನ ತೋರಿಸುವೆನೆಂದು ಮಗುವನ್ನು ಕರೆದೊಯ್ದು ತನ್ನ ಘೋರ ಉದ್ದೇಶವನ್ನಾತ ಪೂರೈಸಿಕೊಂಡಿದ್ದ. "ಆದರೆ ನೀವು ನನ್ನನ್ನು ಕೊಚ್ಚಿಹಾಕಿದರೂ ನಾನು ಈ ಕೊಲೆಯನ್ನು ಎಲ್ಲಿ, ಹೇಗೆ ಮಾಡಿದೆ ಎಂದು ಮಾತ್ರ ಹೇಳಲಾರೆ" ಎಂದಾತ ರಹಸ್ಯಪೂರ್ಣವಾಗಿ ಹೇಳಿದ.

ಪೋಲೀಸರು ಅವನ ವಸ್ತ್ರಗಳನ್ನು ಶೋಧಿಸಿದರು. ಯಾವುದೇ ಆಯುಧವಾಗಲಿ, ಕಡೆಗೆ ರಕ್ತದ ಕಲೆಗಳಾಗಲಿ ಕಾಣಿಸಲಿಲ್ಲ. ವಿಕೃತ ಬುದ್ಧಿಯ ಅಪರಾಧಿಗಳ ಮನೋವಿಜ್ಞಾನದಲ್ಲಿ ತಮಗಿದ್ದ ಎಲ್ಲ ಪ್ರಾವೀಣ್ಯವನ್ನೂ ಉಪಯೋಗಿಸಿ ಡಾ. ಘೋಷಾಲರು ತರುಣನನ್ನು ಪುಸಲಾಯಿಸಿ, ಸಹಾನುಭೂತಿ ತೋರಿಸಿ ಹೆಚ್ಚು ವಿವರಗಳನ್ನು ಹೊರಗೆ ತರಲು ಬೇಕಾದಷ್ಟು ಹೆಣಗಿದರು. ಆದರೆ ಏನೂ ಪ್ರಯೋಜನವಾಗಲಿಲ್ಲ. ಅವನು ಆಗಲೇ ಹೇಳಿದ್ದಕ್ಕಿಂತ ಹೆಚ್ಚೇನನ್ನೂ ಹೇಳಲಿಲ್ಲ. ಅವನ ಸ್ವಂತದ ಬಗ್ಗೆ, ಅವನು ಗುಜರಾಥಿ ಹಿಂದು; ಗುಜರಾಥಿನ ಒಂದೆಡೆ ದೊಡ್ಡ ಜಮೀನ್ದಾರ ಕುಲದವ; ಅವನಿಗೆ ಮುದಿತಾಯಿ ಹೊರತು ಬೇರಾವ ಬಂಧುಗಳಿಲ್ಲ; ಗುಜರಾಥಿಯಲ್ಲಿ ಕಥೆಗಳನ್ನು ಬರೆದಿದ್ದ; ಒಂದು ವರ್ಷದ ಹಿಂದೆ ಕಲಕತ್ತೆಗೆ ಬಂದು ಸ್ವಜಾತಿಯವರಾದ ಡಾ. ಪಟೇಲರಲ್ಲಿ ಕಂಪೌಂಡರಾಗಿ ಸೇರಿ, ಅವರ ಮನೆಯಲ್ಲಿ ವಾಸಿಸುತ್ತಿದ್ದ, ಎಂದಿಷ್ಟು ವಿವರಗಳನ್ನಾತ ಕೊಟ್ಟಿದ್ದ. "ಮಗುವಿನ ಮೇಲೆ ನನಗೆ ಅತಿ ಪ್ರೀತಿಯಿತ್ತು. ಕೊಲ್ಲುವಾಗ ಅದರ ಮೋರೆ ನೋಡಲಾಗದೆ ಬೇರೆ ಕಡೆ ಮುಖ ತಿರುವಿ ಚೂರಿ ಹಾಕಿದೆ" ಎಂದಷ್ಟೇ ಪ್ರಶ್ನೋತ್ತರಗಳಲ್ಲಿ ತಿಳಿಯಬಂದ ಹೊಸ ಸಂಗತಿಯಾಗಿತ್ತು.

ಒಂದು ಕ್ಷಣ ಠಾಣೆಯಲ್ಲಿದ್ದವರಿಗೆ ಈ ಮನುಷ್ಯ ಹುಚ್ಚನಾಗಿದ್ದು ಅವನ ಇಡೀ ಹೇಳಿಕೆಯೆ ಸುಳ್ಳಿರಬಹುದೇ ಎಂಬ ಸಂಶಯ ಬಂತು. ಬೆಳಗ್ಗಿನಿಂದ ಡಾ. ಪಟೇಲರ ಮಗ ಕಾಣೆಯಾಗಿರುವುದೇ ನಿಜವಾಗಿದ್ದರೆ ಅವರು ಪೋಲೀಸರಿಗೆ ದೂರು ಕೊಟ್ಟಿರಲೇಬೇಕು ಎಂದು ಡಾ. ಘೋಷಾಲರು ಠಾಣಾ ಕರಣಿಕನನ್ನು ಕರೆಸಿ ಕೇಳಿದರು. ಹೌದು, ಸೆಂಟ್ರಲ್ ಅವೆನ್ಯೂನಲ್ಲಿದ್ದ ಡಾ. ಪಟೇಲರು ತಮ್ಮ ಕಂಪೌಂಡರ್ ಮತ್ತು ಮಗ ಕಾಣೆಯಾದ ಬಗ್ಗೆ ವರದಿ ಕೊಟ್ಟು ಅವರೆಲ್ಲೋ ಅಪಘಾತಕ್ಕೀಡಾಗಿರಬೇಕೆಂದೂ ಶೋಧ ನಡೆಸಬೇಕೆಂದೂ ಕೇಳಿಕೊಂಡಿದ್ದರು. ಆದ್ದರಿಂದ ಒಬ್ಬ ಕಾನ್‌ಸ್ಟೇಬಲ್‌ನನ್ನು ನಗರದ ಆಸ್ಪತ್ರೆಗಳಲ್ಲಿ ವಿಚಾರಿಸುವುದಕ್ಕಾಗಿ ಕಳಿಸಲಾಗಿತ್ತು ಕೂಡ.

ಡಾ. ಪಟೇಲರನ್ನು ಕರೆಸಿದ್ದಾಯಿತು. ಅವರಿಗೆ ಅವರ ಮಗುವಿನ ಕೊಲೆಯ ಸುದ್ದಿ ಹೇಳಿ ಕೊಲೆಗಡಕ ಅವರ ಕಂಪೌಂಡರನೇ ಎಂದು ತಿಳಿಸಿದಾಗ ಅವರು ಸುತರಾಂ ನಂಬಲು ಸಿದ್ಧರಾಗಲಿಲ್ಲ. "ನಮ್ಮೆಲ್ಲರಿಗೂ ಆತ ಪ್ರೀತಿಪಾತ್ರನಾಗಿದ್ದ. ನನ್ನ ತಮ್ಮನ ಹಾಗೆಯೆ ಮನೆಯಲ್ಲಿದ್ದ. ಹುಡುಗನನ್ನಂತೂ ಪ್ರಾಣದಂತೆ ಪ್ರೀತಿಸುತ್ತಿದ್ದ" ಎಂದವರು ಹೇಳಿದರು. ಕೈದಿಯನ್ನು ಆಚೆ ಕೋಣೆಯಿಂದ ತಂದು ಡಾಕ್ಟರರ ಮುಂದೆ ನಿಲ್ಲಿಸಿದಾಗ ಒಂದು ರಾದ್ಧಾಂತ ದೃಶ್ಯ ನಡೆದು ಹೋಯಿತು. ಡಾಕ್ಟರರು ಕಂಪೌಂಡರನ ಹೆಗಲ ಮೇಲೆ ಕೈಯಿಟ್ಟು "ಏನೋ, ನೀನು ನಿಜವಾಗಿ ಹುಡುಗನನ್ನು ಕೊಂದೆಯಾ?" ಎಂದು ಕೇಳಿದರು. ಆತ ಕಣ್ಣೀರು ಸುರಿಸುತ್ತ, "ಹೌದು, ಕೊಂದು ಹಾಕಿದ್ದೇನೆ. ಆದರೆ ಇದಕ್ಕಾಗಿ ನಿಮ್ಮ

ಕ್ಷಮೆ ಕೇಳುವುದಿಲ್ಲ" ಎಂದ.

ಕೇಳಿ ಡಾಕ್ಟರರು ಬುಡ ಕಡಿದ ಮರದಂತೆ ನೆಲಕ್ಕೆ ಕುಸಿದರು. ನೋಡಿ ಕೈದಿ ಕಂಗಾಲಾಗಿ ಡಾಕ್ಟರರ ಬಳಿ ಮಂಡಿಯೂರಿ, "ನೀರು! ನೀರು!" ಎಂದು ಕೂಗಿದ. ಅವರನ್ನು ಸ್ನೇಹದಿಂದ ಸೇವ ರಿಸತೊಡಗಿದ. ಪುಣ್ಯಕ್ಕೆ ಡಾಕ್ಟರರಿಗೇನೂ ಆಗಿ ರಲಿಲ್ಲ.

ಕಷ್ಟವೆಂದರೆ ಈ ಕೊಲೆಗೆ ಹೇತುವೇನಿತ್ತೆಂದು ಕಂಡುಹಿಡಿಯುವುದಾಗಿತ್ತು. ಆತ ತಮ್ಮಲ್ಲಿಗೆ ಬರುವ ಮೊದಲು ಅವನ ಪರಿಚಯ ತಮಗಿದ್ದಿ ಲ್ಲೆಂದು ಡಾಕ್ಟರರು ಒಪ್ಪಿದರು. ಅವನ ಊರಾ ವುದೆಂದೂ ಅವರಿಗೆ ಗೊತ್ತಿರಲಿಲ್ಲ. ಈಚೆಗೆ ಕೆಲ ದಿನಗಳಿಂದ ಅವನು ಒಂದು ತರಹೆಯಾಗಿದ್ದ ನೆಂದೂ ಹೇಳಿದರು. ಅವರ ಹೆಂಡತಿಗೇನಾ ದರೂ ಹಿಂದೆ ಅವನ ಪರಿಚಯವಿದ್ದಿರಬಹುದೇ ಎಂದು ಘೋಷಾಲರು ನಿರ್ದಾಕ್ಷಿಣ್ಯವಾಗಿ ಕೇಳಿ ದಾಗ ಸಾಧ್ಯವೇ ಇಲ್ಲೆಂದು ಉತ್ತರ ಬಂತು. ಈಚೆಗೆ ಮಗುವಿಗೊಮ್ಮೆ ಅಸ್ವಸ್ಥವಾದಾಗ ಆತ ಹಗಲಿರುಳು ಎಚ್ಚರಿದ್ದು ಅದರ ಆರೈಕೆ ಮಾಡಿದ್ದನಂತೆ. ಮಗುವನ್ನಾತ ಕೊಂದಿರ ಲಿಕ್ಕಿಲ್ಲ, ಎಲ್ಲಿಯೋ ಬಚ್ಚಿಟ್ಟಿರಬೇಕೆಂದು ಇನ್ನೂ ಡಾ. ಪಟೇಲರ ಅಭಿಪ್ರಾಯವಾ- ಗಿತ್ತು.

ಘೋಷಾಲರಿಗೆ ಒಂದು ವಿಷಯ ಖಚಿತ ವಾಗಿತ್ತು. ಈತ ಅಪರಾಧರೋಗಿ (ಅಂದರೆ ನಿಷ್ಕಾರಣವಾಗಿ ಅಪರಾಧ ಮಾಡುವ ಹಂಬಲ ವುಳ್ಳ ರೋಗಿ) ಎಂದು. ಕೈದಿಯ ಒಂದು ವರ್ತನೆ ತುಂಬ ವಿಚಿತ್ರವಾಗಿತ್ತು. ಆತ ಮಗು ವನ್ನು ಕೊಂದಿಲ್ಲವೆಂಬ ಸಂಶಯವನ್ನು ಇವರು ವ್ಯಕ್ತಪಡಿಸಿದಾಗೆಲ್ಲ ಆತ ಕ್ಷೋಭೆಗೊಂಡು ತಾನು ಖಂಡಿತ ಕೊಂದಿದ್ದೇನೆ ಎಂದು ಸಾಧಿಸು ತ್ತಿದ್ದ. ಘೋಷಾಲರು ತಮ್ಮ ಮನೋರೋಗ ವಿಜ್ಞಾನದ ಅಸ್ತ್ರಗಳನ್ನೆಲ್ಲ ಪ್ರಯೋಗಿಸಿದರು. ಮಗುವಿನ ಫೋಟೋ ತರಿಸಿ ಅವನ ಮುಂದಿಟ್ಟು, "ಇಷ್ಟು ಚಂದ ಮಗು! ಇದನ್ನು ಕೊಂದೆನೆಂದು ಸುಳ್ಳು ಹೇಳುತ್ತೀಯಾ?" ಎಂದರು. "ಇಲ್ಲ ನೀನು ಕೊಂದಿಲ್ಲ" ಎಂದರು. ಇಂಥ ಪ್ರಸಂಗ ಗಳಲ್ಲಿ ಆತ ಒಮ್ಮೊಮ್ಮೆ ಕರಗಿದಂತಾಗಿ ಸತ್ಯ ಹೇಳುವೆನೆಂದು ಪ್ರಾರಂಭಿಸುತ್ತಿದ್ದನು. ಆದರೆ ಕ್ಷಣದಲ್ಲಿ ಅವನ ಹಟ ಪುನಃ ನಿಗುರುತ್ತಿತ್ತು. "ಇಲ್ಲ, ಎಂದೂ ಹೇಳುವುದಿಲ್ಲ" ಎನ್ನುತ್ತಿದ್ದ.

ಕೊನೆಗೊಮ್ಮೆ ಕಂಪೌಂಡರ ಸತ್ಯದಂತೆನಿಸುವ ಒಂದು ಹೇಳಿಕೆ ಕೊಟ್ಟ. ಗುಜರಾಥದಲ್ಲಿ ತನ್ನ ಹುಟ್ಟೂರಿನ ಹೆಸರು ತಿಳಿಸಿ ತನ್ನ ಆತ್ಮಕಥೆ ಯನ್ನು ಹೊಸತೊಂದು ರೂಪದಲ್ಲಿ ಸಾದರ ಪಡಿ ಸಿದ. ತಾನು ಹಿಂದುವಾದರೂ ತನ್ನ ತಂದೆ ತಾಯಿಗಳ ಅವೈಧ (ಮದುವೆಯಾಗದೆ ಹುಟ್ಟಿದ) ಪುತ್ರ. ತನ್ನ ತಂದೆ ಆಫೀಸರಾಗಿದ್ದ. ತನ್ನ ತಾಯಿ ಸಾಯುವಾಗ ಮುಸ್ಲಿಂ ಗೆಳತಿಯೊಬ್ಬಳ ಕೈಯಲ್ಲಿ ತನ್ನನ್ನು ಹಾಕಿದಳು. ಆಗ ತಾನಿನ್ನೂ ಅಬೋಧ ಬಾಲಕ. ಹಾಗಾಗಿ ತಾನು ಮುಸ್ಲಿಮರ ನಡುವೆ ಬೆಳೆದೆ. ದೊಡ್ಡವನಾದ ಮೇಲೆ ಅವಳು ತನ್ನ ವಿದ್ಯಾಭ್ಯಾಸಕ್ಕಾಗಿ ಒಂದು ಸಣ್ಣ ಪಟ್ಟಣದ ಬೋರ್ಡಿಂಗಿನಲ್ಲಿ ತನ್ನನ್ನಿರಿಸಿದಳು. ಅಲ್ಲಿಯೇ ಇನ್ನೂ ಶಾಲೆಗೆ ಹೋಗುತ್ತಿದ್ದ ಲಕ್ಷ್ಮಿಯ (ಡಾ. ಪಟೇಲರ ಪತ್ನಿ) ಪರಿಚಯ ತನಗಾಯಿತು. ಪಾಶ್ಚಾತ್ಯ ಮಾದರಿಯ ಶೋಕಿ ಜೀವನ ನಡೆಸು ತ್ತಿದ್ದ ಲಕ್ಷ್ಮಿಯ ಪರಿವಾರದಲ್ಲಿ ತನಗೆ ಪ್ರವೇಶ ದೊರೆಯಿತು. ತನಗೂ ಅವಳಿಗೂ ಗಾಢ ಮೈತ್ರಿ ಬೆಳೆಯಿತು. ಆ ಮೇಲೆ ಅವಳ ಮದುವೆಯಾಗಿ ಅವಳು ಗಂಡನ ಮನೆಗೆ ಹೋದಳು. ಕಳೆದ ವರ್ಷ ತವರು ಮನೆಗೆ ಬಂದಾಗ ಅವಳು ತನ್ನನ್ನು ಕಲಕತ್ತೆಗೆ ಬರುವಂತೆ ಪ್ರೇರಿಸಿದಳು. ತಮ ಪೂರ್ವ ಪರಿಚಯವನ್ನು ಗಂಡನಿಗೆ ತಿಳಿಸದೆಯೆ ಅವಳು ಗಂಡನಿಂದ ತನಗೆ ನೌಕರಿ ಕೊಡಿಸಿ ದಳು. ಕೆಲ ಕಾಲ ತನ್ನನ್ನು ಅವರಿಬ್ಬರೂ ಆದರ ದಿಂದ ನೋಡಿಕೊಂಡರು ಆದರೆ ಈಚೆಗೆ ಅವರು ತನ್ನನ್ನು ತಿರಸ್ಕಾರದಿಂದ ಕಾಣತೊಡಗಿದ್ದಾರೆ. ಅದಕ್ಕೆ ಪ್ರತೀಕಾರ ಮಾಡುವ ಹಂಬಲ ತಡೆದು ಕೊಳ್ಳಲಾರದೆ ಅವರ ಶಿಶುಪುತ್ರನನ್ನು ಅಪಹರಿಸಿ

ಈವೊತ್ತು ಸಂಜೆ ಕೊಲೆ ಮಾಡಿಬಿಟ್ಟೆ.

ಅನಂತರ ಆತ ತಾನು ಅಂದು ಮಗುವನ್ನು ಕರೆದೊಯ್ದ ರೀತಿಯನ್ನೂ ವಿವರಿಸಿದ. ಎಲ್ಲಿ ರಿಕ್ಷಾ ಹಿಡಿದ, ಎಲ್ಲಿ ಟ್ಯಾಕ್ಸಿ ಹಿಡಿದ, ಬರಾಕ ಪುರ ಸ್ಟೇಶನ್ನಿಗೆ ಹೋಗಿ ಅಲ್ಲಿಂದ ಕಾಚರಾ ಪಾರಾಕ್ಕೆ ರೈಲಿನಲ್ಲಿ ಸಾಗಿ, ಅಲ್ಲಿಂದ ಬರಾಕ ಪುರಕ್ಕೆ ಮರಳಿ ಹೇಗೆ ಬಂದ ಈ ಎಲ್ಲ ವಿವರ-ಗಳನ್ನೂ ಒದಗಿಸಿದ. ಮಗು ಅತ್ತದ್ದು, ಅದಕ್ಕೆ ಹಾಲು ಕುಡಿಸಿದ್ದು, ಕೆಂಪು ಫುಗ್ಗಾ ಕೊಡಿಸಿದ್ದು, ಚೂರಿ ಕೊಂಡದ್ದು, ಕೊನೆಗೆ ಮಗುವನ್ನು ಸಂಜೆ ಹೊತ್ತಿಗೆ ಬರಾಕಪುರ ಮೈದಾನಿಗೆ ಕರೆದೊಯ್ದು ಅಲ್ಲಿಯ ಉದ್ಯಾನದ ಮರಗಳ ಕತ್ತಲೆಯಲ್ಲಿ ಅಡಗಿ ಒಂದು ಮರದ ಬುಡದಲ್ಲಿ ಮಗುವಿನ ಕೋಮಲವಾದ ಕೊರಳನ್ನು ಚೂರಿಯಿಂದ ತಿವಿದು ಕೊಂದು ಹಾಕಿ ಹಿಂತಿರುಗಿ ನೋಡದೆ ಕಲಕತ್ತೆಗೆ ಮರಳಿದ್ದು— ಎಲ್ಲವನ್ನು ಹೇಳಿದ. "ಮಗುವನ್ನು ನಾನು ಪ್ರೀತಿಸುತ್ತಿದ್ದೆ. ನಾನು ಚೂರಿಯುನ್ನು ಹೊರ ತೆಗೆದಾಗ ಅದು 'ಮಾಮಾ-ಮಾಮಾ' ಎಂದು ನನ್ನ ಕೊರಳಿಗೆ ತೆಕ್ಕೆಬಿತ್ತು. ನನ್ನ ಮನಸ್ಸು ವಿಚಲಿತವಾಯಿತು. ಅದಕ್ಕೇ ಅದರ ಮುಖ ನೋಡದೆ ಹಿಂದಿನಿಂದ ಚೂರಿ ಹಾಕಿದೆ" ಎಂದಾತ ತನ್ನ ವೃತ್ತಾಂತವನ್ನು ಮುಗಿಸಿದ.

ತುಂಬ ಆಶಾಭಾವದಿಂದ ಡಾ. ಘೋಷಾಲರು ಡಾ.ಪಟೇಲ್, ಪೋಲೀಸ ಪರಿವಾರ ಮತ್ತು ಕೈದಿ ಇವರೊಡನೆ ಟ್ಯಾಕ್ಸಿಯಲ್ಲಿ ಬರಾಕಪುರ ಮೈದಾನಕ್ಕೆ ಧಾವಿಸಿದರು. ಆದರೆ ಅಲ್ಲಿ ಅವರು ಕಂಡ ಸಂಗತಿ ಗೂಢವನ್ನು ಗೂಢತರವಾಗಿ ಮಾಡಲಿಕ್ಕಷ್ಟೇ ನೆರವಾಯಿತು. ಮಗುವಿನ ರಕ್ತ ಸಿಕ್ತವಾದ ಅಂಗಿಯೇನೋ ಅಲ್ಲಿ ಒಂದು ಮಾವಿನ ಮರದ ಬುಡದಲ್ಲಿ ಬಿದ್ದಿತ್ತು. ನೆಲದಲ್ಲಿ ಅಲ್ಲಲ್ಲಿ ರಕದ ಕಲೆಗಳು ಸಿಕ್ಕಿದವು. ಆದರೆ ಮಗುವಿನ ಹೆಣ ಸಿಗಲಿಲ್ಲ. ನರಿ ತಿಂದಿರಬಹುದೇ ಎಂದರೆ ಅದರ ಯಾವ ಅಂಗವಾಗಲಿ ಮಾಂಸ ಅಥವಾ ಎಲುಬಿನ ತುಣುಕೂ ಪತ್ತೆಯಾಗಲಿಲ್ಲ. ಎಲ್ಲ ಲಕ್ಷಣಗಳನ್ನು ನೋಡಿದರೆ ಈ ಸ್ಥಾನದಲ್ಲಿ ಕೊಲೆಯಾಗಿರುವುದೇ ಸಂಶಯಾಸ್ಪದವೆಂದು ತೋರಿತು. ಇಲ್ಲಿ ಮಗುವಿಗೆ ಚೂರಿ ಹಾಕಿದ್ದೇ ಸತ್ಯವಾಗಿದ್ದರೆ ಮರದ ಮೇಲೆ ರಕ್ತ ಚಿಮ್ಮಿರಬೇಕಾಗಿತ್ತು. ಹಾಗೇನೂ ಇರಲಿಲ್ಲ. ಮಗುವನ್ನು ಬೇರೆಲ್ಲಾದರೂ ಕೊಂದು ಇಲ್ಲಿ ತಂದು ಒಗೆದಿರಬಹುದೇ, ಅಥವಾ ಕೊಲ್ಲದೇ ರಕ್ತಬರುವಷ್ಟೇ ಇರಿದು ಅಂಗಿಯನ್ನು ತೋಯಿಸಿ ಚೆಲ್ಲಿ ಮಗುವನ್ನು ಎಲ್ಲಾದರೂ ಬಚ್ಚಿಟ್ಟಿರಬಹುದೆ?

ಮರುದಿನದ ತಪಾಸಣೆಯಲ್ಲಿ ಹೊರಪಟ್ಟ ಸಂಗತಿಗಳು ಕೈದಿಯ ಸತ್ಯಸಂಧತೆಯನ್ನು ಸಂಪೂರ್ಣವಾಗಿ ನಿರಸನಗೊಳಿಸಿದವು. ಡಾ. ಪಟೇಲರ ಹೆಂಡತಿಗೂ ಅವನಿಗೂ ಪೂರ್ವಪರಿಚಯವಿತ್ತೆಂಬ ಅವನ ಹೇಳಿಕೆ ಶುದ್ಧ ಸುಳ್ಳಾಗಿತ್ತು. ಆತ ಹೇಳಿದ ಹಾಗೆ ಆ ತರುಣಿ ಎಂದೂ ಯಾವ ಪಟ್ಟಣದಲ್ಲೂ ಶಾಲೆಗೆ ಹೋಗಿರಲಿಲ್ಲ; ಅವಳ ತಂದೆ ತಾಯಿ ಪಾಶ್ಚಾತ್ಯ ಪದ್ಧತಿಯವರಾಗಿರದೆ ಪೂರ್ಣ ಸಂಪ್ರದಾಯಶೀಲರಾಗಿದ್ದರು; ಒಂದು ವರ್ಷದ ಕೆಳಗೆ ಅವಳ ತವರೂರಲ್ಲಿ ಅವಳು ಅವನನ್ನು ಭೆಟ್ಟಿಯಾಗಲು ಸಾಧ್ಯವಿದ್ದಿಲ್ಲ. ಏಕೆಂದರೆ ಅವಳು ಮೂರು ವರ್ಷದ ಕೆಳಗೆ ಗಂಡನೊಡನೆ ಕಲಕತ್ತೆಗೆ ಬಂದವಳು ಹುಟ್ಟೂರಿಗೆ ತಿರುಗಿ ಹೋಗಿರಲೇ ಇಲ್ಲ. ಶ್ರೀಮತಿ ಪಟೇಲರನ್ನು ನೋಡಿದ ಮೇಲೆ ಈ ಮಾತಿನಲ್ಲಿ ಏನೂ ಸಂದೇಹವುಳಿಯಲಿಲ್ಲ. ಇನ್ನೂ ಹದಿನೇಳು ವರ್ಷದ ಮುದ್ದು ಬಾಲಿಕೆಯಾದ ಆ ದುಃಖಜರ್ಜರ ತಾಯಿ ನಿಷ್ಪಾಪ ಚರಿತಳಾಗಿದ್ದಳೆಂಬುದು ಸೂರ್ಯಪ್ರಕಾಶದಷ್ಟೇ ಸ್ಪಷ್ಟವಾಗಿತ್ತು.

ಡಾ.ಪಟೇಲರು ಕೈದಿಯ ವಿಷಯ ಇನ್ನೊಂದು ಹೊಸ ಸಂಗತಿಯನ್ನು ಸಾರಿದರು. ಕೆಲ ಕಾಲ ಹಿಂದೆ ಆತ ಒಂದು ದಿನ ಶ್ರೀಮತಿ ಪಟೇಲರ ಕೋಣೆಯನ್ನು ಗುಪ್ತವಾಗಿ ಪ್ರವೇಶಿಸಿ ಅವರ ಟ್ರಂಕಿನ ಬಾಗಿಲು ತೆರೆದು ಅದರೊಳಗೆ ಏನನ್ನೋ ಇಟ್ಟು ಬಹಳ ಸಂತೋಷದಿಂದ ಹೊರಬಂದ.

ಅದು ಅಕಸ್ಮಾತ್ತಾಗಿ ಶ್ರೀಮತಿ ಪಟೇಲರ ಕಣ್ಣಿಗೆ ಬಿತ್ತು. ಅವರು ಒಳಗೆ ಹೋಗಿ ನೋಡಿದಾಗ ಅವನು ಟ್ರಂಕಿನಲ್ಲಿಟ್ಟದ್ದು ಜರ್ಮನ್ ಸಿಲ್ವರ್ ಕಪ್‌ಬಸಿಗಳಾಗಿದ್ದವು. ಅವುಗಳ ಮೇಲೆ "ಮಿಸೆಸ್ ಪಟೇಲ" ಎಂದು ಬೇರೆ ಕೆತ್ತಲಾಗಿತ್ತು. ಹೆಂಡತಿಯಿಂದ ಇದನ್ನರಿತು ಡಾ. ಪಟೇಲರು ಹೀಗೇಕೆ ಮಾಡಿದೆಯೆಂದು ಕೈದಿಯನ್ನು ವಿಚಾರಿಸಿದರು. ಆತ ಅದಕ್ಕೆ ಯಾವ ಕಾರಣವನ್ನೂ ಹೇಳಲಾರದೆ ಮುಖ ಕೆಳಗೆ ಹಾಕಿದ್ದ. ಆದರೂ ಅವನ ವರ್ತನೆಯಲ್ಲಿ ತಮ್ಮ ಹೆಂಡತಿಯ ಬಗ್ಗೆ ಕುವಾಸನೆ ಮೊದಲಾಗಲಿ ಆಮೇಲಾಗಲಿ ಕಾಣಿಸಿರಲಿಲ್ಲವಾಗಿ ಡಾ. ಪಟೇಲರು ಆ ಮಾತನ್ನು ಅಲ್ಲಿಗೇ ಬಿಟ್ಟಿದ್ದರು.

ಮುಂದಿನ ವಿಚಾರಣೆಯಲ್ಲಿ ಕೈದಿಯ ಸ್ವಭಾವದ ಇನ್ನೊಂದು ಮುಖ ಪೋಲೀಸ್ ಅಧಿಕಾರಿಗಳಿಗೆ ಪರಿಚಯವಾಯಿತು. ಕೈದಿ ತನ್ನ ಗೆಳೆಯರೊಡನೆ ಆಗಾಗ್ಗೆ ಕಲಕತ್ತೆಯ ಸೂಳೆಗೇರಿಗೆ ಭೆಟ್ಟಿ ಕೊಟ್ಟು ಬರುತ್ತಿದ್ದನೆಂದು ತಿಳಿದುಬಂತು. ಸೂಳೆಗೇರಿಯಲ್ಲಿ ವಿಚಾರಿಸಿದಾಗ ಆತ ಅಲ್ಲಿ ಎಲ್ಲರಿಗೂ ಪರಿಚಿತ ವ್ಯಕ್ತಿಯಾಗಿದ್ದ. ಆದರೆ ಯಾವ ವೇಶ್ಯೆಯೊಡನೆಯೂ ಆತ ಶರೀರ ಸಂಪರ್ಕ ಬೆಳೆಸಿರಲಿಲ್ಲ. ಎಲ್ಲ ವೇಶ್ಯೆಯರನ್ನೂ ಅವನು "ತಂಗಿ" "ಅಕ್ಕ" ಎಂದೇ ಸಂಬೋಧಿಸುತ್ತಿದ್ದ. ಈ ಬಗ್ಗೆ ಅವನು ಸೂಳೆಗೇರಿಯಲ್ಲಿ ತುಂಬ ಅಪಹಾಸ್ಯಕ್ಕೆ ಗುರಿಯಾಗಿದ್ದ. ಆದರೆ ಎಲ್ಲ ವೇಶ್ಯೆಯರೂ ಅವನ ಚಾರಿತ್ರ್ಯನೈರ್ಮಲ್ಯದ ಬಗ್ಗೆ ಏಕವಾಕ್ಯತೆಯುಳ್ಳವರಾಗಿದ್ದರು. ಒಬ್ಬ ದೈವಭಕ್ತೆ ವೇಶ್ಯೆಯಂತೂ ಅವನ ಈ ಮುಗ್ಧತೆಗೆ ಎಷ್ಟು ಮರುಳಾಗಿದ್ದಳೆಂದರೆ ಅವನ ಶ್ರೇಯಸ್ಸಿಗಾಗಿ ವ್ರತೋಪವಾಸಗಳನ್ನು ಆಚರಿಸುತ್ತಿದ್ದಳು!

ಈಗ ಸಿ. ಐ. ಡಿ. ಶಾಖೆಯ ಖ್ಯಾತ ಪತ್ತೇದಾರ ರಾಯಬಹಾದೂರ ಸತ್ಯೇಂದ್ರ ಮುಕರ್ಜಿಯವರೂ ಶೋಧ ಕಾರ್ಯದಲ್ಲಿ ಸೇರಿಕೊಂಡಿದ್ದರು. ಅವರು ಕೈದಿಯನ್ನು ನೋಡಿದವರೇ ಈತ ಖಂಡಿತ ಹಿಂದುವಲ್ಲ, ಮುಸ್ಲಿಂ ಎಂದು ಸಾರಿದರು. ಅವನ ಗುಪ್ತಾಂಗಗಳನ್ನು ಪರೀಕ್ಷಿಸಿದಾಗ ಅದು ನಿಜವೆಂದು ಕಂಡುಬಂತು. ಅಲ್ಲಿ ಸುನ್ನತ್ ವಿಧಿಯ ಸ್ಪಷ್ಟ ಲಕ್ಷಣವಿತ್ತು. ನಿನ್ನ ಜಾತಿಯನ್ನು ಕುರಿತು ಸುಳ್ಳೇಕೆ ಹೇಳಿದೆಯೆಂದು ಕೇಳಿದಾಗ ಕೈದಿಯಿತ್ತ ತತ್ವಜ್ಞಾನದ ಉತ್ತರ ಅವರನ್ನು ಆಶ್ಚರ್ಯ ಚಕಿತರನ್ನಾಗಿ ಮಾಡಿತು. "ನಾನು ಮುಸ್ಲಿಂನಾಗಿ ಹುಟ್ಟಿದ್ದರೇನಾಯಿತು? ನನ್ನ ಮುತ್ತಜ್ಜ–ಏಕೆ ಈ ದೇಶದ ಮುಸ್ಲಿಮರೆಲ್ಲರ ಪೂರ್ವಜರು ಒಂದು ಕಾಲದಲ್ಲಿ ಹಿಂದುಗಳೇ ಆಗಿದ್ದರು ತಾನೆ! ಈ ಹಿಂದು ಮುಸ್ಲಿಂ ಭೇದವೆಲ್ಲ ವಿದೇಶೀಯರು ನಮ್ಮ ತಲೆಯಲ್ಲಿ ತುರುಕಿದ್ದು!" ಎಂದನಾತ.

ಹಾಗೂ ಹೀಗೂ ಒಂದು ವಾರ ದಾಟಿ ಹೋಯಿತು. ಏನೂ ಪ್ರಗತಿಯಾಗಲಿಲ್ಲ. ರಕ್ತ ಪರೀಕ್ಷಕರ ವರದಿ ಸಮಸ್ಯೆಯನ್ನು ಬಿಡಿಸಲು ನೆರವಾಗುವ ಬದಲು ಅದನ್ನು ಇನ್ನೂ ಗಡುಚಾಗಿ ಮಾಡಿತು. ಮಗುವಿನ ಅಂಗಿಯಲ್ಲೂ ಮಣಿನಲ್ಲೂ ಇದ್ದ ರಕ್ತದಲ್ಲಿ ಮನುಷ್ಯ ರಕ್ತದ ಸಂಗಡ ಆಡಿನ ರಕ್ತವೂ ಬೆರೆತಿತ್ತೆಂದು ವರದಿಯಲ್ಲಿ ಹೇಳಿತ್ತು. ಹಾಗಾದರೆ ಮಗು ಕೊಲೆಯಾಗಿರಲಿಲ್ಲವೇ? ಪೋಲೀಸರನ್ನು ಜಂಜಾಟದಲ್ಲಿ ಸಿಲುಕಿಸುವ ಉದ್ದೇಶದಿಂದ ಈ ಅಪರಾಧರೋಗಿ ಹೀಗೆಲ್ಲ ಮಾಡಿರಲಿಕ್ಕಿಲ್ಲವೆ?

ಮತ್ತೆ ಡಾ. ಘೋಷಾಲರು ಕೈದಿಯನ್ನು ಭೆಟ್ಟಿಯಾದರು. ಅವನನ್ನು ಪುಸಲಾಯಿಸಿದರು. ಆತ ಪತ್ತೇದಾರ ಸತ್ಯೇಂದ್ರ ಬಾಬುಗಳ ಮೇಲೆ ಬಲು ರುಷ್ಟನಾಗಿದ್ದ. "ಅವರು ನನ್ನನ್ನು ಸಿಗಿದು ಹಾಕಿದರೂ ನನ್ನಿಂದ ಒಂದು ಗುಟ್ಟನ್ನೂ ಹೊರ ದೆಗೆಯಲಾರರೆಂದು ಅವರಿಗೆ ಹೇಳಿ" ಎಂದು ಕೂಗಿದ. ಘೋಷಾಲರು ಸತ್ಯೇಂದ್ರರನ್ನು ಬೈದಂತೆ ಮಾಡಿ ಅವನ ಅಂತರಂಗದ ಕತ್ತಲು ಕೋಣೆಯಲ್ಲಿ ಒಂದು ಕ್ಷಣ ಪ್ರವೇಶ ಪಡೆಯಲು ಸಮರ್ಥರಾದರು. ಆ ಸಮಯದಲ್ಲಿ ಆತ, ಘೋಷಾಲರು ಕೇಳದೇನೆ, ಮಗುವಿನ ಅಂಗಿಯಲ್ಲಿದ್ದ ರಕ್ತದಲ್ಲಿ ಆಡಿನ ರಕ್ತ ಬೆರತಿದೆಯೆಂದು ಹೇಳಿದ. ಅದರಲ್ಲಿದ್ದ ಮನುಷ್ಯ ರಕ್ತ ಮಗುವಿನ

ದಾಗಿಲ್ಲ. ತನ್ನ ಸ್ವಂತ ದೇಹದಿಂದ ಸಿರಿಂಜಿನಿಂದ ತಾನು ರಕ್ತ ತೆಗೆದಿದ್ದೇನೆ, ಕಂಪೌಂಡರನಾದ ತನಗೆ ರಕ್ತ ಹೇಗೆ ತೆಗೆಯಬೇಕೆಂದು ಗೊತ್ತಿದೆ, ಎಂದೂ ಬಹಿರಂಗಪಡಿಸಿದ. ಬೇಕಾದರೆ ತನ್ನ ಮೈಯ ರಕ ತೆಗೆದು ತಜ್ಞರು ಅಂಗಿಯಲ್ಲಿ ದೊರೆತ ಮನುಷ್ಯ ರಕ್ತದೊಡನೆ ಹೋಲಿಸಿ ತನ್ನ ಮಾತಿನ ಸತ್ಯತ್ವವನ್ನು ಕಂಡುಕೊಳ್ಳಲಿ ಎಂದ. (ರಕ್ತ ಪರೀಕ್ಷಕರು ನಂತರ ಅವನ ರಕ್ತವನ್ನು ಪರೀಕಿಸಿದಾಗ ಆತ ಹೇಳಿದ್ದು ಸತ್ಯವೆಂದು ತಿಳಿಯಿತು.) ರಕ್ತಪರೀಕ್ಷಾ ಶಾಸ್ತ್ರ ಆತನಿಗೆ ಆದ್ಯಂತ ಪರಿಚಿತವಾಗಿತ್ತು. ಆಡನ್ನು ತಾನು ಕೊಂದ ಅಡವಿಯ ಸ್ಥಳವನ್ನೂ ಸೂಚಿಸಿದ. ಮಗುವನ್ನು ಕೊಂದಿಲ್ಲ, ಸಿಂಹಳದಲ್ಲಿರುವ ತನ್ನ ಅಕ್ಕ ರುಕ್ಮಿಣಿಯ ಹತ್ತಿರ ಮಗು ಸುರಕ್ಷಿತವಾಗಿದೆ, ಎಂದೂ ಭರವಸೆ ಕೊಟ್ಟ. ಆದರೆ, "ಅವಳ ವಿಳಾಸ ಮಾತ್ರ ಪ್ರಾಣ ಹೋದರೂ ಕೊಡಲಾರೆ" ಎಂದು ಘೋಷಿಸಿದ. "ಶ್ರೀಮತಿ ಪಟೇಲರ ಪೆಟ್ಟಿಗೆಯಲ್ಲಿ ಜರ್ಮನ್ ಸಿಲ್ವರ್ ಪಾತ್ರಗಳನ್ನೇಕೆ ಇಟ್ಟೆ?" ಎಂದು ಕೇಳಿದಾಗ ಮಾತ್ರ ಆತ ರೊಚ್ಚಿಗೆದ್ದ. "ನನ್ನನ್ನು ಹೀಯಾಳಿಸಬೇಡಿ. ಇವೆಲ್ಲ ಅಂತರಂಗದ ಸಂಗತಿಗಳು. ನಿಜ ಕೇಳಿದರೆ ಆ ಪೆಟ್ಟಿಗೆ ನನ್ನದೇ. ಹೋಗಿ ಹೋಗಿ. ಏನೂ ಹೇಳುವುದಿಲ್ಲ ನಿಮಗೆ" ಎಂದುಬಿಟ್ಟ.

ಮಗುವನ್ನು ಅಪಹರಿಸಿದ್ದಕ್ಕೆ ಈ ಸಲ ಆತ ಕೊಟ್ಟ ಕಾರಣ ಬೇರೆಯೆ ಇತ್ತು. ಡಾ. ಪಟೇಲರಿಗೂ ತನಗೂ ವಿಕೃತ ಲೈಂಗಿಕ ಸಂಬಂಧವಿತ್ತು. ಆದರೆ ಈಚೆಗೆ ಅವರು ತನ್ನನ್ನು ಅಸಡ್ಡೆ ಮಾಡಿದರು. ಅದಕ್ಕೇ ಅವರ ಮೇಲೆ ಹೀಗೆ ಸೇಡು ತೀರಿಸಿಕೊಂಡೆ – ಎಂದು ವಿಲಕ್ಷಣ ಸತ್ಯವನ್ನು ಹೇಳಿದ. ಆತ ಈಗ ಮತ್ತೆ ತನ್ನ ವಿಪರೀತ ಮನೋವೃತ್ತಿಗೆ ಮರಳಿದ್ದ.

ಆ ಮೇಲೆ ಪೋಲೀಸರು ಸಾಹಸಪಟ್ಟು ಆತ ಶಿಶು-ಅಪಹಾರದ ದಿನ ಸಾಗಿದ ದಾರಿಯಲ್ಲಿ ಸಾಗಿ, ಅವನನ್ನೂ ಮಗುವನ್ನೂ ವಾಹನಗಳಲ್ಲಿ ಕರೆದೊಯ್ದವರನ್ನು ಕಂಡುಹಿಡಿದರು. ರಿಕ್ಷಾ-ವಾಲ, ಟ್ಯಾಕ್ಸಿವಾಲ, ಅಳುವ ಮಗುವಿಗೆ ಹಾಲು ಕೊಟ್ಟವ, ಟಿಕೀಟು ಕೊಂಡು ತಂದ ಕೂಲಿ, ಫುಗ್ಗ ಮಾರಿದ ಫೇರಿವಾಲ, ಕೊನೆಗೆ ಚೂರಿ ಮಾ-ರಿದ ಅಂಗಡಿಯವ ಎಲ್ಲರ ಪತ್ತೆಯೂ ಆಯಿತು. ಪ್ರತಿಯೊಬ್ಬರಿಗೂ ಕೈದಿಯ ಗುರುತು ಹತ್ತಿತು. ಅವನು ಮಗುವಿನ ಸಂಗಡ ಇದ್ದುದೂ ಜ್ಞಾಪಕವಿತ್ತು. ಅದು ಅಳುತ್ತಿದ್ದುದನ್ನೂ ಈತ ಅದನ್ನು ಸಂತೈಸುತ್ತಿದ್ದುದನ್ನೂ ಅವರು ನೆನೆದುಕೊಂ-ಡರು. ಹಾಗಾದರೆ ಅವನ ಹೇಳಿಕೆಯ ಈ ಅಂಶಗಳು ಸತ್ಯವಾಗಿದ್ದವೆಂದಾಯಿತು.

ಈ ಯಾತ್ರೆಯುದ್ದಕ್ಕೂ ಅವರೊಡನೆ ಇದ್ದ ಕೈದಿ, ಒಮ್ಮೆಲೇ, "ಒಂದು ಸಂಗತಿ ಮರೆತಿರಲ್ಲ. ನಾನು ಆ ದಿನ ಆಡು ಕದ್ದ ಸ್ಥಳ ತೋರಿಸುವೆ. ಆ ದಿನ ಈ ಪ್ರದೇಶದಲ್ಲಿ ಯಾರದಾದರೂ ಆಡು ಕಳುವಾಗಿ ಕೊಲ್ಲಲ್ಪಟ್ಟಿತೇ ಎಂದು ಜಾಹೀರುನಾಮೆ ಮೂಲಕ ವಿಚಾರಿಸಿರಿ. ಅದೊಂದು ಸಿದ್ಧವಾದರೆ ನಿಮ್ಮ ಪುರಾವೆ ಪೂರ್ತಿಯಾದಂತಾಗುತ್ತದೆ" ಎಂದು ಸೂಚಿಸಿದ. ಈ ವರೆಗೆ ಇವನ ಶರೀರಶಾಸ್ತ್ರ ಜ್ಞಾನವನ್ನು ಕಂಡು ಬೆರಗಾಗಿದ್ದ ಪೋಲೀಸ್ ಅಧಿಕಾರಿಗಳು ಈಗ ಅವನ ಕ್ರಿಮಿ-ನಲ್ ಕಾಯದೆ ಜ್ಞಾನವನ್ನು ಕಂಡು ಬೆರಗಾದರು! ಆದರೆ ಆಡು ಕೊಂದ ಸ್ಥಳ ತೋರಿಸುತ್ತೇನೆಂದು ಕೈದಿ ಅವರನ್ನು ಹನ್ನೊಂದು ಮೈಲು ದೂರದ ವರೆಗೆ ಸಿಕ್ಕಸಿಕ್ಕಲ್ಲಿ ಅಲೆಯಿಸಿ ಕೊನೆಗೂ ಅದನ್ನು ತೋರಿಸದೆ ಅವರನ್ನು ಹೆಡ್ಡರಾಗಿ ಮಾಡಿದ!

ಕಡೆಯ ಉಪಾಯವೆಂದು ಕೈದಿಯನ್ನು ಡಾ ಪಟೇಲರ ಮನೆಗೆ ಕರೆದೊಯ್ಯಲಾಯಿತು: ಆ ಮಾತೆಯ ಕರುಣಕ್ರಂದನದ ಸಮ್ಮುಖದಲ್ಲಾ-ದರೂ ಈ ನಿರ್ದಯ ಶಿಶುಘಾತಕನ ಮನ ಕರ-ಗೀತೆಂಬ ಆಶೆಯಿಂದ. ಶ್ರೀಮತಿ ಪಟೇಲರು ಅವನನ್ನು ಕಂಡೊಡನೆ ಒಮ್ಮೆ ಸಿಂಹಿಣಿಯಂತೆ ಅವನ ಮೇಲೆ ಹರಿಹಾಯ್ದರು. ಆಮೇಲೆ ಕರುಣಾಜನಕವಾಗಿ ಗೋಗರೆದರು. ಕೈದಿಯ

ಮನ ಕರಗಿದಂತೆ ಕಂಡಿತು. ಆತ ಒಂದು ವಿಚಿತ್ರ ಸೂಚನೆಯನ್ನು ಮುಂದಿಟ್ಟ: "ತಂಗೀ, ನೀನು ಚಿಂತಿಸಬೇಡ. ನಿನ್ನ ಮಗು ಸತ್ತಿಲ್ಲ. ನಿನಗೆ ಅದನ್ನು ತಿರುಗಿ ಕೊಡುವೆ. ಆದರೆ ಒಂದು ಶರ್ತದ ಮೇಲೆ. ನೀನು ಕೆಲವೇ ಕ್ಷಣ ನನ್ನೊ- ಏಕಾಂತದಲ್ಲಿ ಬಾಗಿಲು ಹಾಕಿಕೊಂಡು ಮಾತಾಡಲೊಪ್ಪಬೇಕು. ನಿನ್ನನ್ನು ಖಾಸ ತಂಗಿಯೆಂದು ಬಗೆದಿರುವ ನನ್ನಿಂದ ಖಂಡಿತ ನಿನ್ನ ಮಾನಕ್ಕೆ ಚ್ಯುತಿಬಾರದೆಂದು ಭರವಸೆ ಕೊಡುವೆ."

ಮಗುವನ್ನು ಕಳೆದುಕೊಂಡ ಆ ತಾಯಿ ತತ್‌ಕ್ಷಣ ಇದಕ್ಕೊಪ್ಪಿದಳು. ಆದರೆ ಡಾ. ಪಟೇಲರಾಗಲಿ ಪೋಲೀಸ್ ಅಧಿಕಾರಿಗಳಾಗಲಿ ಸಮ್ಮತಿಸುವುದು ಸಾಧ್ಯವಿರಲಿಲ್ಲ. ಬಾಗಿಲು ಅಗಳಿ ಹಾಕಿಕೊಂಡು ಏಕಾಂತದಲ್ಲಿರುವಾಗ ಈ ವಿಕೃತಮತಿ ಕೈದಿ ಅವಳ ಮೇಲೆ ಕೈಮಾಡಿದರೆ ಅಥವಾ ಶೋಕಕಾತರಳಾದ ಅವಳೇ ಇವನನ್ನು ಕೊಂದು ಹಾಕಿದರೆ ಏನು ಗತಿ? "ನಾವು ದೂರ ಹೋಗಿ ನಿಲ್ಲುತ್ತೇವೆ. ನಮ್ಮೆದುರಿಗೇ ನಮಗೆ ಕೇಳಿಸದಂತೆ ಗುಟ್ಟಾಗಿ ಮಾತಾಡು" ಎಂದು ಅವನ ಮನವೊಲಿಸಲು ಮಾಡಿದ ಪ್ರಯತ್ನ ವಿಫಲವಾಯಿತು. ಆದರೆ ಶ್ರೀಮತಿ ಪಟೇಲರನ್ನು ಸಮಾಧಾನಪಡಿಸುತ್ತ, "ತಂಗೀ, ಒಂದು ವರ್ಷ ತಾಳು. ನಿನ್ನ ಮಗುವನ್ನು ಸುರಕ್ಷಿತವಾಗಿ ನಿನಗೊಪ್ಪಿಸುವೆ" ಎಂದು ಮಾತು ಕೊಟ್ಟ.

ಪ್ರಯಾಸದಿಂದ ಪೋಲೀಸರು ಗುಜರಾಥಕ್ಕೆ ಹೋಗಿ ಕೈದಿ ಹೇಳಿದ ಸ್ಥಳವನ್ನು ಹುಡುಕಿ ತೆಗೆದರು. ಅಲ್ಲಿ ಅವನ ತಾಯಿ ಇದ್ದಳು. ತಾವು ಜಮೀನ್ದಾರ ಕುಲದವರು ಎಂದಾತ ಹೇಳಿದ್ದು ಮಾತ್ರ ಶುದ್ಧ ಸುಳ್ಳಾಗಿತ್ತು. ಅವರು ಅತಿ ಬಡವರಾಗಿದ್ದರು. ಬರ್ಮಾದಲ್ಲಿ ಅವನಿಗೊಬ್ಬ ದೂರ ಸಂಬಂಧದ ಭಗಿನಿ ಇದ್ದುದು ನಿಜವೆಂದು ತಿಳಿಯಿತು. ಆದರೆ ಅವಳ ಪತ್ತೆ ಸಿಗಲಿಲ್ಲ.

ಅವನ ತಾಯಿಯ ಗುಡಿಸಲಲ್ಲಿ ದೊರೆತ ಎರಡು ಪತ್ರಗಳು ಮಾತ್ರ ಕುತೂಹಲಜನಕವಾಗಿದ್ದವು. ಅವೆರಡನ್ನೂ ಕೈದಿಯೆ ಬರೆದಿದ್ದ—ಕಲಕತ್ತೆಯಿಂದ. ಅವುಗಳಲ್ಲಿ ಒಂದು ಒಂದು ವರ್ಷ ಹಿಂದಿನದು; ಇನ್ನೊಂದು ಈಚೆಗಿನದು.

ಮೊದಲನೆಯದರಲ್ಲಿ, "ಅಮ್ಮಾ, ಆರೋಗ್ಯವಾಗಿದ್ದೀ ತಾನೆ. ನಾನು ಇಲ್ಲಿ ಮದುವೆ ಮಾಡಿಕೊಂಡಿದ್ದೇನೆ. ಶ್ರೀಮಂತರ ಮಗಳು. ಮುದ್ದಾಗಿದ್ದಾಳೆ. ತುಂಬ ಓದಿದವಳು. ನಾನಿಲ್ಲಿ ವ್ಯಾಪಾರ ಮಾಡುತ್ತಿದ್ದೇನೆ. ತುಂಬ ಲಾಭವಿದೆ. ಮೋಟಾರು ಇಟ್ಟಿದ್ದೇನೆ. ಬೇಗನೆ ನಾವಿಬ್ಬರೂ ನಿನಗೆರಗಲು ಅಲ್ಲಿ ಬರುತ್ತೇವೆ" ಎಂದಿತ್ತು.

ಎರಡನೆಯದರಲ್ಲಿ, "ಅಮ್ಮಾ, ನಾನು ಜಪಾನಿನಿಂದ ಇದೀಗ ಮರಳಿದ್ದೇನೆ. ಕಣ್ಣಿನ ಚಿಕಿತ್ಸೆಗಾಗಿ ಹೋಗಿದ್ದೆ. ಆದರೆ ವ್ಯರ್ಥವಾಯಿತು. ಕುರುಡನಾಗಿದ್ದೇನೆ. ಆದರೂ ನನಗೆ ಚಿಂತೆಯಿಲ್ಲ. ನಿನ್ನ ಸೊಸೆ ನನ್ನನ್ನು ಅತಿಯಾಗಿ ಪ್ರೀತಿಸುತ್ತಾಳೆ. ನಮಗೊಂದು ಮಗು ಹುಟ್ಟಿದೆ. ಆತನೇ ನನಗಿನ್ನು ಕಣ್ಣು."

ಕಾವ್ಯಮಯವಾದ ಸುಳ್ಳುಗಳನ್ನು ಸೃಷ್ಟಿಸುವುದರಲ್ಲಿ ಆತ ನಿಸ್ಸೀಮನಾಗಿದ್ದನೆಂದಾಯಿತು. ಆದರೆ ಡಾಕ್ಟರರ ಮಗುವಿನ ಗತಿ ಅಥವಾ ಅವನ ಮೇಲಿನ ಆರೋಪದ ಸತ್ಯಾಸತ್ಯವನ್ನಾಗಲಿ ದೃಢಪಡಿಸುವ ಪುರಾವೆಗಳೇನೂ ಸಿಗಲಿಲ್ಲ. ಇನ್ನೊಂದು ಭೆಟ್ಟಿಯಲ್ಲಿ ಆತ ಡಾ. ಘೋಷಾಲರಿಗೆ ಉಪಕಾರ ಮಾಡುವವನಂತೆ ತನ್ನ ಸಿಂಹಳವಾಸಿ ತಂಗಿಗೆಂದು ಒಂದು ಪತ್ರವನ್ನು ಬರೆದು ಕೊಟ್ಟ. "ಮಗುವನ್ನು ಇವರಿಗೆ ಒಪ್ಪಿಸು" ಎಂದು ಅದರ ತಾತ್ಪರ್ಯವಾಗಿತ್ತು. ಆಶಾಭಾವದಿಂದ ಪೋಲೀಸರು ಸಿಂಹಳಕ್ಕೆ ಹೋದರು ಆದರೆ ಆತ ಕೊಟ್ಟಿದ್ದ ವಿಳಾಸವಾಗಲಿ ಹೇಳಿದ ವ್ಯಕ್ತಿಯಾಗಲಿ ಅಲ್ಲಿ ಇದ್ದೇ ಇಲ್ಲ. ಪುನಃ ಪೋಲೀಸರನ್ನಾತ ಮಂಗಗಳನ್ನಾಗಿ ಮಾಡಿದ್ದ.

ಸೋಲೊಪ್ಪಿಕೊಂಡು ಪೋಲೀಸರು ಕೈದಿಯನ್ನು ವಿಕೃತ ಮನೋವಿಜ್ಞಾನದ ತಜ್ಞರ ಪರೀಕ್ಷೆಗಾಗಿ ಕಳಿಸಿದರು. ಅವರು ಕೊಟ್ಟ ವರದಿ ಆರೋಪಿಯ ಮನೋವೃತ್ತಿಯ ಮೇಲೆ ಸಾಕಷ್ಟು ಬೆಳಕು ಕೆಡವಿತು. ಈ ಮನುಷ್ಯ ಒಂದು ವಿಶಿಷ್ಟ

ಮನೋವೈಪರೀತ್ಯದಿಂದ ಬಳಲುತ್ತಿದ್ದಾನೆಂದು ಅವರ ಅಭಿಪ್ರಾಯವಾಗಿತ್ತು. "ಕವಿಗಳಂತೆ ಅವನಿಗೆ ಕಲ್ಪನಾಶಕ್ತಿ ಇದೆ. ಆದರೆ ಅದನ್ನು ಸಾಹಿತ್ಯವಾಗಿ ಮಾರ್ಪಡಿಸುವ ಬದಲು ವಾಸ್ತವ ಪ್ರಪಂಚಕ್ಕೆ ತಂದು ತೋರಿಸುವ ಆತ್ಮವಂಚಕ ನಾಟಕವನ್ನಾತ ಆಡುತ್ತಿದ್ದಾನೆ. ಆತ ತನ್ನನ್ನು ಸ್ತ್ರೀಯೆಂದು ಕಲ್ಪಿಸಿಕೊಂಡಿದ್ದಾನೆ, (ಅದಕ್ಕೇ ಆತ ವೇಶ್ಯೆಯರನ್ನು ತಂಗಿ ಎನ್ನುತ್ತಿದ್ದ) ಮತ್ತು ಸ್ತ್ರೀರೂಪದಲ್ಲಿ ತಾನು ಡಾ. ಪಟೇಲರ ಹೆಂಡತಿಯೆಂದು ಭಾವಿಸಿದ್ದಾನೆ. (ಅದರಿಂದಲೆ ಶ್ರೀಮತಿ ಪಟೇಲರ ಪೆಟ್ಟಿಗೆ ತನ್ನದು ಎಂದದ್ದು.) ಅದರಿಂದ ಅವರ ನಿಜ ಹೆಂಡತಿಯ ಮೇಲೆ ಅವನಿಗೆ ಸವತಿ ಮತ್ಸರ ಸಹಜವಾಗಿಯೆ ಇದೆ. ಸಂಗಡಲೆ ತಾನು ತಾಯಾಗಬೇಕೆಂಬ ಅಭಿಲಾಷೆಯೂ ಅವನಲ್ಲಿ ತೀವ್ರವಾಗಿದೆ. ಗಂಡಸಾದವ ತಾಯಿಯಾಗಲಾರನಾದ್ದರಿಂದ ಅವನು ಪಟೇಲರ ಮಗುವನ್ನು ಅಪಹರಿಸಿ ಬಚ್ಚಿಟ್ಟಿದ್ದಾನೆ. ತಾನೀಗ ಬಸಿರಿಯೆಂದವನ ಕಲ್ಪನೆಯಾಗಿದೆ. ಹತ್ತು ತಿಂಗಳು ಕಳೆದ ಮೇಲೆ ತಾನೇ ಹಡೆದೆನೆಂದು ಭಾವಿಸಿಕೊಂಡು ಅವನು ಮಗುವನ್ನು ಹೊರತರಬಹುದು. ಆ ವರೆಗೆ ಅವನನ್ನು ಪೀಡಿಸುವುದು ವ್ಯರ್ಥ. ಕೇಳಿದಾಗೆಲ್ಲ ಹೊಸ ಹೊಸ ಸುಳ್ಳುಗಳನ್ನಾತ ಸೃಷ್ಟಿಸುವನಷ್ಟೇ."

ಪೋಲೀಸ್ ಅಧಿಕಾರಿಗಳು ಈಗೇನು ಮಾಡಬೇಕು? ಕೈದಿಯನ್ನು ಹತ್ತು ತಿಂಗಳವರೆಗೆ ಇಟ್ಟುಕೊಳ್ಳಲು ಯಾವ ಕಾಯದೆಯ ಮೂಲಕವೂ ಸಾಧ್ಯವಿದ್ದಿಲ್ಲ. ಹುಚ್ಚು ಹೊರತು ಮತ್ತಾವ ಮನೋವಿಕಾರವುಳ್ಳವರನ್ನೂ ಕಾಯದೆ ಪ್ರಕಾರ ಆಸ್ಪತ್ರೆಗೆ ಕಳಿಸಲು ಬರುವುದಿಲ್ಲ. ಉಪಾಯಗಾಣದೆ ಅಧಿಕಾರಿಗಳು ಕೊಲೆ ಮತ್ತು ಅಪಹರಣದ ಆರೋಪವಿಟ್ಟು ಅವನನ್ನು ಕೋರ್ಟಿನ ಮುಂದೆ ಹಾಜರುಪಡಿಸಿದರು. ಮಗುವಿನ ಹೆಣವಾಗಲಿ, ರಕ್ತವಾಗಲಿ ಸಿಗದಿದ್ದುದರಿಂದ ಕೊಲೆ ಸಿದ್ಧವಾಗಲಿಲ್ಲ. ಅಪಹರಣದ ಅಪರಾಧಕ್ಕಾಗಿ ಕಲಕತ್ತಾ ಹೈಕೋರ್ಟು ಅವನಿಗೆ ಹತ್ತು ವರ್ಷದ ಶಿಕ್ಷೆ ವಿಧಿಸಿತು. ಒಂದು ವರ್ಷದ ನಂತರ ಅವನು ಡಾ. ಘೋಷಾಲರನ್ನು ಜೇಲಿಗೆ ಬರಮಾಡಿಕೊಂಡು ಪೆರೋಲ್ ಕೊಟ್ಟು ಬಿಡುಗಡೆ ಮಾಡಿದರೆ ಮಗುವನ್ನು ತಂದುಕೊಡುವುದಾಗಿ ಹೇಳಿದನಂತೆ. ಆದರೆ ಹೀಗೆ ಮಾಡಲು ಕಾಯದೆ ಇಲ್ಲದ್ದರಿಂದ ಅದು ಸಾಧ್ಯವಾಗಲಿಲ್ಲ. ೧೯೪೬ ರಲ್ಲಿ ಅವನ ಬಿಡುಗಡೆಯಾಯಿತು. ಆದರೆ ಆಗ ಕಲಕತ್ತೆಯಲ್ಲಿ ಹಿಂದೂ-ಮುಸ್ಲಿಂ ಹತ್ಯಾಕಾಂಡದ ಅತ್ಯಂತಿಕ ಕೋಲಾಹಲವಿದ್ದುದರಿಂದ ಬಿಡುಗಡೆ ಹೊಂದಿ ಅವನಲ್ಲಿ ಹೋದನೋ ಯಾರಿಗೂ ಪತ್ತೆಯಾಗಲಿಲ್ಲ. ಆ ಸಮಯದಲ್ಲೆ ಡಾ. ಪಟೇಲರೂ ಕಲಕತ್ತೆಯನ್ನು ತೊರೆದು ಅಜ್ಞಾತ ಸ್ಥಳಕ್ಕೆ ಹೋಗಿ ಬಿಟ್ಟಿದ್ದರು.

ಇಂದಿಗೂ ಈ ಪ್ರಕರಣದ ರಹಸ್ಯ ಹಾಗೆಯೇ ಉಳಿದಿದೆ. ಕಂಪೌಂಡರ್ ಮಗುವನ್ನು ಕೊಂದು ತನಗಾಗುವ ಮರಣದಂಡನೆಯಿಂದ ತಪ್ಪಿಸಿಕೊಳ್ಳಲು ತನ್ನ ರಕ್ತ, ಆಡಿನ ರಕ್ತ ಮೊದಲಾದ ಗತ್ತುಗಳಿಂದ ಪೋಲೀಸರನ್ನು ದಾರಿತಪ್ಪಿಸಿ ಕೊನೆಗೂ ಗೆದ್ದನೆ? ಅಂಗಿಯಲ್ಲಿ ದೊರೆತ ರಕ್ತ ಮಗುವಿನದಲ್ಲೆಂದು ತಜ್ಞರ ವರದಿ ಬಂದೊಡನೆ ಆತ ಘೋಷಾಲರ ಮುಂದೆ "ಹಾಗಾದರೆ ನನಗೆ ಗಲ್ಲಾಗದು" ಎಂದು ಉತ್ಸಾಹಪೂರ್ವಕವಾಗಿ ಹೇಳಿದ್ದನಂತೆ. ವಿಪರೀತ ಬುದ್ಧಿಯವನಾದರೂ ಆತ ಬಲು ಗಟ್ಟಿಗನೆಂಬಲ್ಲಿ ಸಂಶಯವೇ ಇದ್ದಿಲ್ಲ. ಆದರೂ ಡಾ. ಘೋಷಾಲರು ಇಂದಿಗೂ ಮಗು ಬದುಕಿದೆಯೆಂಬುದಾಗಿಯೆ ನಂಬಿದ್ದಾರೆ. ಹಾಗಿದ್ದರೆ ಅದೀಗ ೨೫ ವರ್ಷದ ತರುಣನಾಗಿರಬೇಕು. ಆದರೆ ಎಲ್ಲಿ? ★

**ಡಾ. ಪಂಚಾನನ ಘೋಷಾಲರ ವರದಿಗಳ ಆಧಾರದಿಂದ**



# ಆಸ್ತಮಾ

ಮೂಲ: ಸ್ವಾಮಿ ಶಿವಾನಂದ

ಅನುವಾದ: ಶಿವಶಂಕರ

ಮಾನವ ದೇಹದ ಮೇಲೆ ದಾಳಿ ನಡೆಸುವ ಭಯಂಕರ ಜಾಡ್ಯಗಳಲ್ಲಿ ಖಾಸಶ್ವಾಸ(ಆಸ್ತಮಾ) ಒಂದು. ಅದು ಶ್ವಾಸೋಚ್ಛ್ವಾಸದ ಅಂಗಗಳ ಮೇಲೆ ನೇರ ಆಘಾತವನ್ನುಂಟುಮಾಡುವುದರಿಂದ ಉಂಟಾಗುವ ವೇದನೆಯ ಭಯಂಕರ ಪರಿಣಾಮ ಇತರ ದೈಹಿಕ ಜಾಡ್ಯಗಳಿಗಿಂತ ಹೆಚ್ಚಾಗಿರುತ್ತದೆ.

ಸಾಧಾರಣವಾಗಿ ಗಂಟಲಿಗೂ ಹೃದಯಕ್ಕೂ ನಡುವಿನ ಭಾಗದಲ್ಲಿ ತೊಂದರೆಯ ಮೂಲ ಅಡಗಿರುತ್ತದೆ. ಇದ್ದಕ್ಕಿದ್ದಂತೆಯೇ ಶ್ವಾಸೋಚ್ಛ್ವಾಸ ನಿಂತುಬಿಡುತ್ತದೆ; ನಂತರ- ಒಬ್ಬನನ್ನು ನೀರಿನಲ್ಲಿ ಮುಳುಗಿಸಿಟ್ಟು ಮೇಲಕ್ಕೆ ಬಿಟ್ಟರೆ ಅವನು ದೀರ್ಘ ಶ್ವಾಸ ಬಿಡುವಂತೆ ರೋಗಿಯೂ ಶ್ವಾಸಕ್ಕಾಗಿ ಬಡಿದಾಡುತ್ತಾನೆ.

ಖಾಸಶ್ವಾಸದಿಂದಾಗುವ ಕಷ್ಟವನ್ನು ಸಹಿಸಿಕೊಳ್ಳುವುದು ಬಹಳ ಕಷ್ಟ. ಅದನ್ನು ಯಾರಾದರೂ ಗುಣ ಪಡಿಸುವುದಾದರೆ, ಆ ಸಮಯದಲ್ಲಿ, ತನ್ನ ಬಳಿ ಇದ್ದುದೆಲ್ಲವನ್ನೂ ಕೊಟ್ಟಾದರೂ ಔಷಧಿ ತೆಗೆದುಕೊಳ್ಳಲು ರೋಗಿ ಸಿದ್ಧನಾಗುತ್ತಾನೆ. ರೋಗಿಯ ದಾರುಣ ಸ್ಥಿತಿಯನ್ನು ಶಬ್ದಗಳಿಂದ ವಿವರಿಸಲು ಸಾಧ್ಯವಿಲ್ಲ. ಅನೇಕ ಬಾರಿ ಖಾಸಶ್ವಾಸದ ಆಘಾತಕ್ಕೊಳಗಾದ ರೋಗಿಗೆ ಉತ್ತಮ ಆಧ್ಯಾತ್ಮಿಕ ವಿವೇಚನೆ ಹಾಗೂ ಸಂನ್ಯಸ್ತವೃತ್ತಿ ಇರದಿದ್ದಲ್ಲಿ ಅವನ ಜೀವನವು ನಿಷ್ಪ್ರಯೋಜಕವಾಗಿ ಹಾಳಾಗಿ ಹೋಗುತ್ತದೆ.

ಈ ಭಯಂಕರ ರೋಗವನ್ನು ಪ್ರಪಂಚದಲ್ಲಿರುವ ಯಾವ ಗಿಡಮೂಲಿಕೆಯೂ ಪೂರ್ಣ ಗುಣಪಡಿಸಲಾರದು. ಅದೆಷ್ಟೋ ಉತ್ತಮ ಔಷಧಿಯನ್ನು ತೆಗೆದುಕೊಂಡರೂ ತಾತ್ಕಾಲಿಕ ವಿಮೋಚನೆ ಮಾತ್ರ ದೊರಕುತ್ತದಲ್ಲದೆ ಶಾಶ್ವತ ಫಲ ದೊರಕಲಾರದು. ಈಗಂತೂ ಹಲವಾರು ತರದ ಔಷಧಿಗಳು ಮಾರುಕಟ್ಟೆಗೆ ಬಂದಿವೆ. ಆದರೆ ಎಲ್ಲವೂ ಅಷ್ಟೇ. ಈ ತೊಂದರೆಯ ಸರಿಯಾದ ಮೂಲ ಕಾರಣವೇನೆಂಬುದನ್ನು ಇದುವರೆಗೆ ಯಾರೂ ಕಂಡುದಿಲ್ಲ. ಎಂಥ ಯೋಗದಿಂದ ಅಥವಾ ಶುಶ್ರೂಷೆಯಿಂದ ಜಾಡ್ಯ ನಿಲ್ಲಬಹುದು, ಅಲ್ಲದೆ ಯಾವ ಯಾವ ಸ್ಥಿತಿಯಲ್ಲಿ ಜಾಡ್ಯ ಬರಬಹುದು, ಇದನ್ನು ಹೇಳಬಹುದೇ ವಿನಾ ನಿಜವಾಗಿ ಅದು ಬರಲು ಕಾರಣವೇನೆಂಬುದನ್ನು ಹೇಳಲು ಯಾರಿಗೂ ಸಾಧ್ಯವಾಗಿಲ್ಲ. ಶ್ವಾಸನಾಳಗಳ ಸ್ನಾಯುನಿರ್ಮಿತ ಹೊದಿಕೆ ಸಹಸಾ ಕುಗ್ಗಿಬಿಟ್ಟು ಉಸಿರಾಡಿಸುವ ಕ್ರಿಯೆಗೆ ತೊಡಕುಂಟುಮಾಡುವುದರಿಂದ ಖಾಸಶ್ವಾಸವುಂಟಾಗುತ್ತದೆಂದು ಹೇಳಲಾಗಿದ್ದರೂ ನಿಷ್ಕರ್ಷೆಯಾಗಿ ಇದೆಲ್ಲ ಯಾವ ರೀತಿ ಆಗುತ್ತದೆಂಬುದು ರಹಸ್

"ಭವನ್ಸ್ ಜರ್ನಲ್" ಕೃಪೆಯಿಂದ

ವಾಗಿಯೆ ಉಳಿದಿದೆ.

ವಾಯುವನ್ನು ಶ್ವಾಸಕೋಶದೊಳಗೂ ಹೊರಗೂ ಬಿಡುವ ಶ್ವಾಸನಾಳಗಳನ್ನು ಸುತ್ತುವರಿದ ಸ್ನಾಯುಪದಾರ್ಥವು ಸಹಸಾ ಕುಗ್ಗಿಬಿಡುವುದೇ ತೊಂದರೆಯ ಆರಂಭವೆಂದು ಕಾಣುತ್ತದೆ. ಸ್ನಾಯುಗಳು ಕುಗ್ಗುವುದರಿಂದ ಅವು ಶ್ವಾಸನಾಳಗಳನ್ನೇ ಒತ್ತುತ್ತವೆ. ಆಗ ಸಹಜವಾಗಿ ಶ್ವಾಸನಾಳಗಳೂ ಮುದುಡಿಕೊಳ್ಳುತ್ತವೆ.

ಆಗ ಅದರ ಪರಿಮಾಣ ಕಡಿಮೆಯಾಗುತ್ತದೆ. ಪರಿಮಾಣ ಕಡಿಮೆ ಆದಾಗ ವಾಯುವಿನ ಆಗ-ಮನ ಹಾಗೂ ನಿರ್ಗಮನಕ್ಕೆ ತಡೆಯುಂಟಾಗುತ್ತದೆ. ಶ್ವಾಸಕೋಶದಲ್ಲಿರುವ ಗಾಳಿ ಸರಿಯಾಗಿ ಹೊರಗೆ ಹೋಗುವಂತಿಲ್ಲ. ಹೊರಗಿನ ಶುದ್ಧ ಗಾಳಿ ಒಳಗೆ ಪ್ರವೇಶಿಸುವಂತಿಲ್ಲ. ಅದರ ಪರಿಣಾಮವಾಗಿ ಉಸಿರುಕಟ್ಟಿದ ತೀವ್ರ ಅನುಭವವಾಗುತ್ತದೆ; ಕೆಲವೊಮ್ಮೆ ತಡೆದುಕೊಳ್ಳಲೂ ಕಷ್ಟವಾಗುತ್ತದೆ. ಒಡನೆ ರೋಗಿಯು ಉಚ್ಛ್ವಾಸಕ್ಕಾಗಿ ತೇಕುತ್ತಾನೆ, ಅವನ ಕೈಕಾಲುಗಳು ತಣ್ಣಗಾಗುತ್ತವೆ, ಒಣಗಿರುವ ಅವನ ಮುಖದಲ್ಲಿ ಬೆವರಿನ ಹನಿಗಳು ಕಾಣಿಸಿಕೊಳ್ಳುತ್ತವೆ. ಶ್ವಾಸಕೋಶದೊಳಗೆ ತುಂಬಾ ಗಾಳಿ ಇರುತ್ತದೆ ಮತ್ತು ಎದೆಯೂ ಉಬ್ಬಿರುತ್ತದೆ. ಆದರೆ ನಿಃಶ್ವಾಸಕ್ಕೆ ಸಾಧ್ಯವಾಗುವುದಿಲ್ಲ; ಹಾಗಾಗಿ ಹೊಸ ಗಾಳಿ ಒಳಬರುವುದಿಲ್ಲ. ಇದೇ ಆಸ್ತಮಾ ಆಘಾತ. ಇತ್ತೀಚೆಗೆ ಖಾಸಶ್ವಾಸವು ಒಂದು ತರಹದ ಅಲರ್ಜಿ ಎಂದು ಎಲ್ಲರೂ ಸಾಮಾನ್ಯವಾಗಿ ಒಪ್ಪಿಕೊಂಡಿದ್ದಾರೆ. ಅಲರ್ಜಿ ಎಂದರೆ ಅಧಿಕಾಂಶ ಮನುಷ್ಯರಿಗೆ ಯಾವ ಉಪದ್ರವವನ್ನೂ ಮಾಡದ ಯಾವುದಾದರೊಂದು ಪದಾರ್ಥವು ಕೆಲವೊಂದು ಸೂಕ್ಷ್ಮ ಪ್ರಕೃತಿಯುಳ್ಳ ಜನರ ಶರೀರದ ಮೇಲೆ ಅಸಾಧಾರಣ ಅಥವಾ ಘೋರ ಪ್ರತಿಕ್ರಿಯೆಯುಂಟುಮಾಡುವ ವಿಶೇಷವಾದದೊಂದು ಅವಸ್ಥೆ ಎನ್ನಬಹುದು. ಹೀಗೆ ಪ್ರತಿಕ್ರಿಯೆಗೆ ಕಾರಣವಾದ ಪದಾರ್ಥಕ್ಕೆ ಅಲರ್ಜೆನ್ ಎಂದು ಹೆಸರು. ಆದರೆ ಆಸ್ತಮಾಕ್ಕೆ ಕಾರಣವಾದ ಅಲರ್ಜೆನ್‌ಗಳು ಹೆಚ್ಚಾಗಿ ಧೂಳಿನ ರೂಪದಲ್ಲಿ ಉಸಿರಿನಲ್ಲಿ ಒಳಹೋಗುತ್ತವೆಂದು ಗೊತ್ತಾಗಿದೆ. ಧೂಳಿನಲ್ಲಿರುವ ಸಸಾರಜನಕ ವಸ್ತುಗಳ (ಪ್ರೋಟೀನ್) ಹುಡಿ, ಕೆಲವು ಹೂಗಳ ಪರಾಗ, ಪ್ರಾಣಿಗಳ ಮತ್ತು ಹಕ್ಕಿಗಳ ಮೈಮೇಲಿನ ಹೆಡಸು, ಸೇಂದ್ರಿಯ ವಸ್ತುಗಳ ಹುಡಿ, ಸಸ್ಯಗಳಿಗೆ ಹತ್ತಿದ ಬುರುಸು ಇತ್ಯಾದಿಗಳೇ ಹೆಚ್ಚು ಅಪಾಯಕಾರಿಯೆನಿಸಿವೆ. ಕೆಲ ಸಸಾರಜನಕ ಆಹಾರ ವಸ್ತುಗಳನ್ನು ತಿಂದರೂ ಆಸ್ತಮಾಕ್ಕೆ ಪ್ರಚೋದನೆ ದೊರೆಯಬಹುದು.

ಯಾವ ವ್ಯಕ್ತಿಗೆ ಯಾವ ಸಸಾರಜನಕ ಪದಾರ್ಥ ಅಲರ್ಜಿಯನ್ನುಂಟುಮಾಡಬಹುದೆಂದು ವಿಶೇಷ ಕಷ್ಟವಿಲ್ಲದೆ ಕಂಡುಹಿಡಿಯಬಹುದು. ಅದಕ್ಕೆ ಸಾಧಾರಣ ರೀತಿಯ ಪ್ರಯೋಗಶಾಲೆಯ ನೆರವು ಇದ್ದರೆ ಸಾಕು. ಆಸ್ತಮಾ ತೊಂದರೆಯುಳ್ಳ ವ್ಯಕ್ತಿಯ ಚರ್ಮದ ಮೇಲೆ ಗೀರಿ ಬರೆ ತರಿಸಿ ಅದರ ಮೇಲೆ ಉಪದ್ರವಕಾರಿಯೆಂದು ಭಾವಿಸಲಾದ ಬೇರೆ ಬೇರೆ ಸಸಾರಜನಕ ವಸ್ತುಗಳ ಪ್ರಯೋಗ ನಡೆಸುತ್ತ ಬರಬೇಕು. ಅದನ್ನು ಮುಲಾಮು ಅಥವಾ ಹುಡಿ ಇಲ್ಲವೇ ದ್ರಾವಣ ರೂಪದಲ್ಲಿ ಹಚ್ಚಬಹುದು. ಯಾವುದರಿಂದ ಆ ವ್ಯಕ್ತಿಗೆ ತೊಂದರೆಯುಂಟಾಗುತ್ತದೋ ಅದನ್ನು ಹಚ್ಚಿದಾಗ ಬೊಕ್ಕೆಯಂಥ ಪ್ರತಿಕ್ರಿಯೆ ಕಾಣಿಸುತ್ತದೆ. ಅದೇ ಅವನಿಗೆ ಆಸ್ತಮಾವುಂಟುಮಾಡತಕ್ಕ ಪದಾರ್ಥವೆಂದು ತಿಳಿಯಬೇಕು. ಆ ಸಸಾರಜನಕವುಳ್ಳ ಪದಾರ್ಥಗಳನ್ನು ರೋಗಿಯು ವರ್ಜಿಸತಕ್ಕದ್ದು.

ಅದರೊಂದಿಗೆ ರೋಗಿಗೆ ಆಯಾ ವಸ್ತುವಿನ ಉಪದ್ರವವನ್ನು ಪ್ರತಿರೋಧಿಸುವ ಶಕ್ತಿಯನ್ನು ಕೊಡುವ ಆಂಟಿಜೆನ್‌ನ್ನು ಚುಚ್ಚುಮದ್ದಿನ ಮೂಲಕ ಕೊಡಬಹುದು.

ಖಾಸಶ್ವಾಸವು ಸಾಂಕ್ರಾಮಿಕ ರೋಗವಲ್ಲ. ಆದರೆ ಕೆಲವೊಮ್ಮೆ ತಲೆಮಾರಿನಿಂದ ತಲೆಮಾರಿಗೆ ಅದು ದಾಟುವುದುಂಟು. ತಾಯಿ ತಂದೆಗಳಲ್ಲಿ ಯಾರಿಗಾದರೂ ಆಸ್ತಮಾ ಇದ್ದಲ್ಲಿ ಮಗುವಿಗೂ

ಬರಬಹುದು. ಆದರೆ ಯಾವಾಗಲೂ ಹಾಗಾಗುತ್ತದೆಂದಲ್ಲ. ಕೆಲವೊಮ್ಮೆ ಕುತೂಹಲಕಾರಕ ರೀತಿಯಲ್ಲಿ ಅದು ವರ್ತಿಸುವುದೂ ಉಂಟು. ಹಿಂದಿನವನಿಗೆ ಆಸ್ತಮಾ ಇರದಿದ್ದರೂ ಅವರ ಕುಟುಂಬದಲ್ಲಿ ಯಾರಿಗಾದರೂ ಒತ್ತಲೆಶೂಲೆ, ಉನ್ಮಾದ ಅಥವಾ ಅಪಸ್ಮಾರ ಇದ್ದಿದ್ದರೆ ಅವರಿಂದ ಪ್ರಕೃತ ರೋಗಿಗೆ ನರಗಳಿಗೆ ಸಂಬಂಧಪಟ್ಟ ವಿಶಿಷ್ಟತರದ ಸೂಕ್ಷ್ಮಗ್ರಾಹಕತೆ ಮತ್ತು ಶ್ವಾಸನಾಳಗಳಿಗೆ ಸಂಬಂಧಪಟ್ಟ ವಿಚಿತ್ರ ಉದ್ರೇಕ ಸ್ವಭಾವ ಇಳಿದು ಬರುವುದುಂಟು.

ಕೆಲವರಿಗೆ ವಿಶಿಷ ತರದ ವಾಸನೆಯಿಂದ, ಮತ್ತೆ ಕೆಲವರಿಗೆ ಗದ್ದಲ ಅಥವಾ ವಿಶಿಷ್ಟತರದ ಸದ್ದಿನಿಂದ, ಇನ್ನೂ ಕೆಲವರಿಗೆ ಆಹಾರದಿಂದ, ಅಲ್ಲದೆ ಅನೇಕರಿಗೆ ಕೆಲ ವಸ್ತುಗಳ ನೋಟ ಮಾತ್ರದಿಂದ ಆಸ್ತಮಾ ಆಘಾತವುಂಟಾಗುತ್ತದೆ. ಮಾನಸಿಕ ಪ್ರಯಾಸ, ತೊಳಲಾಟ ಅಥವಾ ಸುದೀರ್ಘ ಏಕಾಗ್ರತೆಯಿಂದಲೂ ಆಘಾತವುಂಟಾಗುವುದಿದೆ. ಜಾಸ್ತಿ ಮಾತು, ಸ್ವರ ತಂತುಗಳ ಆಯಾಸ ಇವುಗಳಿಂದ ಆಸ್ತಮಾದ ಆಘಾತ ಬರುವುದುಂಟು. ಶೀತಹವೆಯಿಂದಾಗಿ ಶ್ವಾಸಾಂಗಗಳಿಗೆ ಪ್ರಯಾಸವಾಗಿ ಆಸ್ತಮಾ ಬರುತ್ತದೆ. ಮೂಗಿನ ಸೊಳ್ಳೆಯಿಂದ ಅಧಿಕಾಧಿಕ ಸಿಂಬಳದ ಪ್ರವಾಹ ಹರಿಯುತ್ತಿದ್ದಲ್ಲಿ ರೋಗಿಯು ಆಸ್ತಮಾ ಬರಲಿದೆಯೆಂದು ತಿಳಿದು ಉಪವಾಸ, ವಿಶ್ರಾಂತಿಗಳಿಂದ ಅದನ್ನೆದುರಿಸಲಣಿಯಾಗಬೇಕು.

ನೆಗಡಿಯಿಂದಾಗಿ ಶ್ವಾಸಾಂಗಗಳು ಕೆರಳಿ ಶ್ವಾಸನಾಳಗಳ ಸಂಕೋಚಕ್ಕೆ ಉತ್ತೇಜನ ವೀಯಬಲ್ಲವು. ಅಲ್ಲದೆ ನೆಗಡಿಗೆ ಸಂಬಂಧಪಡದ ಸಾಧಾರಣ ಶ್ವಾಸಾಂಗಗಳ ಸಂಕೋಚವೂ ಕೆಲವೊಮ್ಮೆ ಆಘಾತವನ್ನುಂಟುಮಾಡುತ್ತದೆ. ಆಸ್ತಮಾ ಆಘಾತ ಒಮ್ಮಿಂದೊಮ್ಮೆ ಉಂಟಾಗುತ್ತದೆಯಾದರೂ ಕೆಲವು ಸಲ ಮುನ್ಸೂಚನೆಗಳು ಕಂಡ ಬರುವುದೂ ಉಂಟು. ಆಲಸ್ಯ, ಖಿನ್ನತೆ ವಾತಸಂಬಂಧದ ಅಜೀರ್ಣ, ತಲೆನೋವು, ನಿದ್ರಾನಾಶ ಇವು ಮುಂಬರಲಿರುವ ಆಘಾತದ ಕೆಲ ಮುನ್ಸೂಚನೆಗಳಾಗಿವೆ.

ಆಸ್ತಮಾ ಆಘಾತಕ್ಕೆ ಮಾಡಬಹುದಾದ ಶೀಘ್ರ ಚಿಕಿತ್ಸೆ ಎಂದರೆ ಉಪವಾಸ ಮತ್ತು ವಿಶ್ರಾಂತಿ. ಆದರೆ ದೈಹಿಕ ನಿರ್ಬಲತೆಯುಂಟಾಗದಂತೆ ಮುಂಜಾಗರೂಕತೆ ವಹಿಸಲೇಬೇಕು. ಬಿಸಿ ಕಾಫಿ, ಬಿಸಿ-ನೀರಿನ ಸ್ನಾನ, ಹಾಗೆಯೆ ಹೃದಯಕ್ಕೆ ರಕ್ತವನ್ನು ತಳ್ಳಲು ಸಹಾಯ ಮಾಡುವಂತಹ ಕ್ರಮಗಳು ತೊಂದರೆ ನಿಲ್ಲಿಸಲು ಸಹಾಯವಾಗುತ್ತವೆ. ತೈಲಾಭ್ಯಂಗ ಹಾಗು ಶೀತ ಪದಾರ್ಥಗಳ ಸೇವನೆಯನ್ನು ವರ್ಜಿಸಬೇಕು. ಸಾಧಾರಣ ಆಘಾತ ಉಂಟಾಗಿದ್ದಲ್ಲಿ ಮುಕ್ಕಾಲಂಶಕ್ಕಿಂತ ಹೆಚ್ಚು ಹೊಟ್ಟೆಯನ್ನು ತುಂಬಿಸಿ ಕೊಳ್ಳಬಾರದು. ಆಸ್ತಮಾ ತೊಂದರೆಯುಳ್ಳವರು ಮನಸ್ಸುಬಂದಂತೆ ಹಾಗೂ ಕಂಠಪೂರ್ತಿ, ಇಲ್ಲವೆ ಸಿಕ್ಕದ್ದನ್ನೆಲ್ಲ ಸ್ವಾಹಾ ಮಾಡಬಾರದು. ಅಕಾಲದಲ್ಲಿ ಸೇವಿಸಿದ, ಒಗ್ಗದ ಆಹಾರ, ಅದೂ ಅವಸರ ಅವಸರವಾಗಿ ಮತ್ತು ಉದ್ರೇಕ ಸ್ಥಿತಿಯಲ್ಲಿ ಉಂಡ ಊಟ ತೊಂದರೆಗೆ ಕಾರಣವಾಗುತ್ತದೆ. ಭಾವನಾಪಲ್ಲಟಗಳಿಂದ ಒಡನೆ ಆಸ್ತಮಾ ಆಘಾತವುಂಟಾಗುತ್ತದೆ. ಉದ್ರೇಕ ಭಾವನೆಗಳು ಶ್ವಾಸಕೋಶದ ಮೇಲೆ ಒತ್ತಡ ಹಾಕುತ್ತವೆ. ಆಗ ಒಡನೆ ಆಘಾತಕ್ಕೆ ಆಸ್ಪದವಾಗುತ್ತದೆ

ಆಸ್ತಮಾ ರೋಗಕ್ಕೊಳಪಟ್ಟಿರುವವರು ಓಡಬಾರದು, ವೇಗವಾಗಿ ನಡೆಯಲೂ ಬಾರದು, ಬಹಳ ಜಾಗ್ರತೆಯಿಂದಿದ್ದು ಮನಸ್ಸಿಗೆ ಪ್ರಯಾಸವಾಗಲು ಬಿಡಬಾರದು. ಪ್ರಾಪಂಚಿಕ ದುಃಖದತ್ತ ಹೆಚ್ಚು ಗಮನ ಕೊಡಬಾರದು. ಯಾವಾಗಲೂ ಆ ವ್ಯಕ್ತಿಯು ಶಾಂತವಾಗಿದ್ದು ತಾಳ್ಮೆಯಿಂದಿರಬೇಕು. ದೈಹಿಕ, ವಾಚಿಕ ಹಾಗು ಮಾನಸಿಕ ಶ್ರಮಕ್ಕೆಡೆಕೊಡಲೇಬಾರದು. ನಿಶ್ಶಬ್ದವಾಗಿದ್ದು, ಸ್ವಲ್ಪ ಆಹಾರವನ್ನು–ಆಹಾರ ಸೇವಿಸದಿದ್ದರೂ ಚಿಂತೆಯಿಲ್ಲ—ಸೇವಿಸುತ್ತಿದ್ದಲ್ಲಿ ಆಘಾತದಿಂದ ಬಹಳಮಟ್ಟಿಗೆ ಬಿಡುಗಡೆ ಪಡೆದು ಕೊಳ್ಳಬಹುದು.

ಆಸ್ತಮಾ ತೊಂದರೆಯುಳ್ಳ ವ್ಯಕ್ತಿಯು ದೊಡ್ಡ

ಸಭೆ ಅಥವಾ ಗೋಷ್ಠಿಯ ಗುಲ್ಲಿನ ಮಧ್ಯ ಕೂತುಕೊಂಡಾಗ ಆಘಾತಕ್ಕೊಳಪಡಬಹುದು. ಆದರೆ ಸುಮಧುರ ಸಂಗೀತಕ್ಕೆ ಈ ದೆವ್ವದ ಕಾಟವನ್ನು ಕಡಿಮೆ ಮಾಡುವ ಮಹಾ ಶಕ್ತಿ ಇದೆ. ಹಾಲು, ತುಪ್ಪ, ಮಜ್ಜಿಗೆ ಮೊಸರು, ಎಣ್ಣೆ ಮತ್ತು ಶೀತ ಪದಾರ್ಥಗಳನ್ನು ರೋಗಿಯು ಸೇವಿಸಬಾರದು. ಬೇಳೆ ಹಾಗೂ ಕೆಂಪು ಕುಂಬಳ ಕಾಯಿ ಮುಂತಾದ ವಾಯುಮಯ ಪದಾರ್ಥಗಳನ್ನು ವರ್ಜಿಸಬೇಕು.

ಒಂದು ವೇಳೆ ಆಸ್ತಮಾ ಆಘಾತಕ್ಕೊಳಪಟ್ಟಿರುವ ವ್ಯಕ್ತಿಯು ಹೊಟ್ಟೆ ತುಂಬಾ ಊಟ ಮಾಡಿದಲ್ಲಿ ರಾತ್ರಿ ಒಡನೆ ಅವನು ನಿದ್ದೆ ಮಾಡ ಮಾಡಬಾರದು, ಹೊಟ್ಟೆ ಹಗುರವಾಗುವವರೆಗೆ ವಜ್ರಾಸನದಲ್ಲಿ ಕುಳಿತುಕೊಂಡಿದ್ದು, ನಂತರ ಮಲಗಬೇಕು. ಪಕ್ಕಕ್ಕೆ ಮುಖ ಮಾಡಿ ಮಲಗಿದಲ್ಲಿ ಎದೆಗೆ ಶ್ರಮವಾಗುತ್ತದೆ, ಹಾಗಾಗದಂತೆ ನೋಡಿಕೊಳ್ಳಬೇಕು. ಸೌಮ್ಯ ಆಘಾತದಲ್ಲಿ ದೀರ್ಘ ಶ್ವಾಸೋಚ್ಛ್ವಾಸವು ತೊಂದರೆಯನ್ನು ಕಡಿಮೆಗೊಳಿಸಲು ಸಹಾಯಕವಾಗುತ್ತದೆ. ಪ್ರಭಾತ ಕಾಲದಲ್ಲಿ ಪಿಚಕಾರಿಯಿಂದ ಅಥವಾ ರಾತ್ರಿ ಭೇದಿ ಔಷಧಿ ಸೇವಿಸಿ ಕರುಳನ್ನು ಸ್ವಚ್ಛವಾಗಿಟ್ಟುಕೊಳ್ಳಬೇಕು.

ಬೆಳಗಿನ ಹಾಗೂ ಸಾಯಂಕಾಲದ ಬಿಸಿಲಿಗೆ ಆದಷ್ಟು ದೇಹವನ್ನೊಡ್ಡಬೇಕು. ಚಳಿಗಾಲದಲ್ಲಿ ಎದೆಯನ್ನು ಹಾಗೂ ಮುಖವನ್ನು (ಅದರಲ್ಲೂ ಮೂಗನ್ನು) ಬೆಂಕಿಯ ಬಳಿ ಬಿಸಿಮಾಡಿಕೊಂಡರೆ ಒಳ್ಳೆಯದು. ರೋಗಿಯ ಮೇಲೆ ಸೂರ್ಯರಶ್ಮಿಉತ್ತಮ ಪರಿಣಾಮವನ್ನುಂಟುಮಾಡುತ್ತದೆ.

ಕೆಲವೊಮ್ಮೆ ರಾತ್ರಿ ದೀಪದ ಬಳಿ ಓದುತ್ತಿರುವಾಗ, ಬಹಳವಾಗಿ ಮಾನಸಿಕ ಏಕಾಗ್ರತೆಗೊಳಗಾಗಿರುವಾಗ, ಒಮ್ಮಿಂದೊಮ್ಮೆಲೆ ಗಂಟಲಿನಲ್ಲಿ ಉಸಿರು ಸಿಕ್ಕಿಕೊಂಡಂತಾಗುತ್ತದೆ, ಆಗ ಒಡನೆ ಆಸ್ತಮಾ ಆಘಾತ ಉಂಟಾಗುತ್ತದೆ. ಕೆಲವೊಮ್ಮೆ ಒಂದು ಸ್ಥಿತಿಯಲ್ಲಿ ಕುಳಿತು ಅಥವಾ ಮಲಗಿಕೊಂಡಿದ್ದು ಒಮ್ಮೆಲೆ ಬದಲಾಯಿಸಿದಾಗ, ಗಂಟಲು ಹಾಗೂ ಎದೆಗೆ ಆಯಾಸವಾಗಿ ಆಘಾತಕ್ಕೊಳಪಡಬೇಕಾಗುತ್ತದೆ. ಅದರ ತೀವ್ರತೆಯು ವೇದನೆಯ ಮೇಲೆ ಹೊಂದಿಕೊಂಡಿದೆ. ಬಹಳ ನಕ್ಕರೂ ಎದೆಗೆ ಶ್ರಮ ಉಂಟಾಗುತ್ತದೆ. ಮೂಗಿನೊಳಗೆ ಉದ್ರೇಕಜನಕ ಹಾಗೂ ಕಟು ಸಾರವು ಹೋದಾಗ ಗಂಟಲುನಾಳ ಕಟ್ಟಿದಂತಾಗುವ ಅನುಭವವಾಗುತ್ತದೆ, ಒಡನೆ ಬಾಧೆಗೊಳಪಡಬೇಕಾಗುತ್ತದೆ.

ಆಸ್ತಮಾ ಚಿಕಿತ್ಸೆಗೆ ಎರಡು ಮುಖಗಳಿವೆ. ಒಂದು ತೀವ್ರವಾದ ರೋಗೋಲ್ಬಣವಾದಾಗ ಕೈಕೊಳ್ಳಬೇಕಾದ ಚಿಕಿತ್ಸೆ; ಇನ್ನೊಂದು ರೋಗಿಗೆ ಮೇಲಿಂದ ಮೇಲೆ ಬರುವ ಆಸ್ತಮಾ ಆಘಾತಕ್ಕೆ ಕಾರಣವಾದ ಆತನ ಪ್ರಕೃತಿವೈಚಿತ್ರ್ಯವನ್ನು ಗುಣಪಡಿಸಲು ಕೈಕೊಳ್ಳುವ ದೀರ್ಘಕಾಲೀನ ಚಿಕಿತ್ಸೆ. ಈ ಎರಡನೆಯ ಮುಖದಲ್ಲಿ ರೋಗಿಯೇ ತನ್ನ ವೈದ್ಯನಾಗಬೇಕಾಗುತ್ತದೆ. ಮತ್ತಾವ ರೋಗಕ್ಕಿಂತಲೂ ಇದರಲ್ಲಿ ಆಯಾ ವ್ಯಕ್ತಿಯ ಸ್ವಂತ ಪ್ರಕೃತಿ ವೈಚಿತ್ರ್ಯದ ಪಾತ್ರ ಹೆಚ್ಚಾಗಿರುವುದರಿಂದ ಇದರಲ್ಲಿ ರೋಗಿಯ ಹೊಣೆ ದೊಡ್ಡದು. ತೀವ್ರಾಘಾತವಾದಾಗ ಮಾತ್ರ ವೈದ್ಯನ ಸಹಾಯ ಅನಿವಾರ್ಯವಾಗುತ್ತದೆ.

ರೋಗಿಯು ಖಾಸಶ್ವಾಸಕ್ಕೆ ತುತ್ತಾಗುವ ತನ್ನ ಪ್ರವೃತ್ತಿಯನ್ನು ದೂರೀಕರಿಸಬೇಕಾದರೆ ನಿರಂತರ ಜಾಗರೂಕತೆ, ಆತ್ಮ ಸಂಯಮ, ಆಹಾರ ವಿಹಾರಗಳಲ್ಲಿ ಯೋಗ್ಯವಾದುದನ್ನೇ ಸ್ವೀಕರಿಸುವುದು ಈ ಕ್ರಮಗಳನ್ನು ಅನುಸರಿಸಬೇಕು. ಪಥ್ಯ, ಹೊತ್ತಿಗೆ ಸರಿಯಾದ ಊಟ, ಕಾಲಕಾಲಕ್ಕೆ ಉಪವಾಸ, ಆಸನ, ಪ್ರಾಣಾಯಾಮ, ಸೂರ್ಯಸ್ನಾನ, ಸೂರ್ಯನಮಸ್ಕಾರ, ಯೋಗ್ಯ ವ್ಯಾಯಾಮ, ಬಯಲು ಹವೆಯಲ್ಲಿರುವುದು, ಆಳವಾಗಿ ಉಸಿರಾಡಿಸುವಿಕೆ, ಮಿತ ಜೀವನ, ವ್ಯವಸ್ಥಿತ ಆಚಾರ, ರೋಗವನ್ನು ಉಲ್ಬಣಗೊಳಿಸುವ ಕಾರಣಗಳನ್ನು ಗಮನಿಸಿ ಅವುಗಳಿಂದ ದೂರವಿರುವಿಕೆ ಮೊದಲಾದವು ಅವಶ್ಯವಾಗಿವೆ. *

# ಕೆಮ್ಮು ಮತ್ತು ನೆಗಡಿಯನ್ನು ನಿಶ್ಚಿತವಾಗಿ ಉಪಶಮನಗೊಳಿಸಲು





# ಸಿರೋಲಿನ್ 'ರೋಶ್'

## ತೆಗೆದುಕೊಳ್ಳಿರಿ

ನೆಗಡಿ ಮತ್ತು ಕೆಮ್ಮನ್ನು ಎಂದಿಗೂ ಅಲಕ್ಷಿಸಬೇಡಿರಿ — ಅವನ್ನು ನಿಶ್ಚಿತವಾಗಿ, ನಿರಪಾಯಕರವಾಗಿ ಮತ್ತು ಶೀಘ್ರವಾಗಿ ಉಪಶಮನಗೊಳಿಸಲು ಸಿರೋಲಿನ್ ತೆಗೆದುಕೊಳ್ಳಿರಿ. ಅದು ಕೆಮ್ಮನ್ನು ಕೇವಲ ತಾತ್ಕಾಲಿಕವಾಗಿ ನಿಲ್ಲಿಸುವುದಿಲ್ಲ — ಕೆಮ್ಮಿಗೆ ಮೂಲವಾದ ಹಾನಿಕಾರಕ ರೋಗಾಣುಗಳನ್ನೆ ಅದು ಪ್ರತಿಭಟಿಸುತ್ತದೆ. ಸಿರೋಲಿನ್ ಗಂಟಲು ನೋವಿಗೆ ಉಪಶಮನವನ್ನೀಯುತ್ತದೆ, ಕಫನಿವಾರಣೆಗೆ ನೆರವಾಗುತ್ತದೆ ಮತ್ತು ಅತ್ಯಂತ ದುರ್ದಮ ಕೆಮ್ಮನ್ನೂ ಶೀಘ್ರವಾಗಿ, ಸೌಮ್ಯವಾಗಿ ಪರಿಹರಿಸುತ್ತದೆ. ಅದು ನಿರಪಾಯಕರವಾಗಿಯೂ, ಪರಿಣಾಮಕಾರಿಯಾಗಿಯೂ ಇದ್ದು, ಸೇವಿಸಲು ಚೆನ್ನಾಗಿರುವುದರಿಂದ ಮನೆಯವರೆಲ್ಲರ ಮೆಚ್ಚಿಕೆಗೆ ಪಾತ್ರವಾಗುತ್ತದೆ. ಮಕ್ಕಳಿಗಂತೂ ಸಿರೋಲಿನ್ ಸೇವಿಸುವುದೆಂದರೆ ಬಹಳ ಆನಂದ!




**ಮನೆಯಲ್ಲಿ ಸಿರೋಲಿನನ್ನು ತಪ್ಪದೆ ಇಟ್ಟುಕೊಳ್ಳಿರಿ**

'ರೋಶ್' ಉತ್ಪಾದನ   ಸೋಲ್ ಡಿಸ್ಟ್ರಿಬ್ಯೂಟರ್ಸ್ : ವೋಲ್ಟಾಸ್ ಲಿಮಿಟೆಡ್

JWT-VT-2400

ಕರ್ನಾಟಕ ಮಹಾರಾಷ್ಟ್ರ ಗಡಿಭಾಗದ ಒಂದು ಮಹಾರಾಷ್ಟ್ರೀಯ ಹಳ್ಳಿಯಲ್ಲಿ
ಐಕ್ಯ-ಸಹಕಾರಗಳು ಜೀವನಕ್ಕೆ ನೂತನ ರೂಪ ಕೊಟ್ಟಿವೆ

# ಪಾಲ ತೋರಿಸಿದ ದಾರಿ

ಶ್ರೀಪಾದ ಜೋಶಿ

ನಾವು ಊರಲ್ಲಿ ಕಾಲಿಡುತ್ತಲೇ ಊರ ಪ್ರಮುಖ ವ್ಯಕ್ತಿಗಳೇ ಸೇರಿ ಹಾಕುತ್ತಿದ್ದ ಹಂದರ ಕಂಡು, 'ಯಾರ ಮದುವೆ?' ಎಂದು ಕೇಳಿದೆವು.

"ನಮ್ಮ ಪೈಕೀನೇ," ಎಂದರು ಗೌಡರು.

"ಅಂದರೆ ಯಾರದು ?" ನಾನು.

"ಈ ನಮ್ಮ ಗೋಸಾವಿ ಬುವಾನ ಮಗನ ಲಗ್ನ", ಗೋಪಾಳಕಾಕಾ ನಗನಗುತ್ತಾ ಉತ್ತರಿಸಿದರು.

ಗೋಸಾವಿಯ ಲಗ್ನದ ಹಂದರ ಊರ ಗೌಡರು ಹಾಕುವುದನ್ನು ಕಂಡು ಆಶ್ಚರ್ಯವೆನಿಸಿತು. "ಇದು ಹೇಗೆ?" ಎಂದು ಕೇಳಿಯೆಬಿಟ್ಟೆ.

"ಅವನೂ ನಮ್ಮವನೇ ಅಲ್ಲವೇನು ? ಅವನ ಜನರ ಮನೆಯೆಂದರೆ ಅವನದೊಂದೇ. ಒಬ್ಬನೆ ಏನು ಮಾಡಿಯಾನು ? ಅಂತೆಯೆ ನಾವೆಲ್ಲರೂ ಸಹಾಯಕ್ಕಿದ್ದೇವೆ," ಗೋಪಾಳಕಾಕಾ ವಿವರಿಸಿದರು.

ಗ್ರಾಮವಿಕಾಸ ಕೇಂದ್ರದ ಕಚೇರಿ. ಗ್ರಾಮವಿಕಾಸ ಕಾರ್ಯಕರ್ತನಿಗೆ ಜಡ್ಡಾಗಿದೆ. ಊರಿಗೆ ಊರೆ ಅವನ ಆರೈಕೆಗೆ ಓಡಿಬರುತ್ತಿದೆ. "ಶ್ರಮವಾಗಿದೆ. ಸಾಮಾನ್ಯ ಅಸ್ವಸ್ಥ. ಸ್ವಲ್ಪ ವಿಶ್ರಾಂತಿ ಹೊಂದಿದರೆ ಜ್ವರ ಇಳಿಯುವುದು. ಚಿಂತಿಸಬೇಕಾಗಿಲ್ಲ" ಎಂದು ಆ ತರುಣ ಕಾರ್ಯಕರ್ತ ಹೇಳುತ್ತಲೇ ಇದ್ದಾನೆ. ಆದರೂ ಅವರ ಚಿಂತೆ ಕಡಿಮೆಯಾಗಿಲ್ಲ. ಅವನಿಗೆ ದೃಷ್ಟಿಯಾಗಿದೆ ಎಂದು ತಿಳಿದು ಒಬ್ಬ ಮುದುಕಿ ಉಪ್ಪು-ಒಣಮೆಣಸಿನಕಾಯಿ ತರುತ್ತಾಳೆ. ನಿವಾಳಿಸಿ ಒಗೆದರೆ ದೋಷ ಪರಿಹಾರವಾಗುವುದೆಂದು ಅವಳ ಕಲ್ಪನೆ. ಅವಳ ಈ ಭ್ರಮೆಯನ್ನು ಅಳಿಸಲೀತ ಪ್ರಯತ್ನಮಾಡುತ್ತಾನೆ. ಆದರೆ ಆಕೆ ಕೇಳುವಳೆ? ಅವಳ ಪ್ರೀತಿಯಿಂದ ಮುಗ್ಧನಾಗಿ ಈತ ತುಂಬಿದ ಕಂಗಳಿಂದ ಅವಳನ್ನು ಬರಿಯೆ ನೋಡುತ್ತ ನಿಲ್ಲುವನು.

ಯಾವೂರವನೊ ಈ ಊರಿಗೆ ಬಂದು ಆತ ಇಲ್ಲಿಯವರ ಪ್ರೀತಿಯಿಂದ ಇದೇ ಊರವನೊಬ್ಬನಾಗಿ ಬಿಟ್ಟಿದ್ದಾನೆ. ಬೇರೆ ಯಾವ ಸಾಮಾಜಿಕ ಕಾರ್ಯಕರ್ತನ ಮೇಲೂ ಜನ ಈ ಬಗೆಯಲ್ಲಿ ಪ್ರೇಮದ ಮಳೆ ಕರೆದಿರಲಿಕ್ಕಿಲ್ಲ.

ಪಾಲದಲ್ಲಿ ಇಂಥ ದೃಶ್ಯಗಳು ಪ್ರತಿನಿತ್ಯ ನೋಡಸಿಗುವವು.

ಕೊಲ್ಲಾಪುರ ಜಿಲ್ಲೆಯಲ್ಲಿ ಗಾರಗೋಟ್ಟಿಯಿಂದ ಗಡಹಿಂಗ್ಲಜಕ್ಕೆ ಹೋಗುವ ದಾರಿಯಲ್ಲಿ ಸುಮಾರು ೨೭ ಮೈಲಿನ ಮೇಲೆ ಭುದರಗಡ ಎಂಬ ಇತಿಹಾಸ ಪ್ರಸಿದ್ಧ ಕೋಟೆಯ ಅಡಿಯಲ್ಲಿ ಪಾಲ ಎಂಬೊಂದು ಹಳ್ಳಿ ಇದೆ. ದೂರದಿಂದ ನೋಡಿದರೆ ತನ್ನ ಹೆಸರನ್ನೇ ಸಾರ್ಥಕಗೊಳಿಸಲೆಂಬಂತೆ ಪಾಲಗ್ರಾಮ (ಮರಾಠಿಯಲ್ಲಿ ಹಲ್ಲಿ ಎಂದರ್ಥ) ಗುಡ್ಡಕ್ಕೆ ಅತುಕೊಂಡಂತೆ ತೋರುತ್ತದೆ. ಆದರೂ ಹಲ್ಲಿಯಿಂದಲ್ಲ ಇದಕ್ಕೆ

"ಕಿರ್ಲೋಸ್ಕರ" ದಿಂದ

ಈ ಹೆಸರು ಬಂದದ್ದು. ಹಿಂದೆ ಛತ್ರಪತಿ ಶಿವಾಜಿ ಮಹಾರಾಜರು ದಕ್ಷಿಣಕ್ಕೆ ದಿಗ್ವಿಜಯಕ್ಕೆ ಹೋದಾಗ ಇಲ್ಲಿ ಪಾಳ್ಯ (ಶಿಬಿರ) ಹೂಡುತ್ತಿದ್ದರು. ಅದರಿಂದೇ ಮುಂದೆ ಇಲ್ಲಿ ಊರು ನಿರ್ಮಾಣವಾದಾಗ ಅದಕ್ಕೆ ಪಾಲ ಎಂದು ಹೆಸರಾಯಿತು.* ಹಳೇ ವಸತಿ ಇನ್ನೂ ಈ ಊರಿನಿಂದ ಮೂರು ಫರ್ಲಾಂಗ್ ದೂರದಲ್ಲಿ ಗುಡ್ಡದಲ್ಲಿ ಮೇಲುಗಡೆ ಇದೆ. ಅಲ್ಲಿ ಇಂದಿಗೂ ಗ್ರಾಮದೇವರಾದ ಕೇದಾರಲಿಂಗನ ಗುಡಿ ಇದೆ. ಗ್ರಾಮಸ್ಥರೆಲ್ಲ ಸೇರಿ ಅದನ್ನು ಪುನರುಜ್ಜೀವನಗೊಳಿಸಿದ್ದಾರೆ. ಹಳೇದರಲ್ಲಿ ನೀರಿನ ತೊಂದರೆಯಾಗುತ್ತಿತ್ತಾದ್ದರಿಂದ ನೀರಿನ ಸ್ಥಳಕ್ಕೇ ಕೆಳಗಡೆ ಊರನ್ನು ಸ್ಥಳಾಂತರಿಸಿಲಾಯಿತು.

ಊರಿಂದ ಒಂದೂವರೆ ಮೈಲು ದೂರದಲ್ಲಿ ಒಂದು ಪ್ರಚಂಡ ಗುಹೆ ಇದೆ. ೧೯೪೨ ರ ಚಳವಳಿಯಲ್ಲಿ ಗಾರಗೋಟಿಯ ಖಜಾನೆಯ ಮೇಲೆ ದಾಳಿ ಮಾಡಿದ್ದ ಕ್ರಾಂತಿಕಾರರು ಇಲ್ಲಿಯೇ ಇರುತ್ತಿದ್ದರು. ಒಳಗೆ ಪ್ರವೇಶಿಸಲು ೧೧ ದ್ವಾರಗಳಿದ್ದು ಒಳಗಡೆ ೧೫೦ ಜನ ಕೂತುಕೊಳ್ಳಬಹುದಾದ ದೊಡ್ಡ ಪ್ರಾಕಾರವಿದೆ. ಒಳಗೆ ಸಿಹಿ ನೀರಿನ ಒಂದು ಬಾವಿ ಇದ್ದು ಈ ಪ್ರದೇಶದ ಪ್ರೇಕ್ಷಣೀಯ ಸ್ಥಳಗಳಲ್ಲಿ ಈ ಗುಹೆಯೊಂದು.

ಊರ ಮಧ್ಯದಲ್ಲಿರುವ ವಿಠ್ಠಲ ರಖುಮಾಯಿ ಚೌಕಿನಲ್ಲಿ ಇರುವ ಅತ್ತಿಯ ಮರದ ಮೇಲೆ ಕಟ್ಟಿರುವ ದೊಡ್ಡ ಹಲಗೆ ನಮ್ಮ ಕಣ್ಣಿಗೆ ಬೀಳುತ್ತದೆ. ಅದರ ಮೇಲೆ ದಪ್ಪಕ್ಷರಗಳಲ್ಲಿ ಹೀಗೆ ಬರೆದದ್ದಾಗಿದೆ:

ಗ್ರಾಮ: ಪಾಲ. ತಾಲೂಕ: ಭುದರಗಡ. ಜಿಲ್ಲೆ: ಕೊಲ್ಲಾಪುರ. ಜನಸಂಖ್ಯೆ: ೬೨೫. ಕ್ಷೇತ್ರಫಲ: ೭೫೮ ಎಕರೆ. ಸಾಗುಭೂಮಿ: ३೫೦ ಎಕರೆ. ಬಾಗಾಯತು (ತೋಟಪಟ್ಟಿ): ೭೫ ಎಕರೆ. ಸಮುದ್ರಪಾತಳಿಯಿಂದ ಎತ್ತರ: ೨೨೦೦ ಅಡಿ. ಮಳೆ: ೬೦" ರಿಂದ ೭೦". ಪ್ರೇಕ್ಷಣೀಯ ಸ್ಥಳಗಳು: ಮಾವಿನತೋಪು ಮತ್ತು ಗವಿ.

ಇಂಥ ಚಿಕ್ಕ ಹಳ್ಳಿಯ ಇಂಥ ವಿವರಗಳನ್ನು ಊರ ಪ್ರಮುಖ ಸ್ಥಳದಲ್ಲಿ ಬರೆದು ಹಾಕುವುದು ಅಭಿನವ ಮತ್ತು ಅನುಕರಣೀಯ ಯೋಜನೆಯಲ್ಲವೆ?

ಪ್ರತ್ಯೇಕ ಗುಡಿ ಇದ್ದ ಮಾರುತಿಯನ್ನು ವಿಠ್ಠಲ ರಖುಮಾಯಿಯ ಗುಡಿಯಲ್ಲೇ ಇಟ್ಟು ಅಲ್ಲಿಯೇ ಶಾಲೆ ಪ್ರಾರಂಭಿಸಿ ಮತ್ತೆರಡು ಕೋಣೆಗಳನು ಅದರ ಬದಿಯಲ್ಲೇ ವಿಸ್ತರಿಸಿಕೊಂಡಿದ್ದಾರೆ. ಐದು ಇಯತ್ತೆಯ ವರೆಗೆ ಮರಾಠಿಯಲ್ಲಿ ಪ್ರಾಥಮಿಕ ಶಿಕ್ಷಣ ದೊರೆಯುತ್ತದೆ. ೧೩೨ ವಿದ್ಯಾರ್ಥಿಗಳಿದ್ದಾರೆ. ಮೊನ್ನೆಮೊನ್ನೆಯ ವರೆಗೆ ಮೂರೇ ಇಯತ್ತೆಯ ವರೆಗೆ ಶಾಲೆ ಇದ್ದು ೪೦ ವಿದ್ಯಾರ್ಥಿಗಳು ಮಾತ್ರ ಇದ್ದರು. ವಿದ್ಯಾರ್ಥಿನಿಯರ ಸಂಖ್ಯೆ ಇಂದಿಗೂ ಕಡಿಮೆಯೆ.

ಇದಕ್ಕಿಂತ ಆಶ್ಚರ್ಯದ ಸಂಗತಿ ಎಂದರೆ ಊರೊಳಗಿನ ರಸ್ತೆ. ೧೨-೧೪ ಅಡಿ ಅಗಲವಾಗಿದೆ. ಹಿಂದೆ ३-೪ ಅಡಿಗಿಂತ ಅಗಲವಲ್ಲದ ಈ ಹಾದಿ ಈಗ ಇಷ್ಟು ವಿಸ್ತಾರವಾಗಿದೆ.

ರಸ್ತೆ ಅಗಲ ಮಾಡಲು ಯಾರ ಮೇಲೂ ಒತ್ತಾಯ ತರಲಿಲ್ಲ. ಊರವರನ್ನು ಒತ್ತಟ್ಟಿಗೆ ಕರೆಸಿ ರಸ್ತೆ ಅಗಲ ಮಾಡಬೇಕಾದ ಅಗತ್ಯವನ್ನು ವಿವರಿಸಲಾಯಿತು. ಜನರೇ ಸೇರಿ ರಸ್ತೆ ಎಷ್ಟು ಅಗಲವಿರಬೇಕೆಂದು ನಿರ್ಧಯಿಸಿದರು. ಮುಂಬಂದಿದ್ದ ತಮ್ಮತಮ್ಮ ಮನೆಗಳನ್ನು ಹಿಂದೊತ್ತಿಕೊಂಡರು. ಅಂಗಳ ಕಳಕೊಂಡವರು ಹಲವರು, ಹಿತ್ತಲುಗಳನ್ನು ಕಳಕೊಂಡವರು ಕೆಲವರು, ದೊಡ್ಡಿಗಳನ್ನು ಕಳಕೊಂಡವರು ಕೆಲವರು.

ಕಾಯಿದೆಯ ಒತ್ತಾಯವಿಲ್ಲದೆ ಒಂದು ಗಜ ಸ್ಥಳವನ್ನೂ ಯಾರೂ ಬಿಟ್ಟು ಕೊಡುವುದಿಲ್ಲ; ಆದರೆ ಪಾಲದಲ್ಲಿ ೬೦ ಕುಟುಂಬಗಳಿಂದ ಸುಮಾರು ३೫ ಸಾವಿರ ಚದುರ ಅಡಿಗಳಷ್ಟು ಸ್ಥಳ ಊರಿಗೆ ದೊರಕಿತು. ಇದರಲ್ಲಿ ಮೂವರು ಸಂಪೂರ್ಣ ಮನೆಗಳನ್ನೇ ರಸ್ತೆಗೆ ಕೊಡಬೇಕಾ

* ಪಾಲ ಎಂಬುದು ಕನ್ನಡ ಪಾಳ್ಯ ಪಾಳೆಯದ್ದೇ ಅಪಭ್ರಂಶವಿರಬೇಕೆನಿಸುವುದು.

ಯಿತು.

ಇವರಿಗಾಗಿ ಬೇರೆ ಕಡೆ ಊರವರು ಮನೆ ಕಟ್ಟಿ ಕೊಡಲಿದ್ದಾರೆ.

ರಂಗರಾವ್ ಪಾಟೀಲರು ವ್ಯಾಯಾಮ ಶಾಲೆ ಕಟ್ಟಲು ಸ್ಥಳ ಕೊಟ್ಟಿದ್ದಾರೆ. ತುಕಾರಾಮ ಪಾಟೀಲರು ತಮ್ಮ ಒಂದು ಮನೆಯನ್ನೇ ಕೊಟ್ಟಿದ್ದಾರೆ!

ಯಾವ ಯೋಜನೆಯಲ್ಲೂ ಸಹಸಾ ಶ್ರೀಮಂತರೇ ಲಾಭ ಹೊಂದಿ ಬಡವರು ಮತ್ತಿಷ್ಟು ಬಡವರಾಗುತ್ತಾರೆಂದು ನಾವು ಬೇರೆ ಹಳ್ಳಿಗಳಲ್ಲಿ ಕಂಡರೂ ಇಲ್ಲಿ ಆ ದೋಷ ಸಂಭವಿಸಿಲ್ಲ. ಹಾಗಾಗದಿರಲೆಂದು ಮೊದಲಿನಿಂದಲೇ ಹಲವು ಬಗೆಯಲ್ಲಿ ಜಾಗರೂಕತೆ ವಹಿಸಲಾಗಿದೆ. ಅವನ್ನೂ ನಿರುಕಿಸುವುದು ಇಲ್ಲಿ ಯುಕ್ತ.

ಊರೊಳಗಿನ ಒಟ್ಟು ಮನೆಗಳು ೮೫. ಪ್ರತಿ ಮನೆಯಿಂದ ಒಬ್ಬೊಬ್ಬಾಳು ಊರ ಕೆಲಸಕ್ಕೆ ಬರಬೇಕೆಂದು ನಿಯಮ ಮಾಡಿಕೊಂಡಿದ್ದಾರೆ. ವಾರದಲ್ಲಿ ಶುಕ್ರವಾರ ಮತ್ತು ಮಂಗಳವಾರ ಈ ಎರಡು ದಿನ 'ಪಾಲಸೋಣಿಕೆ' (ಅಂದರೆ ಆ ದಿನ ಖಾಸಗೀ ಕೆಲಸ ಮಾಡುವುದಿಲ್ಲ). ಆ ಎರಡು ದಿನಗಳಲ್ಲಿ ಒಂದು ದಿನ ಈ ೮೫ ಪ್ರತಿನಿಧಿಗಳು ಸಾರ್ವಜನಿಕ ಕಾರ್ಯಕ್ಕಾಗಿ ಇನ್ನೊಂದು ದಿನ ಊರಲ್ಲಿ ಬಡ ರೈತರ ಸಹಾಯಕ್ಕಾಗಿಯೂ ಉಪಯೋಗಿಸುತ್ತಾರೆ. ಊರೊಳಗಿನ ತೀರ ಬಡವನನ್ನು ಆರಿಸಿ ಆತನಿಗೆ ಈ ದಿನ ಇವರು ಸಹಾಯ ಮಾಡುತಾರೆ. ಈ ರೀತಿ ಸಹಾಯ ಮಾಡಿ ಈಗ ಅಲ್ಲಿ ಒಬ್ಬ ತೀರ ಬಡರೈತನ ಹೊಲದಲ್ಲಿ ಅಗೆಯುವುದು, ಒಡ್ಡು ಹಾಕುವುದು, ನೆಲ ಸಮನಾಗಿ ಮಾಡಿಕೊಡುವುದು ಮುಂತಾದ ಕೆಲಸ ಮಾಡಿಕೊಟ್ಟಿದ್ದಾರೆ.

ಕೆಳದರ್ಜೆಯಲ್ಲಿರುವ ವ್ಯಕ್ತಿಯ ಆರ್ಥಿಕ ಮಟ್ಟ ಏರಿಸುವುದೂ ಮತ್ತು ಒಟ್ಟು ಉತ್ಪಾದನೆ ಹೆಚ್ಚಿಸುವುದೂ ಇವರ ಪ್ರಯತ್ನದ ಉದ್ದೇಶ.

ಬಡವರಿಗಾಗಿಯೂ ವಾರದಲ್ಲಿ ಒಂದು ದಿನ ಊರು ದುಡಿಯುವುದರಿಂದ ಬಡವರೂ ಸಾರ್ವಜನಿಕ ಕಾರ್ಯದಲ್ಲಿ ಆಸೆ ವಹಿಸುತ್ತಾರೆ. ಆದರೆ ಆ ಎರಡು ದಿನ ದುಡಿಮೆ ತಪ್ಪಿ ಬಡವರಿಗೆ ಹೊಟ್ಟೆಗಿಲ್ಲದಂತಾಗದಂತೆಯೂ ಊರವರು ಏರ್ಪಾಡು ಮಾಡಿದ್ದಾರೆ. ದುಡ್ಡಿದರೂ ದುಡಿಯಲು ಜನರಿಲ್ಲದವರಲ್ಲಿ ಶುಕ್ರವಾರದಂದು ದುಡಿದು ಬಂದ ದುಡ್ಡನ್ನು ಸಾರ್ವಜನಿಕ ನಿಧಿಯಾಗಿ ಸಂಗ್ರಹಿಸುತ್ತಾರೆ.

ಊರ ಮೇಲ್ಗಡೆ ಒಂದು ತೋಪು ಇದೆ. ಅಲ್ಲಿ ಕಾಳಮ್ಮನ ಗುಡಿಯಿದ್ದು ಅದರ ಹತ್ತಿರದಲ್ಲೇ ಎರಡು ಸಿಹಿ ನೀರಿನ ಝರಿಗಳಿವೆ. ಒಂದಕ್ಕೆ ಕುಂಡವನ್ನು ಕಟ್ಟಿ ೩೨೦೦ ಅಡಿ ಉದ್ದದ ಪ್ಯಾಪ್‌ನಿಂದ ನೀರನ್ನು ಊರಲ್ಲಿ ತಂದು ಗಚ್ಚಿನಿಂದ ಕಟ್ಟಿಸಿದ ಹೌದಿನಲ್ಲಿ ಬಿಡುವ ಏರ್ಪಾಡು ಮಾಡಿದ್ದಾರೆ. ಬೇಸಿಗೆಯಲ್ಲಿ ಈ ಪ್ರವಾಹ ಅಟ್ಟಸುವದಿಲ್ಲವಾದ್ದರಿಂದ ಯಾವಾಗಲೂ ನೀರು ಉಪಲಬ್ಧವಾಗಿದೆ. ಇದನ್ನು ಕಟ್ಟಿಸಿ ಊರಿಗೆ ನೀರು ಬರುವಂತೆ ಮಾಡಲು ೬೦೦೦ ರೂಪಾಯಿ ಖರ್ಚಾಗಿದ್ದು ಅದನ್ನು ಲೋಕಲ್ ಬೋರ್ಡ್‌ನವರು ಕೊಟ್ಟಿದ್ದಾರೆ. ಮತ್ತು ಊರವರು ಶ್ರಮದಾನ ಮಾಡಿದ್ದಾರೆ.

ಈ ಪ್ರವಾಹಕ್ಕೆ ಬೇರೆ ಹಲವು ಸೆಲೆಗಳು ಬಂದು ಕೂಡಿ ಕಾವಲಿಯಾಗಿ ಹರಿಯುತಿದ್ದು ಇದರಿಂದ ೮೫ ಎಕರೆ ಹೊಲ ನೀರುಣ್ಣುತ್ತಿತ್ತು. ಈ ಲಾಭ ಕೆಲವರಿಗೇ ದೊರೆಯುತ್ತಿತ್ತು. ಆದರೆ ಎಲ್ಲರಿಗೂ ಸಮನಾಗಿ ಈ ಕಾವಲಿಯ ಉಪಯೋಗವಾಗಲೆಂದು ಊರವರು ಒಂದು ಕಡೆಗೆ ಕೆರೆತೋಡಿ ಈ ಪ್ರವಾಹವನ್ನು ಅದರಲ್ಲಿ ಬಿಟ್ಟರು. ಈ ನೀರನ್ನು ಈಗ ಒಕ್ಕಲತನಕ್ಕಾಗಿ ಎಲ್ಲರೂ ಉಪಯೋಗಿಸುತ್ತಿದ್ದು ಎಲ್ಲರಿಗೂ ಸರಿಯಾಗಿ ನೀರು ಹಂಚಲೆಂದೂ ನೀರು ವ್ಯರ್ಥ ಹೋಗಬಾರದೆಂದೂ ನೀರನ್ನು ಬಿಡಲು ಒಬ್ಬ ನೌಕರನನ್ನು ಇಡಲಾಗಿದೆ. ಇದರದೆ ದೊಡ್ಡ ಪ್ರಮಾಣದ ಉದಾಹರಣೆ ಗಾರಗೋಟಿ. ಅಲ್ಲಿ ನದೀ ನೀರನ್ನು ಇಂಜನ್ನಿನಿಂದಲೊ ಬಿಡುಗಾವಲಿಗಳಿಂದಲೊ ಶ್ರೀಮಂತರು ರೈತರು ಬಳಸಿ ಹೆಚ್ಚಾದ್ದನ್ನು ವ್ಯರ್ಥ

ಹಾಳು ಮಾಡಿ ಕಡೆಗೆ ಬೇಸಿಗೆಯಲ್ಲಿ ನೀರು ನೋಡಲಿಕ್ಕೂ ಸಿಗದಂತೆ ಮಾಡುತ್ತಾರೆ.

ಇಂತಿಷ್ಟೇ ನೀರು, ಅದು ಹಗಲು ಮಾತ್ರ—ಹೀಗೆ ಹಲವು ಕಟ್ಟುನಿಟ್ಟುಗಳಿರುವುದರಿಂದ ಪಾಲದಲ್ಲಿ ನೀರಿನ ಅಪವ್ಯಯವಾಗುವುದಿಲ್ಲ. ರಾತ್ರಿ ಇಡೀ ಈ ಕೆರೆ ತುಂಬುತ್ತದೆ. ಹಾಗು ಹಗಲು ಅದು ಬರಿದಾಗುತ್ತದೆ. ಆದ್ದರಿಂದ ಬಿಡುಗಾವಲಿಯ ಕಟ್ಟೆ ಒಡೆದರೆ ಕೂಡಲೆ ಗೊತ್ತಾಗುವುದು. ಇಲ್ಲಿ ಆದ ೧೫೦೦ ರೂಪಾಯಿಯ ಒಟ್ಟು ಶ್ರಮದಾನದಲ್ಲಿ ಶ್ರೀ ಮೌನಿ ವಿದ್ಯಾಪೀಠದ ಅಧ್ಯಾಪಕ ಭವನದ ೮೦ ವಿದ್ಯಾರ್ಥಿಗಳ ಶ್ರಮದಾನವೂ ಒಂದು ಪಾಲಾಗಿದೆ. ಕೆರೆಯ ಕಟ್ಟು ಭದ್ರಪಡಿಸಲು ವಿಕಾಸಯೋಜನೆ ನೆರವಾಗಬಹುದೆಂದು ಅಪೇಕ್ಷೆ ಇದೆ.

ನೀರು ಸಿಕ್ಕರೆ ಸಾಕು. ಕಬ್ಬು ಹಚ್ಚಿ ತೋಟ ಮಾಡುವುದು ಈ ಪ್ರದೇಶದ ಜನರ ಸಾಮಾನ್ಯ ರೀತಿ. ಆದರೆ ಅದು ಯಾವತ್ತೂ ಹಿತಕರವೆನಿಸದು. ಅದರಿಂದ ಜೀವನಾವಶ್ಯಕ ಬೆಳೆಗಳನು ಸರಿಯಾಗಿ ಬೆಳೆಸಲಾಗುವುದಿಲ್ಲ. ಆದ್ದರಿಂದ ಇಲ್ಲಿ ಗೋದಿ, ಕಾಯಿಪಲ್ಯ ಮುಂತಾದುವಕ್ಕೆ ನೀರಿನ ಪೂರೈಕೆ ಮಾಡಲಾಗುವುದೆಂದು ನಿಯೋಜಿಸಲಾಗಿದೆ. ಈ ಹೊಸ ಯೋಜನೆಯಿಂದ ೧೫೦ ಎಕರೆ ನೆಲ ನೀರುಣ್ಣಹತ್ತಿದೆ. ಪ್ರತಿಯೊಬ್ಬನೂ ೧ ಎಕರೆ ಕಬ್ಬು, ೪ ಗುಂಠೆ ಗೋದಿ, ೨ ಗುಂಠೆ ಕಾಯಿಪಲ್ಯ ಹಚ್ಚಲು ಸಾಲುವಷ್ಟು ನೀರಿನ ಪೂರೈಕೆಯಾಗುತಿದೆ. ಈಗ ಲಾಭ ಹೊಂದುವ ಕುಟುಂಬಗಳು ೪೫. ಈ ೪೫ ಜನರಲ್ಲಿ ಪ್ರತಿಒಬ್ಬರಿಗೂ ೧ ಎಕರೆ ೬ ಗುಂಠೆ ನೆಲ ಕೊಟ್ಟು ಉಳಿದುದನ್ನು ಉಳಿದ ೪೦ ಕುಟುಂಬಗಳಲ್ಲಿ ಹಂಚುವ ಯೋಜನೆ ಇದ್ದು ಭೂಮಾಲಿಕರಿಗೆ ಅವರು ಅದಕ್ಕಾಗಿ ಒಂದು ನಾಲ್ಕಾಂಶ ಪಾಲನ್ನು ಕೊಡಬೇಕೆಂದು ವ್ಯವಸ್ಥೆ ಮಾಡಲಾಗಿರುವುದರಿಂದ ಯಾರಿಗೂ ಇದು ಅನ್ಯಾಯವೆನಿಸುವುದಿಲ್ಲ.

ತಾಲೂಕಿಗೂ ಜಿಲೆಗೂ ಎಲ್ಲ ಹಳ್ಳಿಗಳಿಂದ ಹಾಲನ್ನು ಒಯ್ಯಲಾಗುತ್ತದೆ. ಅದರಿಂದ ಊರಲ್ಲಿ ಒಂದು ತಟುಕು ಹಾಲೂ ಸಿಗುವುದು ಕಷ್ಟ. ಆದರೆ ಪಾಲದಲ್ಲಿ ಮಾತ್ರ ಈ ದುರ್ದೆಸೆ ಇಲ್ಲ.



ಶ್ರೀ ಶಿಂಧೆ

ಉಳಿದವರಂತೆ ಇವರಾದರೂ ಹಾಲು-ಮೊಸರು ಬೆಣ್ಣೆಗಳನ್ನು ಒಯ್ದು ಪೇಟೆಯಲ್ಲಿ ಮಾರಿ ಬಂದ ದುಡ್ಡಿನಿಂದ ಬಂಗಾರವನ್ನು ಕೊಂಡೊ ದುಡ್ಡನ್ನು ಹೂತಿಟ್ಟೊ ಇಲ್ಲಾ ದುರ್ವ್ಯಸನಗಳಿಗಾಗಿ ವೆಚ್ಚಮಾಡಿಯೊ ಬಿಡುತ್ತಿದ್ದರು. ಆದರೆ ಹಾಗಾಗದಿರಲೆಂದು ಊರ ಹೈನವನ್ನು ಊರಲ್ಲೇ ಬಳಸಬೇಕೆಂದು ಗೊತ್ತುವಳಿ ಮಾಡಲಾಯಿತು. ಇದರ ಲಾಭ ಒಮ್ಮೆಲೆ ಕಂಡುಬರದಿದ್ದರೂ ಇಂದಿನ ಹುಡುಗರು ಪುಷ್ಟವಾಗಿ ಬೆಳೆದು ಚುರುಕಾಗಿ ನಾಳೆ ನವನಾಗರಿಕರಾದರೆಂದರೆ ಉಳಿದ ಹಳ್ಳಿಯವರೂ ಇವರನ್ನೇ ಅನುಕರಿಸದಿರಲಾರರು.

ಊರ ಸಂಪತ್ತು ಹೊರಗೆ ಹೋಗಲು ಎರಡು ಬಿರುಕುಗಳಿದ್ದವು. ಒಂದು ಅನುಪಸ್ಥಿತ ಭೂಮಾಲಿಕರದು. ಅವರು ಹೊಲಗಳನ್ನು ತಮ್ಮ ಹೆಸರಿಗೆ ಖುದ್ದೆಂದು ಹಚ್ಚಿಕೊಂಡದ್ದ

ರಿಂದ ಅವರನ್ನು ತಡೆಯಲು ಸಾಧ್ಯವಿರಲಿಲ್ಲ. ಆದ್ದರಿಂದ ಭೂಮಾಲಿಕರು ಗೇಣಿಯಲ್ಲಿಯ ಒಂದು ನಾಲ್ಕಾಂಶದಷ್ಟು ಹಣವನ್ನು ದುಡಿಯುವವರ ಹಿತಕ್ಕಾಗಿ ಸಲ್ಲಿಸಬೇಕೆಂದು ನಿಯಮ ಮಾಡಿದರು. ಭೂಮಾಲಿಕರೂ ಸ್ವ ಖುಶಿಯಿಂದ ಒಪ್ಪಿದ್ದಾರೆ. ಈ ರೀತಿ ದೊರೆತ ಕಾಳು ಹಾಗೂ ದುಡ್ಡನ್ನು ಊರ ಸಹಾಯಾರ್ಥ ಉಪಯೋಗಿಸಲಾಗುತ್ತದೆ. ಈ ವರ್ಷ ಕೂಡಿದ ನಿಧಿ ಮೂರು ಖಂಡಿ ಭತ್ತ ಹಾಗೂ ೧೫೦೦ ರೂಪಾಯಿಯಾಗಿದೆ. ಶಾಲೆಯ ಕಟ್ಟಡ, ಗರಡೀಮನೆ, ಹೊಸಮನೆಗಳನ್ನು ಕಟ್ಟಿಸುವುದು, ರುಗ ಸೇವೆ, ಮುಂತಾದವುಗಳಿಗಾಗಿ ಇದನ್ನು ವ್ಯಯಿಸಲಾಗುವುದು.

ಎರಡನೆಯ ಬಿರುಕು ಭಿಕ್ಷುಕರದು. ಭಿಕ್ಷುಕರಿಂದ ದುಡಿಯದೆ ತಿನ್ನುವ ವೃತ್ತಿಗೆ ಪ್ರೋತ್ಸಾಹನ ದೊರೆಯುವುದಷ್ಟೇ ಅಲ್ಲ, ಊರ ಬಡವರ ರೊಟ್ಟಿಯಿಂದ ಇನ್ನೊಂದು ತುಂಡು ಕಡಿಮೆಯಾಗುತ್ತದೆ. ಆದ್ದರಿಂದ ಊರಲ್ಲಿ ಭಿಕ್ಷುಕರು ಬರದಂತೆ ಪಾಲ ನಿವಾಸಿಗಳು ತಡೆ ಹಾಕಿದ್ದಾರೆ. ಈ ರೀತಿ ಎಲ್ಲರೂ ಅನುಸರಿಸಿದರೆ ಅಪಂಗ ಭಿಕ್ಷುಕರನ್ನುಳಿದು ಉಳಿದವರು ದುಡಿಯುವಂತಾಗುವುದು. ಮತ್ತು ತಮ್ಮ ಊರ ಅಪಂಗರನ್ನು ತಾವೇ ಕಾಪಾಡಬೇಕಾಗಿದೆ ಎಂಬ ಅರಿವು ಪಾಲ ನಿವಾಸಿಗಳಂತೆ ಉಳಿದವರಿಗೂ ಆದರೆ ಭಿಕ್ಷುಕ ಸಮಸ್ಯೆಯೆ ಅಡಗಿಹೋಗಬಹುದು.

ಕಾಡುಹಂದಿ, ಇಲಿ, ಹಕ್ಕಿಗಳಂತೆ ಕಳ್ಳದನಗಳೂ ನಮ್ಮ ಒಕ್ಕಲುತನ ಕೆಡಿಸುವ ಒಂದು ಪ್ರಮುಖ ಶತ್ರುವಿಭಾಗ. ಇದರಿಂದ ಬೆಳೆಗಳ ರಕ್ಷಣೆ ಮಾಡಲೆಂದು ಒಬ್ಬ ಕಾವಲುಗಾರನನ್ನು ಇವರು ನೇಮಿಸಿದ್ದಾರೆ. ಈತ ಎಲ್ಲ ಹೊಲಗಳನ್ನು ಸುತ್ತಿ ಕಳ್ಳದನಗಳನ್ನು ಹೊಡೆದು ಹಾಕುತ್ತಾನೆ. ವಿಕೇಂದ್ರಿತ ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಿದ್ದರೆ ನಮ್ಮಹಳಿ ಯವತು ಈ ಚಿಕ್ಕಪುಟ್ಟ ವಿಷಯಗಳನ್ನು ಗಮನಿಸಬೇಕು.

ಓಣಿಗೊಂದು ಹೆಸರಿನ ಬೋರ್ಡು ಇಲ್ಲಿ ತಗಲಿಸಿದ್ದಾರೆ. ಓಣಿಯ ಹೆಸರುಗಳು ಆಯಾ ಓಣಿಯ ಬಹು ಜನರ ಕಸಬಿನಿಂದ ಬಂದುದಲ್ಲ; ಇತ್ತೀಚಿನ ಸುಧಾರಿಸಿದ ರೀತಿಯ ಹೆಸರುಗಳಿವೆ. ಸಮಾಜಕಾರ್ಯ ಕರ್ತ ಮೌನಿ ಮಹಾರಾಜರ ಹೆಸರಿನಿಂದ 'ಮೌನಿಗಲ್ಲಿ' ಎಂದು ಒಂದನ್ನು ಹೆಸರಿಸಿದ್ದಾರೆ.

ರಾಜಮಾರ್ಗದಿಂದ ಊರ ವರೆಗೆ ಎರಡು ಫರ್ಲಾಂಗ್ ಉದ್ದದ 'ಮೌನಿಮಾರ್ಗ', ಕೆರೆ, ತೋಟಿನ ವರೆಗೆ ರಾಜಮಾರ್ಗ, ಪ್ರತಿ ಮನೆಗೆ ಇಂಗುಬಚ್ಚಲ ವ್ಯವಸ್ಥೆಯುಳ್ಳ ಬಚ್ಚಲು ಮನೆ, ನಾಲ್ಕು ಪ್ಲ್ಯಾಪ್‌ನ ಕಕ್ಕಸ, ಮೂರು ಸುಧಾರಿಸಿದ ದೊಡ್ಡಿಗಳು, ಎಲ್ಲ ಮನೆಗಳಲ್ಲೂ ಹೊಗೆಯಾಗದ ಒಲೆಗಳು, ೩೫೦ ರೂಪಾಯಿಯ ಪುಸ್ತಕಗಳುಳ್ಳ ವಾಚನಾಲಯ, ತೋಟಿನ ಸ್ವಚ್ಛತೆ, ಕೇದಾರಲಿಂಗನ ಗುಡಿಯ ವ್ಯವಸ್ಥೆ, ಸಮಾಜ ಶಿಕ್ಷಣದ ಕ್ಲಾಸು, ಯುವಕಮಂಡಳ, ಮಹಿಲಾಮಂಡಳ, ಒಕ್ಕಲಿಗರ ವಿಕಾಸಮಂಡಳ, ಸಹಕಾರಿ ಸೊಸೈಟಿ, ಕಾಳಿನ ಬ್ಯಾಂಕು, ಶಿಕ್ಷಕರ ಬೋರ್ಡಿಂಗು, ಆರೋಗ್ಯಕೇಂದ್ರ, ಹಾಲಿನ ಕೇಂದ್ರ, ಭಜನೆಯ ಮಂಡಳ,— ಮುಂತಾದ ಅನೇಕ ಸಂಸ್ಥೆಗಳು ರೂಪುಗೊಂಡಿವೆ. ಊರ ಪ್ರತಿಕುಟುಂಬವನ್ನೂ ಸಹಕಾರಿ ಸಂಘದ ಸದಸ್ಯನನ್ನಾಗಿ ಮಾಡಿಕೊಂಡು ಊರೆಲ್ಲ ಒಂದು ಕುಟುಂಬ ಎಂಬ ಭಾವನೆ ಬೆಳೆಸಿದ್ದಾರೆ. ಮೌನಿ ವಿದ್ಯಾಪೀಠದ ಆರೋಗ್ಯ ವಿಭಾಗದ ಪ್ರಮುಖರಾದ ಶ್ರೀಮತಿ ಹೆಲೆನ್ ಮೂಸ್ ಅವರು ಸ್ವತಃ ಆಸಕ್ತಿ ವಹಿಸಿ ಊರವರಿಗೆ ವಾರಕ್ಕೊಮ್ಮೆ ಪುಕ್ಕಟೆ ಸಲಹೆ ಕೊಡುತ್ತಾರೆ. ದಿನಕ್ಕೆ ೫೦ ಮಕ್ಕಳಿಗೆ ಹಾಲು ಕೊಡುವ ವ್ಯವಸ್ಥೆ ಇದೆ.

ಊರಿಗಾಗಿ ಒಟ್ಟು ಶ್ರಮದಾನ ೪೦೦೦ ರೂಪಾಯಿ ಬೆಲೆಯದಾಗಿದೆ. ಅದರಲ್ಲಿ ೨೬೭೮ ಜನರೂ ೨೨೫ ಚಕ್ಕಡಿಗಳೂ ದುಡಿದಿವೆ. ಊರ ಕಾರ್ಯಭಾರ ತರುಣ ಉತ್ಸಾಹಿಗಳ ಕೈಯಲ್ಲಿ ಇದೆಯಾದ್ದರಿಂದ ವಿಕಾಸಕಾರ್ಯ ಭರದಿಂದ ಸಾಗಿದೆ. ರೋಗಜಂತುಗಳಿಂದ ಬೆಳೆಯ ರಕ್ಷಣೆ

ಗಾಗಿ ಔಷಧ ಸಿಂಚನ ಮಾಡಲಾಗುತ್ತಿದೆ. ಗೊಬ್ಬರದ ತಿಪ್ಪೆಗಳನ್ನು ಅಗೆದುಕೊಡಲಾಗಿದೆ. ಜಪಾನಿ ಪದ್ಧತಿಯ ಭತ್ತದ ಕೃಷಿ ಪ್ರಾರಂಭ ವಾಗಿದೆ. ವ್ಹಾಯಿಟ್ ಲೆಗ್‌ಹಾರ್ನ್ ಜಾತಿಯ ಕೋಳಿಯ ಫಾರ್ಮಗಳಾಗಿವೆ.

ಆಚಾರ್ಯ ವಿನೋಬಾ ಭಾವೆಯವರ ಕಲ್ಪನೆ ಇಲ್ಲಿ ಕ್ರಮಕ್ರಮವಾಗಿ ಸಾಕಾರವಾಗುತ್ತಿದೆ. ದೀಪದಿಂದ ದೀಪ ಹೊತ್ತುವಂತೆ ಇದರ ಅನುಕರಣೆಯನ್ನು ಇನ್ನಿತರ ಹಳ್ಳಿಗಳು ಮಾಡುತ್ತಿವೆ. ಇಂಥ ಕಾರ್‍ಯಗಳಲ್ಲಿ ತೊಡಗಿದವರ ಭಾವನೆಗೆ ಪೆಟ್ಟು ಬಿದ್ದರೆ ಅವರು ಕೂಡಲೇ ಕಾರ್‍ಯವನ್ನು ಕೆಡಿಸಲಿಕ್ಕೂ ಹಿಂದುಮುಂದು ನೋಡುವುದಿಲ್ಲ. ಆದರೆ ಈವರೆಗಂತೂ ಇಂಥ ಯಾವ ವಿದ್ರೋಹಗಳೂ ಯಶಸ್ವಿಯಾಗಿಲ್ಲ. ಮುಂದೆಯೂ ಆಗಲಾರದೆಂದು ಹೇಳಬಹುದಾಗಿದೆ.

ಗ್ರಾಮಸಹಾಯಕ ನಿಧಿಯಿಂದ ರುಗ್ಣಸೇವೆ ಮಾಡಲಾಗುತ್ತದೆ. ಅವರಿಗೆ ಸರ್ವವಿಧದಿಂದ ನೆರವಾಗಲಾಗುತ್ತದೆ. ಆಪ್ತರಾರೂ ಇಲ್ಲದಿದ್ದರೆ ಕಾರ್ಯಕರ್ತರು ನಿಂತು ಸೇವೆಮಾಡುತ್ತಾರೆ.

ತೋಟಿನಲ್ಲಿ ಗಿಡ ಕಡಿದು ಉದ್ಯಾನಮಾಡಿ ಬಾಲಕರಿಗಾಗಿ ಕೆರೆಯ ಹತ್ತಿರ ಆಟಪಾಟಕ್ಕೆ ಬಯಲು ಮಾಡಿಕೊಡುವವರಿದ್ದಾರೆ. ಶಾಲೆಕಟ್ಟಿಯಾದ ಮೇಲೆ ಶಿಕ್ಷಕರಿಗಾಗಿ ಮನೆಗಳನ್ನೂ ಕಟ್ಟುವವರಿದ್ದಾರೆ. ಇನ್ನೂ ಸ್ತ್ರೀಯರ ಸರ್ವಾಂಗೀಣ ಉನ್ನತಿಗಾಗಿ ಹೆಣಗಾಡಬೇಕಾಗಿದೆ.

ಪ್ರಾರಂಭದಿಂದಲೇ ಸಹಕಾರ್‍ಯಕ್ಕಾಗಿ ಈ ಜನರು ಈ ಭಾಗದಲ್ಲಿ ಹೆಸರಾದವರು. ಕಾಯದೆಯಾಗುವ ಮೊದಲೇ ಸೆರೆಯನ್ನು ದೂರೀಕರಿಸಿದವರಿವರು. ಗುಡ್ಡದಲ್ಲಿಯ ಊರು. ಬಯಸಿದ್ದರೆ ಭಟ್ಟಿಸೆರೆಯ ಕೇಂದ್ರವಾಗಬಹುದಿತ್ತು. ಆದರೆ ಅತ್ತ ಇವರ ಚಪಲವಿಲ್ಲ. ಸಾಮಾನ್ಯ ಜಗಳಗಳನ್ನು ಊರಲ್ಲೇ ತೀರಿಸಲಾಗುತ್ತದೆ.

ಆದರೂ ಇವರು ಶ್ರದ್ಧೆಯಿಂದ ಯಾರೊಬ್ಬರನ್ನು ನಂಬಿ ಕುರಿಹಿಂಡಿನಂತೆ ಸಾಗುವವರಲ್ಲ. ಪ್ರತಿ ಸೋಮವಾರ ಮತ್ತು ಗುರುವಾರ ಊರ ಸಾರ್ವಜನಿಕ ಸಭೆ ಸೇರಿಸುತ್ತಾರೆ. ಅಲ್ಲಿ ಅವರ ಅನೇಕ ಪ್ರಶ್ನೆಗಳ ಚರ್ಚೆ ನಡೆಯುತ್ತದೆ. ಇಲ್ಲಿ ಭೂಮಿ ಕಸಿಯಾಗಿತ್ತು, ಬೀಜಾರೋಪಣೆಯಷ್ಟೇ ಉಳಿದಿತ್ತೇನೊ. ೨೦ ವರ್ಷದಿಂದಲೂ ಸಾಮಾಜಿಕ ಕಾರ್ಯದಲ್ಲಿ ಖ್ಯಾತಿವೆತ್ತಿರುವ ಗಜಾನನರಾವ್ ಶಿಂಧೆಯವರು ಈ ಕಾರ್ಯಕ್ಕೆ ತೊಡಗಿದರು ಕೊಲ್ಹಾಪುರದ ಗೋವಿಂದರಾವ್ ಕೋರಗಾಂವಕರರ ಧರ್ಮಾದಾಯ ಸಂಸ್ಥೆಯಲ್ಲಿ ಗ್ರಾಮ-ಸೇವೆಯ ಶಿಕ್ಷಣ ಹೊಂದಿದವರು ತರುಣ ಶಿಂಧೆ. ಅವರಿಗೆ ಪಾಲದಲ್ಲಿ ಕಾರ್ಯ ಮಾಡಲು ಅವಕಾಶ ಸಿಕ್ಕಿತು. ಇವರು ಅಪರಿಮಿತ ಮಹತ್ಕಾರ್ಯವನ್ನು ಸಾಧಿಸಿದರು.

ಆದರೆ ಇದಕ್ಕೆ ಊರ ಮುಖಂಡರು ನೆರವಾಗಿ ಮುಂದೆ ಬಂದದ್ದೂ ಅಷ್ಟೇ ಮಹತ್ವದ್ದು. ಅವರ ನೆರವಿಲ್ಲದಿದ್ದರೆ ಎರಡೇ ವರ್ಷಗಳಲ್ಲಿ ಇಷ್ಟು ಪ್ರಗತಿ ಸಾಧಿಸಿ ತೋರಿಸುವುದು ಯಾರಿಂದಲೂ ಸಾಧ್ಯವಾಗುತಿದ್ದಿಲ್ಲ.

ಮಿಶನರಿ ಪದ್ಧತಿಯನನುಸರಿಸಿ ಶಿಂಧೆಯವರು ಪ್ರಥಮೋಪಾಯಗಳಿಂದ ಜನತೆಯ ಪ್ರೀತಿ ಸಂಪಾದಿಸಿದರು. ಇವರಿಗೆ ಕೊಲ್ಹಾಪುರದ ಹಲವು ಶ್ರೇಷ್ಠ ಡಾಕ್ಟರರೂ ಸಲಹೆ ಸಹಾಯಗಳನ್ನು ನೀಡಿದರು. ಇತ್ತ ಸರಕಾರವೂ ದುರ್ಲಕ್ಷ ಮಾಡಲಿಲ್ಲವಾದ್ದರಿಂದ ಹಿಡಿದ ಕೆಲಸ ಬಿಡದಂತೆ ಮುಂದುವರಿಸಲು ಸಾಧ್ಯವಾಯಿತು.

ಇಷ್ಟೆಲ್ಲ ಬಗೆಯಲ್ಲಿ ಪ್ರಗತಿ ಸಾಧಿಸಿದ್ದರೂ ಸಮಾಜದ ಅರ್ಧ ಪಾಲಾದ ಸ್ತ್ರೀಯರಲ್ಲಿ ಮಾತ್ರ ಈ ಪ್ರಗತಿ ಕಂಡುಬರದಿರುವುದಕ್ಕಾಗಿ ಶಿಂಧೆಯವರು ವ್ಯಥೆಪಡುತ್ತಾರೆ. ಆದರೂ ಅವರು ಕೈಚೆಲ್ಲಿ ಕೂಡುವವರಲ್ಲ. ಸ್ತ್ರೀಯರ ಉನ್ನತಿಗಾಗಿ ಮಹಿಳಾಮಂಡಳಕ್ಕೊಂದು ಕಟ್ಟಡ ಹಾಗೂ ಅದರ ಕಾರ್ಯದ ಬಗ್ಗೆ ಇವರೊಂದು ಯೋಜನೆ ರೂಪಿಸಿದ್ದಾರೆ. ತಕ್ಕ ಕಾರ್‍ಯಕರ್ತ್ರಿಯೊಬ್ಬಳು ದೊರೆತರೆ ಈ ಕಾರ್‍ಯವೂ ಭರದಿಂದ ಮುಂದೆ ಸಾಗುವುದೆಂದು ಅವರ ನಂಬಿಕೆ.

*

# ಸೋಮನಾಥನ ಏಳನೇ ಪುನರುತ್ಥಾನ

ಸೋಮನಾಥ! ಹೆಸರು ಕೇಳಿದೊಡನೆಯೆ ಭಾರತೀಯರ ಹೃದಯದ ಸ್ಪಂದನ ಹೆಚ್ಚುತ್ತದೆ. ಘರ್ಷಣೆ, ಬಲಿದಾನ, ಆತ್ಮತ್ಯಾಗ ಮತ್ತು ಅತ್ಯಾಚಾರಗಳ ಅಸಂಖ್ಯ ಸ್ಮೃತಿಗಳು ಜಾಗೃತವಾಗುತ್ತವೆ. ಭಾರತದ ಪಶ್ಚಿಮ ಸಮುದ್ರದ ತೀರದಲ್ಲಿರುವ ಆದಿ ಜ್ಯೋತಿರ್ಲಿಂಗದ ಈ ಇತಿಹಾಸ ಪ್ರಸಿದ್ಧ ದೇವಾಲಯವು ತನ್ನ ವೈಭವ ಮತ್ತು ಅನುಪಮ ಶಿಲ್ಪಕಲಾ ಸೌಂದರ್ಯಕ್ಕಾಗಿ ಬಹು ಪ್ರಸಿದ್ಧವಾಗಿದೆ ಈ ದೇವಾಲಯವು ಹಿಂದುಗಳ ವೈಭವ, ಗಂಭೀರ ವಿಶ್ವಾಸ ಮತ್ತು ಅವರ ಕಲಾಪಾಂಡಿತ್ಯಗಳ ಪ್ರತೀಕವಾಗಿದ್ದಿತೆಂದೇ ಗಜನಿಯ ಮಹಮೂದನು ನೂರಾರು ಮೈಲು ವಿಸ್ತಾರವಾದ ಮರುಭೂಮಿಯನ್ನು ದಾಟಿ ಈ ದೇವಾಲಯವನ್ನು ನಾಶ ಮಾಡಲೆಂದು ಬಂದ.

ಕೇವಲ ಗಜನಿ ಮಹಮೂದನೊಬ್ಬನ ಶನಿ ದೃಷ್ಟಿ ಮಾತ್ರವೇ ಈ ದೇವಾಲಯದ ಮೇಲೆ ಬಿದ್ದಿತು ಎಂದಿಲ್ಲ. ಈ ದೇವಾಲಯ ಹಲವು ಸಲ ಭಗ್ನವಾಗಿ ಹಲವು ಸಲ ಪುನಾರಚಿತವಾಯಿತು. ಕೊನೆಯದಾಗಿ ಮೊಗಲ ಬಾದಶಾಹ ಔರಂಗಜೇಬ ಇದನ್ನು ಕೆಡವಿಸಿದ. ಅಂದಿನಿಂದ ಸೋಮನಾಥ ದೇವಾಲಯವು ಒಂದು ಭಗ್ನಾವಶೇಷವಾಗಿ ಉಳಿದುಕೊಂಡಿತು. ಪೂಜೆ-ಪುರಸ್ಕಾರಗಳು ನಿಂತುಹೋದವು. ಜುನಾಗಡದ ಮುಸ್ಲಿಂ ರಾಜ್ಯದಲ್ಲಿದ್ದ ಈ ದೇವಾಲಯದ ಸುತ್ತಮುತ್ತಲೆಲ್ಲ ಮುಸಲ್ಮಾನರ ವಸತಿಗಳು ನಿರ್ಮಾಣವಾಗಿದ್ದವು. ಮಹಾರಾಣಿ ಅಹಲ್ಯಾಬಾಯಿ ಪುರಾತನ ಸೋಮನಾಥನ ದೇವಾಲಯಕ್ಕೆ ತುಸು ದೂರದಲ್ಲಿ ಹೊಸತೊಂದು ಚಿಕ್ಕ ದೇವಾಲಯವನ್ನು ಕಟ್ಟಿಸಿದಳು. ಸೋಮನಾಥನ ದರ್ಶನಾರ್ಥಿಗಳು ಈ ಹೊಸ ದೇವಾಲಯಕ್ಕೆ ಹೋಗಿ ತಮ್ಮ ಭಕ್ತಿಭಾವನೆಯನ್ನು ತೃಪ್ತಿಗೊಳಿಸಿಕೊಳ್ಳುತ್ತಿದ್ದರು.

ಭಾರತವು ಸ್ವತಂತ್ರವಾಯಿತು. ಜುನಾಗಡವೂ ಸಂಸ್ಥಾನಿಕರ ಕೈಯಿಂದ ಮುಕ್ತವಾಯಿತು. ಜುನಾಗಡವನ್ನು ಭಾರತ ಪ್ರಜಾರಾಜ್ಯದಲ್ಲಿ ಸೇರಿಸುವ ಉತ್ಸವದ ಉದ್ಘಾಟನೆಗಾಗಿ ಎಂದು ಸರದಾರ ವಲ್ಲಭಭಾಯಿ ಪಟೇಲರು ಬಂದಿದ್ದರು. ಅವರು ರಾಜಾ ಕುಮಾರಪಾಲನಿಂದ ಕಟಿಸಲ್ಪಟ್ಟ ಸೋಮನಾಥ ಮಂದಿರದ ಭಗ್ನಾವಶೇಷವನ್ನು ಕಂಡಾಗ ಅವರ ಹೃದಯದಲ್ಲಿ ಎಂಥ ತಳಮಳವಾಯಿತೊ! ಅವರು ಆ ಕ್ಷಣದಲ್ಲಿಯೆ ಸಮುದ್ರದ ನೀರನ್ನು ಬೊಗಸೆಯಲ್ಲೆತ್ತಿ ಈ ದೇವಾಲಯದ ಪುನರ್ನಿ-

ಹಿಂದಿ "ಸರಸ್ವತಿ" ಯಿಂದ

ರ್ಮಾಣದ ಸಂಕಲ್ಪ ಮಾಡಿದರು. ಅವರು ಇದನ್ನು ಆಡಿ ತೋರಿಸಿದ್ದೇ ತಡ, ಅಲ್ಲಿದ್ದ ಜಾಮನಗರದ ರಾಜರು ಒಂದು ಲಕ್ಷ ರೂಪಾಯಿಗಳನ್ನು, ಇನ್ನಿಬ್ಬರು ಅನುಕ್ರಮವಾಗಿ ೪೦-೫೦ ಸಾವಿರ ರೂಪಾಯಿಗಳನ್ನು ಕೊಡುವುದಾಗಿ ಸಾರಿದರು.

ಸರದಾರ ಪಟೇಲರು ಸೋಮನಾಥ ದೇವಾಲಯದ ಪುನರ್ನಿರ್ಮಾಣಕ್ಕಾಗಿ ಒಂದು ಟ್ರಸ್ಟನ್ನು ರಚಿಸಿದರು. ಈ ಟ್ರಸ್ಟು ಈ ಕಾರ್ಯಕ್ಕಾಗಿ ೨೭ ಲಕ್ಷ ರೂಪಾಯಿಗಳನ್ನು ಕೂಡಿಸಿತು. ದೇವಾಲಯವನ್ನು ಮೊದಲಿನಂತೆಯೆ ಅಂದರೆ ಕುಮಾರಪಾಲ ಯಾವ ಶಿಲ್ಪಕಲಾ ಶೈಲಿಯಲ್ಲಿ ಕಟ್ಟಿಸಿದ್ದನೊ ಅದೇ ರೀತಿಯಲ್ಲಿ ಕಟ್ಟಿಸಬೇಕೆಂದು ನಿರ್ಧಾರವಾಯಿತು. ಚಾಲುಕ್ಯ ರಾಜರ ಕಾಲದ ಶಿಲ್ಪಕಲೆಯ ಶೈಲಿ ಶುದ್ಧ ಹಿಂದೂ ಕಲಾಶೈಲಿಯಾಗಿದ್ದು ಸೋಮನಾಥನ ದೇವಾಲಯ ಅದನ್ನನುಸರಿಸಿಯೆ ಇದ್ದಿತು. ಮಂದಿರದ ಪುನರ್ನಿರ್ಮಾಣ ಕಾರ್ಯಕ್ಕಾಗಿ ನನ್ನನ್ನಾ(ಲೇಖಕನನ್ನು)ರಿಸಿದರು.

ದೇವಾಲಯದ ಎತ್ತರ, ಕಲಶ ಮತ್ತು ಗೋಪುರಗಳ ಸಂಖ್ಯೆಗನುಸಾರವಾಗಿ ಇಂಥ ದೇವಾಲಯಗಳಿಗೆ ಶಿಲ್ಪಶಾಸ್ತ್ರಗಳು "ಕೈಲಾಸ ಮಹಾಮೇರು ಪ್ರಾಸಾದ" ಎಂದು ಕರೆಯುತ್ತಾರೆ. ಸೋಮನಾಥ ದೇವಾಲಯದಲ್ಲಿ ಮೂರು ಭಾಗಗಳಿದ್ದು ಪುನರ್ನಿರ್ಮಾಣ ಕಾರ್ಯಾರಂಭವಾದಂದಿನಿಂದ ಇದುವರೆಗೆ ಎರಡು ಭಾಗಗಳಷ್ಟೆ ಕಟ್ಟಿ ಮುಗಿದಿವೆ. ಕಟ್ಟಿಯಾದ ಭಾಗದ ಉದ್ದ ೨೨೫ ಅಡಿ, ಅಗಲ ೧೨೮ ಅಡಿ ಮತ್ತು ಎತ್ತರ ೧೭೫ ಅಡಿ ಇದೆ. ಇದರ ಗಗನಚುಂಬಿ ಗೋಪುರದಲ್ಲಿ ಒಂಬತ್ತು ಮಾಳಿಗೆಗಳಿವೆ. ಅದರ ಎದುರಿರುವ ಗೂಢ ಮಂಟಪದಲ್ಲಿ ಐದು ಮಾಳಿಗೆಗಳಿವೆ. ಈ ಎಲ್ಲ ಮಾಳಿಗೆಗಳ ಸುತ್ತ ಗ್ಯಾಲರಿಗಳಿವೆ.

ಎಂಟು ನೂರು ವರ್ಷಗಳ ಹಿಂದಿನ ಸ್ಥಾಪತ್ಯ ಮತ್ತು ಮೂರ್ತಿ ಕಲೆಗಳಿಗನುಗುಣವಾಗಿ ದೇವಾಲಯವನ್ನು ಕಟ್ಟುವಾಗ ಈ ಮೃತಪ್ರಾಯ ಶಿಲ್ಪದ ಜ್ಞಾನವಿರುವ ಪರಿಣಿತರ ಅಗತ್ಯವಿದ್ದಿತು. ಈಗ ಈ ಬಗೆಯ ಸ್ಥಾಪತ್ಯಕ್ಕೆ ಬೇಡಿಕೆಯೇ ಇಲ್ಲದಂತಾಗಿರುವುದರಿಂದ ಇಂಥವರು ಸಿಗುವುದು ದುರ್ಲಭವೇ ಎನ್ನುವಂತಾಗಿದೆ. ಆದರೂ ಸೋಮಪುರ ಎಂಬಲ್ಲಿ ಈ ಕಲೆಯನ್ನಿನ್ನೂ ಜೀವಂತವಾಗಿಟ್ಟುಕೊಂಡಿರುವ ಕೆಲವರಿದ್ದಾರೆ. ಇವರ ಸಂಖ್ಯೆ ಈಗ ಹೆಚ್ಚೆಂದರೆ ನೂರಿನ್ನೂರು ಇರಬಹುದು. ಈ ಶಿಲ್ಪಿಗಳು ಈಗ ಕಟ್ಟಿರುವ ಸೋಮನಾಥನ ಹೊಸ ದೇವಾಲಯವನ್ನು ಕಂಡಾಗ ಪ್ರಾಚೀನವೂ ನಾಮಶೇಷವಾದುದೂ ಎಂದು ಬಗೆಯಲ್ಪಡುವ ಭಾರತೀಯ ಅದ್ಭುತ ಶಿಲ್ಪಕಲೆಯ ಚಮತ್ಕಾರಗಳನ್ನಿನ್ನೂ ಮಾಡಿ ತೋರಿಸಬಹುದು ಎಂಬ ನಂಬಿಕೆಯಾಗುತ್ತದೆ.

ಉಸುಬಿನ ನೆಲದಲ್ಲಿ ಇಂಥ ವಿಶಾಲಕಾಯ ಮಂದಿರವನ್ನು ರಾಜಾ ಕುಮಾರಪಾಲ ಕಟ್ಟಿಸಿದ್ದೆ ಒಂದು ಆಶ್ಚರ್ಯ. ಅದನ್ನು ನಾಶಗೊಳಿಸಿದ ೮೦೦ ವರ್ಷಗಳ ಮೇಲೂ—ಅಂದರೆ ಇಂದು—ಅದರ ಉಳಿದ ಅವಶೇಷಗಳು ಅಚ್ಚಳಿಯದೆ ಇದ್ದಕ್ಕಿದ್ದ ಹಾಗೆ ಇದ್ದುದು ಇನ್ನೂ ಆಶ್ಚರ್ಯದ ಮಾತಾಗಿದೆ.

ಹೊಸತಾಗಿ ನಿರ್ಮಿತವಾಗಿರುವ ದೇವಾಲಯವು ಪುರಾತನ ದೇವಾಲಯದ ನೆಲಗಟ್ಟಿನ ಮೇಲೇ ಕಟ್ಟಲ್ಪಟ್ಟಿದೆ. ಮೊದಲು ಎಲ್ಲಿ ಶಿವಲಿಂಗವಿದ್ದಿತೊ ಅಲ್ಲಿಯೆ ಈಗಲೂ ಶಿವಲಿಂಗದ ಪ್ರತಿಷ್ಠಾಪನೆಯಾಗಿದೆ. ಗರ್ಭಗುಡಿಯ ಎದುರು ಕೌಲಿ ಮಂಟಪವೂ ಅದರ ಮುಂದೆ ವರ್ಗಾಕಾರದ ಗೂಢ ಮಂಟಪವೂ ಇದೆ. ಗೂಢ ಮಂಟಪದ ಪ್ರತಿಯೊಂದು ಭುಜವು ೬೪ ಅಡಿ ಇದೆ. ಇದಕ್ಕೆ ಮೂರು ಬಾಗಿಲುಗಳಿದ್ದು ಪ್ರತಿಯೊಂದು ಬಾಗಿಲಿನ ಹೊರಗೆ ನಾಲ್ಕು ನಾಲ್ಕು ಮೆಟ್ಟಲುಗಳ ಶ್ರೇಣಿಗಳಿವೆ.

ದೇವಾಲಯದ ಮೂರು ಭಾಗಗಳಲ್ಲಿ ಮುಖ್ಯವಾದ ಎರಡು ಭಾಗಗಳು ಈಗ ಕಟ್ಟಿ ತಯಾರಾಗಿದ್ದು ಕೇವಲ ಅವುಗಳ ಅಲಂಕಾರ – ಅಂದರೆ ಗೋಡೆ ಮುಂತಾದವುಗಳ ಮೇಲೆ ಚಿತ್ರಗಳನ್ನು ಕೆತ್ತುವುದು—ಕೆಲಸವಷ್ಟೇ ಉಳಿದುಕೊಂಡಿದೆ.

ಇನ್ನೂ ಕಟ್ಟಬೇಕಾಗಿರುವ ದೇವಾಲಯದ

ಮೂರನೆಯ ಭಾಗವೆಂದರೆ ನೃತ್ಯ ಮಂಟಪ. ಈ ಮಂಟಪ ಅತ್ಯಂತ ವಿಶಾಲವಾಗಲಿದ್ದು ಅದರಲ್ಲಿ ೬೨೪ ಕಂಬಗಳಿರುವವು. ಮೂರು ಖಂಡಗಳಾಗಿ ವಿಭಾಗಿಸಲ್ಪಡುವ ಈ ಮಂಟಪದ ನಾಲ್ಕೂ ದಿಕ್ಕಿನಿಂದ ಪ್ರದಕ್ಷಿಣಾಕಾರದಲ್ಲಿ ಮೂರು ಗ್ಯಾಲರಿಗಳಿರುವವು. ಮಂಟಪದ ಒಳಭಾಗದ ದುಂಡಾಕೃತಿಯ ಛತ್ತು ಸುಮಾರು ೭೫ ಅಡಿ ಎತ್ತರದ ಮೇಲಿರುವುದು. ಗೋಡೆಯ ಒಳಭಾಗದ ಕಮಾನುಗಳ ಕಕ್ಷಾಸನದಲ್ಲಿ ಪುರುಷ ಪ್ರಮಾಣದ ದೇವದೇವತೆಗಳ, ಯಕ್ಷ ಕಿನ್ನರರ, ಋಷಿಮುನಿಗಳ, ವಿದ್ಯಾಧರರೇ ಮುಂತಾದವರ ಅನೇಕಾನೇಕ ಮೂರ್ತಿಗಳನ್ನು ನಿಲ್ಲಿಸಲಾಗುವುದು.

ಈ ಮಂಟಪದ ಮೇಲಿನ ಶಿಖರವನ್ನು ಹಿಡಿದರೆ ಈ ಮಹಾಮೇರು ಪ್ರಾಸಾದದಲ್ಲಿ ೫,೦೦೦ ಶಿಖರಗಳೂ ಕಲಶಗಳೂ ಇರುವಂತಾಗುವುದು. ನೃತ್ಯಮಂಟಪ ಎಷ್ಟು ವಿಶಾಲವಾಗಿರುವುದೆಂದರೆ ಉತ್ಸವ ಕಾಲದಲ್ಲಿ ಅಲ್ಲಿ ಹತ್ತು ಸಾವಿರ ಜನರು ನಿರಾಯಾಸವಾಗಿ ಕುಳಿತುಕೊಳ್ಳಬಹುದು.

ಮಂದಿರದ ಮೂಲ ಭಾಗದ ತಯಾರಿಕೆಗೇ ೨೫ ಲಕ್ಷ ರೂಪಾಯಿಗಳು ವೆಚ್ಚವಾಗಿವೆ. ಟ್ರಸು ಕೂಡಿಸಿದ್ದ ಹಣವೆಲ್ಲ ಖರ್ಚಾಗಿರುವುದರಿಂದ ಮುಂದಿನ ಕಾರ್ಯವೇಗ ಸ್ಥಗಿತವಾಗಿದೆ. ಮಂದಿರದ ಪೂರ್ತಿಯಾದ ಭಾಗಗಳಲ್ಲೂ ಇನ್ನೂ ಅಲಂಕರಣ ಕಾರ್ಯವುಳಿದುಕೊಂಡಿದೆ. ನೃತ್ಯ ಮಂಟಪದ ಕಾರ್ಯವಿನ್ನೂ ಆರಂಭವಾಗಬೇಕಾಗಿದೆ. ಈಗಾಗಲೇ ಸಿದ್ಧವಾಗಿರುವ ಮುಖ್ಯ ಭಾಗವನ್ನು ಕಂಡು ಗುಜರಾತಿನ ಇತಿಹಾಸದಲ್ಲಿ ತಜ್ಞರೂ ಖ್ಯಾತ ಸಾಹಿತಿಗಳೂ ಆಗಿರುವ ಶ್ರೀ ಕನ್ಹಯ್ಯಾಲಾಲ ಮಾಣಿಕಲಾಲ ಮುನಶಿಯವರು "ನನ್ನ ೪೦ ವರ್ಷಗಳ ಹಿಂದಿನ ಸ್ವಪ್ನವನ್ನು ನೀವು ಸಾಕಾರಗೊಳಿಸಿದಿರಿ ಪ್ರಭಾಶಂಕರ ಭಾಯಿ," ಎಂದು ತಮ್ಮ ಸಂತೋಷವನ್ನು ಪ್ರಕಟಿಸಿದರು ಎಂಬುದರ ಮೇಲಿಂದ ಸೋಮನಾಥ ಮಂದಿರದ ಮೂಲ ವೈಶಿಷ್ಟ್ಯವನ್ನು ಎಷು ಸಮರ್ಥ ರೀತಿಯಲ್ಲಿ ಈ ಹೊಸ ಕಟ್ಟಡದಲ್ಲಿ ಉಳಿಸಿಕೊಂಡಿದೆ ಎಂದು ತಿಳಿದುಬರುವಂತಿದೆ.

ಸೋಮನಾಥ ಮಂದಿರದ ಪುನರ್ನಿರ್ಮಾಣಕ್ಕೆ ಸರದಾರ ವಲ್ಲಭಭಾಯಿ ಪಟೇಲರು ನಾಂದಿ ಹಾಕಿದ ಮೇಲೆ ೧೯೫೦ ರಲ್ಲಿ ನಿರ್ಮಾಣ ಕಾರ್ಯಕ್ಕಾರಂಭವಾಯಿತು. ಗರ್ಭಗೃಹವನ್ನು ಕಟ್ಟಿಸಿ ಅದರಲ್ಲಿ ಸರದಾರರ ಹಸ್ತದಿಂದಲೇ ಮೂರ್ತಿಯನ್ನು ಪ್ರತಿಷ್ಠಾಪಿಸಬೇಕೆಂಬ ಹಂಬಲದಲ್ಲಿ ಕಾರ್ಯವನ್ನು ದ್ರುತ ಗತಿಯಿಂದ ಸಾಗಿಸಿದರೂ ವಿಧಾತನ ಇಚ್ಛೆ ಬೇರೆಯೆ ಆಗಿದ್ದಿತು. ಸರದಾರರು ೧೯೫೦, ಡಿಸೆಂಬರ್ ತಿಂಗಳಲ್ಲಿ ಸ್ವರ್ಗವಾಸಿಗಳಾದರು. ಆದರೂ ಅವರ ಇಚ್ಛೆಯಂತೆ ಆದಷ್ಟು ಬೇಗ :ಅಂದರೆ ೧೯೫೧, ಮೇ ತಿಂಗಳಲ್ಲಿ ಭಾರತದ ಪ್ರಥಮ ರಾಷ್ಟ್ರಪತಿಗಳಾದ ಶ್ರೀ ರಾಜೇಂದ್ರ ಪ್ರಸಾದರ ಹಸ್ತದಿಂದ ದೇವಪ್ರತಿಷ್ಠಾಪನೆಯ ಕಾರ್ಯ ಜರುಗಿತು.

ದೇವ ಪ್ರತಿಷ್ಠಾಪನೆಯ ಕಾರ್ಯ ಶಾಸ್ತ್ರಕ್ಕನುಸಾರವಾಗಿ ನಡೆಯಿತು. ಲಿಂಗಾಭಿಷೇಕಕ್ಕಾಗಿ ಎಲ್ಲ ಸಮುದ್ರಗಳು ಹಾಗೂ ಪ್ರಮುಖ ನದಿಗಳ ನೀರನ್ನು ತರಿಸಲಾಗಿದ್ದಿತು. ಹೆಚ್ಚಾಗುಳಿದ ನೀರನ್ನು ಬಾಟ್ಲಿಗಳಲ್ಲಿ ತುಂಬಿ ಸಳಿಕ ಸಂಗ್ರಹಾಲಯದಲ್ಲಿಡಲಾಗಿದೆ. ಗರ್ಭ ಗುಡಿಯ ಮೇಲಿನ ಕಲಶವನ್ನು ಒಂದು ಅಖಂಡವಾದ ಪಾಷಾಣ ಶಿಲೆಯಿಂದ ನಿರ್ಮಿಸಿದ್ದು ಅದು ೧,೦೦೦ ಮಣ ತೂಕದ್ದಿದೆ.

ಸಾಮಾನ್ಯವಾಗಿ ಸಮುದ್ರ ತೀರದಲ್ಲಿ ಕಟ್ಟಿದ ಕಲ್ಲಿನ ಮಂದಿರಗಳ ಕಲ್ಲುಗಳು ಕಾಲಾವಕಾಶದಲ್ಲಿ ಲವಣ ಯುಕ್ತವಾದ ವಾಯುವಿನಿಂದ ಕೆಡತೊಡಗಿ ಅವುಗಳ ಮೇಲಿನ ಸೂಕ್ಷ್ಮ ಕೆಲಸ ಅಸ್ಪಷ್ಟವಾಗುತ್ತದೆ. ಕೆಲ ಸಲ ಕಂಬಗಳೇ ಕರಗತೊಡಗುತ್ತವೆ. ಆದರೆ ಕುಮಾರಪಾಲನು ಕಟ್ಟಿಸಿದ ಈ ಮಂದಿರದ ಕಲ್ಲುಗಳು ಮಾತ್ರ ೮೦೦ ವರ್ಷಗಳ ನಂತರವೂ ಇದ್ದಕ್ಕಿದಂತೆಯೆ ಇವೆ. ಈಗ ಹೊಸದಾಗಿ ಕಟ್ಟುವಾಗಲೂ ೭೦೦ ವರ್ಷಗಳ ಹಿಂದಿನ ಗಣಿಗಳಿಂದಲೇ ವಾಯುವಿಗೆ ಜಗ್ಗದಂಥ ಕಲ್ಲನ್ನೇ ಆರಿಸಿ ಉಪಯೋಗಿಸಿದೆ.

ಮೂಲಮಂದಿರ ಕಟ್ಟುವುದರಲ್ಲಿಯೆ ೨೫ ಲಕ್ಷ ರೂಪಾಯಿಗಳು ವೆಚ್ಚವಾಗಿವೆ. ಈಗ ಕಟ್ಟಿ ಪೂರ್ಣವಾಗಿರುವ ಭಾಗ ಧಾರ್ಮಿಕ ಕಾರ್ಯಗಳಿಗಾಗಿ ಸಂಪೂರ್ಣವಾಗಿದ್ದರೂ ಅದರಲ್ಲಿನ್ನೂ ಬಹಳಷ್ಟು ಕೆಲಸವಾಗಬೇಕಾಗಿದೆ. ಈ ಕಾರ್ಯದ ಯೋಜನೆ ಸಿದ್ಧವಾಗಿದೆ. ಶಿಲ್ಪಿಗಳೂ ಸಿದ್ಧರಿದ್ದಾರೆ. ಧನದ ಅಭಾವವೇ ಕಾರ್ಯಕ್ಕೆ ಆತಂಕವೊಡ್ಡಿದೆ. ಇನ್ನೂ ಇಪ್ಪತ್ತು ಲಕ್ಷ ರೂಪಾಯಿಗಳು ದೊರೆತರೆ ನೃತ್ಯ ಮಂಟಪವನ್ನು ಹಿಡಿದು ಮಂದಿರದ ಎಲ್ಲ ಕಾರ್ಯಗಳೂ ತೃಪ್ತಿಕರವಾಗಿ ಮುಗಿಯಬಹುದು ಎಂಬ ಅಂದಾಜಿದೆ.

ಸೋಮನಾಥ ಮಂದಿರದ ಕಥೆ ಪುರಾಣ ಕಾಲಕ್ಕಿಂತಲೂ ಮೊದಲೇ ಆರಂಭವಾಯಿತು ಎನ್ನುತ್ತಾರೆ. ರಾವಣನು ಇದನ್ನು ಸುವರ್ಣಮಯವನ್ನಾಗಿ ಮಾಡಿದ್ದನು. ಅನಂತರ ಶೂದ್ರಕನೂ ಬಳಿಕ ಶ್ರೀಕೃಷ್ಣನೂ ಈ ಮಂದಿರದ ಪುನರುದ್ಧಾರ ಮಾಡಿದರೆಂದು ಪುರಾಣಗಳಲ್ಲಿ ಹೇಳಿದೆ.

ವಿಕ್ರಮಶಕದ 'ಆರಂಭ' ಕಾಲದಲ್ಲೂ ಈ ಮಂದಿರಕ್ಕಾಗಿ ಕಲ್ಲುಗಳನ್ನು ಉಪಯೋಗಿಸತೊಡಗಿದರು. ಕ್ರಿ. ಶ. ೩೨೦ ರಿಂದ ೫೦೦ ವರೆಗೆ ಅಜ್ಞಾತ ಭಕ್ತರು ಹಲವು ಸಲ ಈ ಮಂದಿರದ ಜೀರ್ಣೋದ್ಧಾರ ಮಾಡಿದರು. ಆದರೆ ಐತಿಹಾಸಿಕ ಆಧಾರದಿಂದ ಹೇಳುವುದಾದರೆ ಪ್ರಥಮತಃ ಕ್ರಿ. ಶ. ೬೪೯ ರಲ್ಲಿ 'ವಲ್ಲಭೀ ವಂಶದ ಮೈತ್ರಕನೆಂಬ ರಾಜ ಈ ದೇವಾಲಯವನ್ನು ಕಲ್ಲುಗಳಿಂದ ಕಟ್ಟಿಸಿದನು. ೮ನೆಯ ಶತಮಾನದಲ್ಲಿ ಸಿಂಧದಲ್ಲಿ ಮುಸಲ್ಮಾನರ ರಾಜ್ಯ ಬಂದ ಬಳಿಕ ಅವರು ವಲ್ಲಭಿ ರಾಜ್ಯದ ಮೇಲೆ ದಾಳಿ ಮಾಡಿದರು. ವಲ್ಲಭಿ ವಂಶ ನಷ್ಟವಾಯಿತು. ದಾಳಿಗಾರರು ಸೋಮನಾಥ ದೇವಾಲಯವನ್ನು ಹಾಳುಗೆಡಹಿದರು. ಆದರೆ ಮುಸಲ್ಮಾನರು ಮರಳಿ ಹೋದ ಮೇಲೆ ಹಿಂದುಗಳು ಮೊದಲಿಗಿಂತಲೂ ಭವ್ಯ ಸ್ವರೂಪದಲ್ಲಿ ಈ ದೇವಾಲಯವನ್ನು ಕಟ್ಟಿದರು.

ವಿಕ್ರಮ ಶಕ ೧೦೮೦ ರಲ್ಲಿ ಗಜನಿ ಮಹಮೂದನು ಸೋಮನಾಥ ದೇವಾಲಯದ ಖ್ಯಾತಿಯಿಂದ ಆಕರ್ಷಿತನಾಗಿ ಅದರ ಮೇಲೆ ದಾಳಿ ಮಾಡಿ ಅದನ್ನು ಧ್ವಂಸ ಮಾಡಿದನು. ಅದರ ಬೆನ್ನಿನಲ್ಲಿಯೇ ಚಾಲುಕ್ಯ ಕುಲದ ಭೀಮದೇವನು ಈ ದೇವಾಲಯದ ಜೀರ್ಣೋದ್ಧಾರವನ್ನು ಮಾಡಿದನು. ವಿಕ್ರಮ ಶಕ ೧೨೨೦ ರಿಂದ ೧೨೨೫ ರ ನಡುವಿನ ಸಮಯದಲ್ಲಿ ಪಾಶುಪತಶಿವಸಂಪ್ರದಾಯದ ಆಚಾರ್ಯ ಭಾವ ಬೃಹಸ್ಪತಿಯವರ ಪ್ರೇರಣೆಯಿಂದ ಮಹಾರಾಜಾ ಕುಮಾರಪಾಲನು ವಿಶಾಲ ರೂಪದಲ್ಲಿ ಸೋಮನಾಥ ದೇವಾಲಯದ ಜೀರ್ಣೋದ್ಧಾರ ಮಾಡಿದನು.

ವಿಕ್ರಮ ಶಕ ೧೩೫೩ ರಲ್ಲಿ ಕುಮಾರಪಾಲ ಕಟ್ಟಿಸಿದ ಮಂದಿರವನ್ನು ದಿಲ್ಲಿಯ ಅಲ್ಲಾ ಉದ್ದೀನ ಖಿಲಿಜಿಯ ಸರದಾರ ಉಲುದಾಖಾನನು ಧ್ವಂಸ ಮಾಡಿದನು. ಮಂದಿರದ ಕಳಸವನ್ನೂ ನೃತ್ಯ ಮಂಟಪವನ್ನೂ ಈತ ನೆಲಸಮ ಮಾಡಿದನು. ಈ ದುರ್ಘಟನೆಯಾದ ಬಳಿಕ ಕೆಲವೇ ದಿನಗಳಲ್ಲಿ ಜುನಾಗಡದ ಪ್ರತಾಪಿ ರಾಜ ರಾವ್ ಮಹಿಪಾಲ ಮತ್ತು ರಾವ್ ಖೇಂಗಾರರು ಮಂದಿರದ ಜೀರ್ಣೋದ್ಧಾರ ಮಾಡಿ ಲಿಂಗಸ್ಥಾಪನೆ ಮಾಡಿದರು.

ಪಂಡಿತ್
ಡಿ ಗೋಪಾಲಾಚಾರ್ಯುಲುರವರ
ಜೀವಾಮೃತಂ
ದೇಹಪುಷ್ಟಿಗೂ ಆರೋಗ್ಯಕ್ಕೂ
ಆಯುರ್ವೇದಾಶ್ರಮಂ
(ಪ್ರೈ) ಲಿಮಿಟೆಡ್
ಮದರಾಸು-17

ವಿಕ್ರಮ ಶಕ ೧೪೪೬ ರಲ್ಲಿ ಗುಜರಾತಿನ ಮಹಮೂದ ಬೇಗಡೆ ಜುನಾಗಡವನ್ನು ಗೆದ್ದುಕೊಂಡ ಬಳಿಕ ಸೋಮನಾಥ ದೇವಾಲಯವನ್ನು ಹಾಳುಗೆಡಹಿದನು. ಆದರೆ ಹಿಂದುಗಳು ಮುಂದೆ ತುಸು ಸಮಯದಲ್ಲಿ ಮೂರ್ತಿ ಪ್ರತಿಷ್ಠಾಪನೆ ಮಾಡಿ ಪೂಜಾದಿಗಳನ್ನು ಆರಂಭಿಸಿದರು.

ವಿಕ್ರಮಶಕ ೧೪೫೧ ರಿಂದ ೧೪೭೧ ರ ವರೆಗಿನ ಕಾಲ ಸೋಮನಾಥ ದೇವಾಲಯದ ಮಹಾ ದುರ್ದಿನಗಳೆನ್ನಬೇಕು. ೧೪೫೧ ರಲ್ಲಿ ಗುಜರಾತಿನ ಸುಬೇದಾರ ಜಾಫರಖಾನನು ಈ ಮಂದಿರವನ್ನು ನೆಲಸಮ ಮಾಡಿ ಅಲ್ಲಿ ಮಶೀದೆಯನ್ನು ಕಟ್ಟಿಸಿದನು. ವಿ. ಶ. ೧೪೫೪ ರಲ್ಲಿ ಹಿಂದುಗಳು ಮತ್ತೆ ಲಿಂಗ ಪ್ರತಿಷ್ಠಾಪನ ಮಾಡಿದ್ದನ್ನು ಮುಜಫರಖಾನನು ನಷ್ಟಗೊಳಿಸಿದನು.

ಅಹಮದಾಬಾದಿನ ಅಹಮದಶಾಹನು ವಿ. ಶ. ೧೪೭೧ ರಲ್ಲಿ ಜುನಾಗಡದ ಮಾಂಡಲಿಕ ರಾಣಾನ ಮೇಲೆ ದಾಳಿ ಮಾಡಿದಾಗ ಸೋಮನಾಥ ದೇವಾಲಯದ ಮೇಲೂ ಆಕ್ರಮಣ ಮಾಡಿದನು. ವಿ. ಶ. ೧೪೫೧ ರಿಂದ ೧೪೭೧ ರೊಳಗೆ ಹೀಗೆ ಮೂರು ಸಲ ಸೋಮನಾಥ ದೇವಾಲಯವು ಧ್ವಂಸವಾಯಿತು. ಮುಸಲ್ಮಾನರ ಉಪಟಳದಿಂದ ಕುಮಾರಪಾಲ ಕಟ್ಟಿಸಿದ ಮಂದಿರದ ಜೀರ್ಣೋದ್ಧಾರ ಸಾಧ್ಯವಾಗದಿದ್ದರೂ ಹಿಂದುಗಳು ಗುಪ್ತ ರೀತಿಯಲ್ಲಿ ದೇವ ಪ್ರತಿಷ್ಠಾಪನೆ ಮಾಡಿ ಪೂಜಾರ್ಚನಾದಿಗಳನ್ನು ನಡೆಸುತ್ತಿದ್ದರು. ಹೀಗೆ ೭೫ ವರ್ಷಗಳು ಕಳೆದ ನಂತರ ಗುಜರಾತಿನ ಸುಲ್ತಾನ ಮುಜಫರ ಧೀಜಾ ಸೋಮನಾಥದ ಮೇಲೆ ದಾಳಿ ಮಾಡಿದನು. ಪ್ರಭಾಸಪಾಟಣದ ಮೇಲೂ ದಾಳಿಮಾಡಿ ಭಂಗವಾಗಿದ್ದ ಮೂರ್ತಿಯನ್ನು ಇನ್ನಿಷ್ಟು ಭಂಗಗೊಳಿಸಿದನು. ಮುರಿದ ಗುಡಿಯನ್ನು ಮಶೀದೆಯನ್ನಾಗಿ ಮಾಡಿದನು. ಆದರೆ ಕೆಲ ಸಮಯದ ನಂತರ ಹಿಂದುಗಳು ಮತ್ತೆ ಅಲ್ಲಿಯೆ ಮೂರ್ತಿ ಪ್ರತಿಷ್ಠಾಪನೆ ಮಾಡಿ ಪೂಜಾದಿಗಳನ್ನು ನಡೆಸಿದರು.

ಮುಂದೆ ಸುಮಾರು ೧೭೫ ವರ್ಷಗಳ ವರೆಗೆ ಈ ಪ್ರದೇಶದಲ್ಲಿ ಶಾಂತಿಯಿತ್ತೆನ್ನಬಹುದು. ಆದರೆ ಔರಂಗಜೇಬನ ಕಾಲದಲ್ಲಿ ಮತ್ತೆ ವಿಪತು ಬಂತು. ಸೋಮನಾಥದ ಸಮೃದ್ಧಿ ಮತ್ತು ಮಹಾತ್ಮೆಯನ್ನು ಕೇಳಿದ ಔರಂಗಜೇಬ ಅಲ್ಲಿ ಪುನಃ ಹಿಂದುಗಳು ಪೂಜೆಯನ್ನಾರಂಭಿಸದ ರೀತಿಯಲ್ಲಿ ದೇವಾಲಯವನ್ನು ನಷ್ಟಮಾಡಿ ಭ್ರಷ್ಟಗೊಳಿಸಬೇಕು ಎಂದು ಗುಜರಾತಿನ ಸುಬೇದಾರ ಶುಜಾತಖಾನನಿಗೆ ಅಪ್ಪಣೆ ಮಾಡಿದನು. ಆತ ಮಂದಿರವನ್ನು ಅಪವಿತ್ರಗೊಳಿಸಲೆಂದು ಅಲ್ಲಿ ನೂರಾರು ಆಕಳುಗಳನ್ನು ಕೊಲ್ಲಿಸಿದನು. ಮಂದಿರವನ್ನು ನೆಲಸಮ ಮಾಡಿದನು. ಆದರೆ ಅದನ್ನು ಸುಟ್ಟು ಭಸ್ಮ ಮಾಡಬೇಕೆನ್ನುವ ಅವನ ಯೋಜನೆ ಕಟ್ಟಡವು ಕಲ್ಲಿನದಾಗಿತ್ತಾದ್ದರಿಂದ ಯಶಸ್ವಿಯಾಗಲಿಲ್ಲ.

ಈ ರೀತಿಯಲ್ಲಿ ಮಹಾರಾಜಾ ಕುಮಾರಪಾಲ ಕಟ್ಟಿಸಿದ ದೇವಾಲಯವು ೫೨೫ ವರ್ಷಗಳಲ್ಲಿ ಏಳು ಸಲ ಧ್ವಂಸ ಮಾಡಲ್ಪಟ್ಟಿತು. ಆದರೆ ವಿರೋಧಿಗಳ ಈ ಸತತ ಪ್ರಯತ್ನದ ಎದುರು ಭಾರತೀಯರ ಧಾರ್ಮಿಕ ಭಾವನೆ ಅಜಯ್ಯವಾಗುಳಿದು ಮಂದಿರವು ಬಿದ್ದಷ್ಟು ಸಲವೂ ಮತೆ ತಲೆಯೆತ್ತಿತು. ಔರಂಗಜೇಬನಿಂದ ನಷ್ಟಗೊಳಿಸಲ್ಪಟ್ಟ ಮೇಲೆ ಗೋವಧೆಯಿಂದ ಅಪವಿತ್ರವಾದ ಸ್ಥಳದಲ್ಲಿ ಪೂಜೆ ಮಾಡಲಾಗದೆ ಅಲ್ಲಿ ಜನ ಪೂಜೆ ಮಾಡುವುದನ್ನು ನಿಲ್ಲಿಸಿದ್ದರು. ಆದರೆ ಭಾರತೀಯರ ಅಜಯ್ಯ ಧರ್ಮನಿಷ್ಠೆಯ ಫಲವಾಗಿ ಈಗ ಈ ಮಂದಿರವು ಮತ್ತೆ ತನ್ನೆಲ್ಲ ಪೂರ್ವ ವೈಭವ ಸಮೇತ ತಲೆಯೆತ್ತಿ ನಿಲ್ಲುವಂತಾಗಿದೆ. *





## ಅಧ್ಯಾತ್ಮ ಕಾರ್ಯಾಲಯದ ಪ್ರಕಟನೆಗಳು

ಶ್ರೀ ದಿವಾಕರ ರಂಗರಾಯರ ಅಮೂಲ್ಯ ಗ್ರಂಥಗಳು

# ಶ್ರೀ ದಿವಾಕರ ರಂಗರಾಯರ ಅಮೂಲ್ಯ ಗ್ರಂಥಗಳು

| | | |
|---|---|---|
| ೧. | ಅಂತರಾತ್ಮನಿಗೆ [೫ ನೆಯ ಆವೃತ್ತಿ] | ೦೦ = ೭೫ |
| ೨. | ಗೀತೆಯ ಗುಟ್ಟು [೫ ನೆಯ ಆವೃತ್ತಿ] | ೩ = ೦೦ |
| ೩. | ಗೀತಾ ನಿತ್ಯ ಪಾಠ [೨ ನೆಯ ಆವೃತ್ತಿ] | ೦೦ = ೩೭ |
| ೪. | ಉಪನಿಷತ ಕೋಶ [೬ ನೆಯ ಆವೃತ್ತಿ] | — |
| ೫. | ಛಾಂದೋಗ್ಯೋಪನಿಷತ್ತು [೧ ನೆಯ ಆವೃತ್ತಿ] | ೩ = ೫೦ |
| ೬. | ಬೃಹದಾರಣ್ಯಕೋಪನಿಷತ್ತು [೧ ನೆಯ ಆವೃತ್ತಿ] | ೩ = ೫೦ |
| ೭. | ಉಪನಿಷತ್ ರಹಸ್ಯ [೩ ನೆಯ ಆವೃತ್ತಿ] | ೩ = ೫೦ |
| ೮. | ಉಪನಿಷತ್ಕಥಾವಲಿ [೨ ನೆಯ ಆವೃತ್ತಿ] | ೧ = ೩೭ |
| ೯. | ಭಕ್ತಿ ಸೂತ್ರಗಳು [೨ ನೆಯ ಆವೃತ್ತಿ] | ೦೦ = ೬೨ |
| ೧೦. | ಕರ್ಮಯೋಗ [೩ ನೆಯ ಆವೃತ್ತಿ] | ೧ = ೫೦ |
| ೧೧. | ಹರಿಭಕ್ತಿ ಸುಧೆ [೩ ನೆಯ ಆವೃತ್ತಿ] | ೬ = ೫೦ |
| ೧೨. | ಶ್ರೀರಾಮಕೃಷ್ಣ ಚರಿತಾಮೃತ [೩ ನೆಯ ಆವೃತ್ತಿ] | ೩ = ೦೦ |
| ೧೩. | ಬಾಪೂ ೩ ನೆಯ ಆವೃತ್ತಿ | ೨ = ೦೦ |
| ೧೪. | ಗಾಂಧೀಜಿ ನಾನು ಕಂಡಂತೆ [೨ ನೆಯ ಆವೃತ್ತಿ] | — |
| ೧೫. | ಸತ್ಯಾಗ್ರಹ [೨ ನೆಯ ಆವೃತ್ತಿ] | ೩ = ೫೦ |
| ೧೬. | ಮಹಾತ್ಮರ ಮನೋರಂಗ [೨ ನೆಯ ಆವೃತ್ತಿ] | ೩ = ೫೦ |
| ೧೭. | ಸೆರೆಯ ಮರೆಯಲ್ಲಿ [೨ ನೆಯ ಆವೃತ್ತಿ] | ೨ = ೫೦ |
| ೧೮. | ವಚನಶಾಸ್ತ್ರ ರಹಸ್ಯ [೩ ನೆಯ ಆವೃತ್ತಿ] | ೬ = ೦೦ |
| ೧೯. | ಮಹಾಯೋಗಿ ಮಹರ್ಷಿ ಅರವಿಂದರು [೧ ನೆಯ ಆವೃತ್ತಿ] | ೨ = ೫೦ |
| ೨೦. | ಯಾತ್ರಿಕ [ಮನೋಹರ ಗ್ರಂಥ ಪ್ರಕಾಶನ] | ೨ = ೦೦ |
| ೨೧. | ವೇದ ಕಥಾವಳಿ ೧ನೇ ಆವೃತ್ತಿ | ೧ = ೫೦ |
| ೨೨. | "ಹಿಮಾಲಯ ದರ್ಶನ" [೧ ನೇ ಆವೃತ್ತಿ] | ೩ = ೫೦ |

ದೊರೆಯುವ ಸ್ಥಳ: **ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ.**

ಬೆಂಗಳೂರು ಕಾರ್ಯಾಲಯ:— **ಸಂಯುಕ್ತ ಕರ್ನಾಟಕ ಬಿಲ್ಡಿಂಗ್**
**೨, ರೆಸಿಡೆನ್ಸಿರೋಡ್, ಬೆಂಗಳೂರು—೧**

Ladies Nylon Strap
Model No: 164
Price: Rs. 5.25

Ladies gold plated
Bracelet
Model No: 156
Price: Rs. 12.00

# THERE IS ALWAYS A "Bentex" STRAP OR BRACELET TO SUIT YOUR REQUIREMENT

Gents Nylon Strap
Model No: 17
Price: Rs. 3.5C

Gents Leather
Strap
Model No: 130
Price: Rs. 3.50

SOLF AGENTS :

"Bentex"
SALES CORPORATION,
Bentex Building.
BOMBAY-7

*Manufacturers :*
COLLINS & Co
BOMBAY 7.

AVAILABLE AT ALL WATCH DEALERS

# ಆಗಸ್ಟ್ ಹದಿನಾಲ್ಕು

ಎ. ವಿ. ನಾಗವೇಣಿಬಾಯಿ

ಪ್ರಯಾಣಿಕರನ್ನು ಗಮ್ಯ ಸ್ಥಾನಕ್ಕೆ ಸೇರಿಸಲು ಏದುತ್ತ ಬಂದು ನಿಂತಿತು ರೈಲು ಗಾಡಿ. ಕೈಯಲ್ಲಿರುವ ನನ್ನ ಲೆದರ್ ಸೂಟ್‌ಕೇಸನ್ನು ಅತಿ ಜಾಗ್ರತೆಯಾಗಿ ಹಿಡಿದುಕೊಂಡು ಗಾಡಿ ಇಳಿದು ಪ್ಲಾಟ್‌ಫಾರಂನಲ್ಲಿ ಗುರುತಿನವರಾರೂ ಇಲ್ಲವೆಂದು ನಿರ್ಧರಿಸಿಕೊಂಡು ಸಿಗರೇಟ್ ಹೊತ್ತಿಸಿದೆ. ಆ ಅನಿರ್ವಚನೀಯವಾದ ಆನಂದವನ್ನು ಅನುಭವಿಸುತ್ತ ಮನೆಯ ದಾರಿ ಹಿಡಿದೆ.

ಎಲ್ಲರೂ ಆ ಹುಡುಗಿಯನ್ನು ನೋಡಿದ್ದಾರಂತೆ. ನೋಡಲು ಪುಣ್ಯ ಮಾಡಿರಬೇಕಂತೆ. ನಾನೊಬ್ಬನೇ ನೋಡದಿರುವ ಪಾಪಿ. ಶಾಂತೂ ಅದೆಷ್ಟು ಬಣ್ಣಿಸಿದ್ದಾಳೆ ಪತ್ರದಲ್ಲಿ! ನಿಜವಾಗ್ಲೂ "ಆ ಹುಡುಗಿ" ಅಷ್ಟು ಸುಂದರಿಯೋ ಏನೊ! ನಾನು ನೋಡಿಲ್ಲವಲ್ಲ. ಬಹುಶಃ ಅವಳು ಯಾರಿರಬಹುದು? ಹೆಸರು ಶಾರದೆ. ಆ್ಞ! ಅವಳು ನನ್ನ ಇಂಟರ್ಮೀಡಿಯೆಟ್ ಕ್ಲಾಸ್‌ಮೇಟ್ ಶಾರದೆ ಅಲ್ಲವಲ್ಲ! ಈ ಆಲೋಚನೆ ಬಂದ ತಕ್ಷಣ ನನ್ನ ನಗೆ ಜೋರಾಯಿತು. ಬಾಯಲ್ಲಿರುವ ಸಿಗರೇಟನ್ನು ಎಸೆದುಬಿಟ್ಟೆ. ನನ್ನಲ್ಲೇ ಮುಗುಳು ನಗೆ ನಗುತ್ತ ಮನೆ ಸೇರಿ ಹೊಸ್ತಿಲೊಳಗೆ ಕಾಲಿಟ್ಟೆ.

"ಟ್ರೇನ್ ಲೇಟಾಯ್ತೇನೊ?" ಕನ್ನಡಕವನ್ನು ಎಡಗೈಯಿಂದ ತೆಗೆದು ಬಲಗೈಯಲ್ಲಿ ಹಿಡಿದು ತಂದೆ ಕೇಳಿದರು. ಹೊಸೆಯುತ್ತಿದ್ದ ಹೂಬತ್ತಿಯನ್ನು ಕೈಯಲ್ಲೇ ಹಿಡಿದುಕೊಂಡು ನನ್ನನ್ನೊಮ್ಮೆ ಮೇಲಿಂದ ಕೆಳಗೆ ನೋಡುತ್ತ "ಎಷ್ಟು ಸೊರಗಿದ್ದೀಯೋ ನನ್ನಪ್ಪಾ!" ಎಂದರು ನಮ್ಮಜ್ಜಿ. ಕೈಯಲ್ಲಿನ ಸೌತೇಕಾಯಿಯನ್ನು ತಿರುಪುಮುರುವಾಗಿ ಹಾರಿಸುತ್ತ "ಇನ್ನು ಮೇಲೆ ಸೊರಗೊಲ್ಲ ಬಿಡಿ. ಅಮೃತದಂಥಾ ಅಡಿಗೆ ಮಾಡಿಹಾಕೊ ಅರ್ಧಾಂಗಿ ಬರ್ತಾಳೆ. ಅಲ್ವೇನೊ ರಾಜಾ?" ಎಂದರು ನನ್ನ ತಾಯಿ ಮಂದಹಾಸದಿಂದ. ಇಷ್ಟರಲ್ಲೇ ಸ್ಪುಟ್ನಿಕ್ ಬಂದ ಹಾಗೆ ನನ್ನ ತಂಗಿ ಶಾಂತೂ ಓಡಿ ಬಂದಳು. "ರೇಡಿಯೊ ಗಲಾಟೇಲಿ ನೀನು ಬಂದಿದ್ದು ಗೊತ್ತೇ ಆಗ್ಲಿಲ್ಲ ಕಣೊ. ಎಲ್ಲಿ... ನಾನು ಹೇಳಿದ್ದು ತಂದಿದೀಯಾ?" ಎನ್ನುತ್ತ ಕೈ ಚಾಚಿ ಮತ್ತೆ ಸರಕ್ಕನೆ ಹಿಂದಕ್ಕೆಳೆದುಕೊಂಡು "ಓ! ಅತ್ತಿಗೆ ಬರೊ ಗಲಾಟೇಲಿ ನಾವೆಲ್ಲಾ ಎಲ್ಲಿ?" ಎಂದು ಮುಖ ತಿರುವಿದಳು. ನನಗೆ ಆ ತುಂಟ ಹುಡುಗಿಯನ್ನು ನೋಡಿ ನಗು ಬಂತು. "ಇನ್ನೂ ಚಿಕ್ಕತನ ಬಿಟ್ಟಿಲ್ವೇ?" ಎನ್ನುತ್ತ ಅವಳು ಕೇಳಿದ ಕೆಂಪು ವ್ಯಾನಿಟೀ ಬ್ಯಾಗನ್ನು ಕೊಟ್ಟೆ. ಸಂತೋಷದಿಂದ ಕುಣಿಯುತ್ತ ಶಾಂತೂ "ಓಹ್! ತುಂಬ ಥ್ಯಾಂಕ್ಸ್. ಆ....ತಾಳು ನಿನಗೆ..." ಎಂದು ಸರಕ್ಕನೆ ತಾಯಿಯ ಕೈಲಿದ್ದ ಸೌತೇಕಾಯಿ ತುಂಡು ಮಾಡಿ ನನ್ನ ಬಾಯಿಗೆ ತುರುಕಿ ತಾನೂ ಬಾಯಲ್ಲಿ ಹಾಕಿಕೊಂಡಳು.

* * *

ಸಾಯಂಕಾಲ ನಾನು, ನಮ್ಮ ಶಾಂತು, ನಮ್ಮ ಅತ್ತಿಗೆ ಕೇರಂ ಬೋರ್ಡ್ ಆಡುತ್ತಿದ್ದೆವು. ರೆಡ್ ಕಾಯಿನ್ ನನಗೆ ಬಂದಿತೆನ್ನುವ ಸಂತೋಷದಲ್ಲಿ ತೆಗೆದ ಬಾಯಿ ಹಾಗೆಯೇ ಉಳಿಯಿತು. ಅದರ ಕಾರಣ ಆಗ ತಾನೆ ಒಳಗೆ ಕಾಲಿಟ್ಟ ನಮ್ಮಣ್ಣನ ಪೆಚ್ಚು ಮುಖ. ಕೈಯಲ್ಲಿ ಪೇಪರ್ ಹಿಡಿದು 'ಅಣ್ಣಾ' ಎನ್ನುತ್ತ ಬರುತ್ತಿದ್ದವನು ನನ್ನನ್ನು ಕಂಡು 'ಲೋ ನೀನ್ಯಾವಾಗ ಬಂದೆ?' ಎಂದು ಪುನಃ, ತಂದೆಯ ಕಡೆ ತಿರುಗಿ "ಅಣ್ಣ, ಇವತ್ತಿನ ಪೇಪರ್ ನೋಡಿದೀಯಾ?" ಎಂದ. "ಅಂಥಾ ಸುದ್ದಿ ಏನು?" ಎನ್ನುತ್ತ ನಮ್ಮ ತಂದೆ ಪೇಪರ್ ಕೈಗೆ ತೆಗೆದುಕೊಂಡರು. ಓದುತ್ತಿದ್ದ ಹಾಗೆಯೇ ಹಣೆಯ ಮೇಲೆ ಬೆವರಿನ ಹನಿ

ಕಾಣಿಸತೊಡಗಿದವು. ಉಸಿರು ಬಿಗಿ ಹಿಡಿದು ಓದುತ್ತಿದ್ದರು. ನನ್ನ ಕುತೂಹಲ ಕೆರಳಿತು. ಹಿಂದಿನಿಂದ ನಾನೂ ನೋಡತೊಡಗಿದೆ. "ಜುಲೈ ಹದಿನಾಲ್ಕರ ಸಾಯಂಕಾಲ ಜಲಪ್ರಳಯವಾಗುವ ಸಂಭವವಿದೆ" ನಾನು ಓದಿದ್ದು ನಿಜವೊ ಅಥವಾ ನನ್ನ ಕಲ್ಪನೆಯೊ ಗೊತ್ತಾಗದೆ ಕೈಯನ್ನು ಚಿವುಟಿಕೊಂಡೆ. ನೋವಾಯಿತು. ಇನ್ನೊಮ್ಮೆ ಪೇಪರ್ ಮೇಲೆ ಕಣ್ಣು ಹಾಯಿಸಿದೆ. ಇಷ್ಟರಲ್ಲೇ ಅಲ್ಲಿಗೆ ಬಂದ ನಮ್ಮ ತಾಯಿ ಮತ್ತು ನಮ್ಮಜ್ಜಿ ನಮ್ಮನ್ನು ನೋಡಿ "ಏನದು?" ಎಂದು ಕೇಳಿದರು. ಎಷ್ಟು ಹೊತ್ತಾದರೂ ಯಾರೂ ಪೇಪರ್ ಬಿಡಲಿಲ್ಲ. ಮಾತಾಡಲಿಲ್ಲ. ನಮ್ಮಜ್ಜಿಗೆ ರೇಗಿತು. "ಅದೇನು ಅಂದ್ರೆ, ಮಾತಾಡ್ದೆ ಹಾಗೇಕೆ ಕೂತ್ಕೊಂಡಿದೀರಾ?" ಎಂದರು ಧ್ವನಿ ಏರಿಸಿ. ಯಾರೂ ಮಾತಾಡಲಿಲ್ಲ. ನಾನೇ ಹೇಳೋಣ ವೆಂದು ಬಾಯಿ ತೆರೆಯುವಷ್ಟರಲ್ಲಿ ನಮ್ಮ ಆಲ್ ಇಂಡಿಯಾ ರೇಡಿಯೊ ಶಾಂತೂ "ಅಜ್ಜೀ!! ಇನ್ನೇನಿದೆ. ಎಲ್ಲಾ. . . ಆಗ್ಹೋಯ್ತು" ಎಂದು ರಾಗ ಎಳೆದಳು. ನಮ್ಮಜ್ಜಿಗೆ ಏನೂ ಅರ್ಥವಾಗದೆ "ಅದೇನೋ ಸರಿಯಾಗಿ ಹೇಳೇ ತಾಯಿ" ಎಂದರು. ಅವಳೇನೂ ಮಾತಾಡಲಿಲ್ಲ.

ನಮ್ಮ ತಂದೆ ತಲೆಯ ಹಿಂದೆ ಎರಡೂ ಕೈಗಳನ್ನು ಸೇರಿಸಿ ಈಜೀ ಚೇರ್‌ನಲ್ಲಿ ಒರಗಿದರು. ನಮ್ಮಣ್ಣ ಶೂಗಳನ್ನು ಬಿಚ್ಚುವುದು ಸಹ ಮರೆತು ಕೆನ್ನೆಗೊಂದು ಕೈ ಕೊಟ್ಟು ನಿಟ್ಟುಸಿರು ಬಿಡಲಾರಂಭಿಸಿದ್ದ. ಕೊನೆಗೆ ನಾನೇ ಧೈರ್ಯ ಮಾಡಿದೆ.

ನಾನು ಎಲ್ಲವನ್ನೂ ವಿವರಿಸಿ ಹೇಳುತ್ತಿದ್ದಂತೆ ಒಬ್ಬೊಬ್ಬರ ಮುಖದ ಮೇಲೂ ದುಃಖದ ಚಿಹ್ನೆಗಳು ಎದ್ದು ಕಾಣಿಸತೊಡಗಿದವು. ನನ್ನ ವಿವರಣೆಯನ್ನು ಮುಗಿಸುತ್ತ ಕೊನೆಯದಾಗಿ ಎರಡು ಮಾತುಗಳನ್ನು ಹೇಳಿದೆ. "ಅಂತೂ ಹದಿನಾಲ್ಕನೇ ತಾರೀಖು ರಾತ್ರಿ, ಮುಗಿಯೋದ್ರಲ್ಲೇ ಪ್ರಪಂಚ ನಾಶವಾಗೋದು ನಿಜ. ಅದರಲ್ಲೂ ಮಿಕ್ಕವರ ಸಮಾಚಾರ ಹೇಗಿದ್ದರೂ ಕಾವೇರಿ ನದಿಗೆ ಅತಿ ಸಮೀಪದಲ್ಲೇ ಇದೀವಿ, ಆದಕಾರಣ ನಾವು ಎಲ್ಲರಿಗಿಂತ ಮೊದಲೆ. . . ."

ಅಜ್ಜಿ "ಅಯ್ಯೊ" ಎಂದು ಚೀರಿ ಕುಸಿದರು. ಅಜ್ಜಿಯನ್ನು ಹಿಡಿದುಕೊಂಡು ನಮ್ಮ ತಾಯಿಯೂ ಕುಳಿತುಬಿಟ್ಟರು. ಮನೆಯಲ್ಲಿ ಶೋಕದ ವಾತಾವರಣ ಹರಡಿಕೊಂಡಿತು.

"ಅಯ್ಯೊ! ದೇವರೇ! ಮುಪ್ಪಿನ ಕಾಲಕ್ಕೆ ಅಂದುಕೊಂಡಿದ್ದೊಂದೂ ಆಗಲಿಲ್ಲವಲ್ಲಾ? ಆಗಲೇ ಹೀಗೆ ಮಾಡಿದೆಯಾ ತಂದೇ? ಸಾಯೋ ಕಾಲಕ್ಕೆ ಎಲ್ಲರೂ ಒಟ್ಟಿಗೇ ಇರೊ ಹಾಗಾದರೂ ಮಾಡಪ್ಪಾ ತಂದೇ. . . ." ಎನ್ನುತ್ತ ಅಜ್ಜಿ ಜೋರಾಗಿ ಅಳಲಾರಂಭಿಸಿದರು.



ನಮ್ಮ ತಾಯಿಗೂ ದುಃಖದ ಕಟ್ಟೆ ಒಡೆಯಿತು. "ಮಗಳು, ಮಗನ ಮದುವೆ ಮಾಡಿ, ಅವರು ಸುಖವಾಗಿರೋದು ನೋಡ್ತೀನಿಂತ ತಿಳ್ಕೊಂಡಿದ್ದೆ ಅತ್ತೇ.... ಸೊಸೆ ಬರ್ತಾಳೇಂತ ಆಸೆಪಟ್ಟೆ.... ಕೊನೆಗೆ ಹೀಗಾಯ್ತಲ್ಲಾsss" ....ಎಂದರು ಮೂಗು ಹಿಂಡಿಕೊಳ್ಳುತ್ತ.

ನಮ್ಮ ಶಾಂತೂ ಅಂದರೆ ತುಂಬ ಪ್ರೀತಿ ನಮ್ಮತ್ತಿಗೆಗೆ. ಅವಳಿಗೆ ಅದುವರೆಗೂ ಒತ್ತಿ ಹಿಡಿದಿದ್ದ ದುಃಖ ಇದ್ದಕ್ಕಿದ್ದಂತೆ ಕಣ್ಣೀರಿನ ರೂಪದಲ್ಲಿ ಚಿಮ್ಮಿತು. "ಶಾಂತೂ" ಎನ್ನುತ್ತ ನನ್ನ ತಂಗಿಯನ್ನಪ್ಪಿಕೊಂಡರು. "ನಿನ್ನ ಮದ್ವೇ ಆದ್ಮೇಲೆ ನಿನ್ನ ತವರಿಗೆ ಕರೆಸಿ ನೀನು ಕೇಳಿದ್ದು ಮಾಡಿ ಹಾಕೋಣ ಎಂದುಕೊಂಡಿದ್ದೆನಲ್ಲೇ.. ಮದುವೇಲಿ ಬರೊ ಮನೆ ಉಡುಗೊರೇನೂ ತಪ್ಪಿತಲ್ಲೇ ಶಾಂತೂ...." ಎಂದು ಅವಳ ತಲೆ ನೇವರಿಸಿದರು. ಶಾಂತೂ ಅತ್ತಿಗೆಯನ್ನಪ್ಪಿ ಅವರ ಭುಜದ ಮೇಲೆ ತಲೆ ಇಟ್ಟು "ಅತ್ತಿಗೆ, ನಾನು ಶುರುವಿಟ್ಟಿರೊ ಸ್ವೆಟ್ಟರ್ ವ್ಯರ್ಥವಾಯಿತಲ್ಲಾ.... ಮೊನ್ನೆ ತಾನೇ ಕೊಂಡಿದ್ದ ರೇಡಿಯೋನ್ನ ಯಾರು ಕೇಳ್ಬೇಕತ್ತಿಗೇ .... ನನ್ನ ರಿಜಲ್ಟ್ಸ್ ಬಂದಿಲ್ಲವಲ್ಲಾ.... ಅಯ್ಯೊ" ಎಂದು ಇನ್ನೇನೂ ಸಿಗದೆ ಅತ್ತಿಗೆಯ ಸೆರಗಿನಿಂದಲೇ ಕಣ್ಣೊರಸಿಕೊಂಡಳು.

ನನಗೂ ಕಣ್ಣಲ್ಲಿ ನೀರೂರಿತು. ಜುಲೈ ಇಪ್ಪತ್ತನೇ ದಿನ ಎಲ್ಲರ ಎದುರಿನಲ್ಲೂ ಷಾರ್ಕ್‌ಸ್ಕಿನ್ ಬುಷ್‌ಕೋಟು, ಟ್ವೀಡ್ ಸೂಟು ಹಾಕಿಕೊಂಡು ಛಾಂಪಿಯನ್‌ಷಿಪ್ ಮೆಡಲ್ ಸ್ವೀಕರಿಸೋಣ ಎಂದುಕೊಂಡಿದ್ದೆ. ರಿಜಲ್ಟ್ಸ್ ಬಂದ ಮೇಲೆ ನನಗೆ ಸಿಗುವ ವೆಸ್ಟೆಂಡ್ ವಾಚೂ ಹೋಯಿತಲ್ಲಾ ಎಂದು ಹೊಟ್ಟೆಯಲ್ಲಿ ಕಸಿವಿಸಿಯಾಯಿತು ತಂದೆಯವರು ಮೆಲ್ಲನೆ ಎದ್ದು ಆ ಕಡೆಯಿಂದ ಈ ಕಡೆಗೆ ತಿರುಗಾಡುತ್ತ ನಿಟ್ಟುಸಿರು ಬಿಡತೊಡಗಿದರು. "ಉಶ್, ಪ್ಚ್. ಏನು ಮಾಡೋದು? ಎಲ್ಲಾ ಭಗವಂತನ ಲೀಲೆ. ಇಷ್ಟು ದಿನಕ್ಕೆ ಸುಬ್ಬಣ್ಣಾಚಾರ್ಯರು ಆರು ಸಾವಿರ ಕೊಡ್ತೀನೀಂತ ಬರೋದೇನು, ಈ ಉಪದ್ರವ ಏನು? ಅಂತೂ ನನ್ನ ಹಣೇಲಿ ಮಗನ ಮದುವೇಗೆ ವರದಕ್ಷಿಣೆ ತೊಗೊಳ್ಳೊದು ಬರೆದಿಲ್ಲ. ಪ್ಚ್...."

ಇನ್ನು ನನಗೆ ಅಲ್ಲಿರುವುದು ಸಾಧ್ಯವಾಗಲಿಲ್ಲ. ಅಣ್ಣನ ಬಳಿಗೆ ಬಂದೆ. ನಮ್ಮಣ್ಣನ ದೃಷ್ಟಿ ಕಿಟಕಿಯಿಂದಾಚೆಗೆ ಹೋಗಿ ಶೂನ್ಯದಲ್ಲಿ ನೆಟ್ಟಿತ್ತು. ಮೆಲ್ಲನೆ ಅಣ್ಣನ ಪಕ್ಕಕ್ಕೆ ಸೇರಿ "ಇಷ್ಟು ತಿಳಿದೋನು ನೀನೂ—" ನಮ್ಮಣ್ಣನ ದೈನ್ಯ ನನ್ನ ಹೃದಯವನ್ನು ಕರಗಿಸಿತು. "ಇಲ್ಲ ಕಣೊ ರಾಜು, ಈ ಸಲ ಖಂಡಿತವಾಗಿಯೂ ಆಲ್ ಕರೆಕ್ಟ್ ಆಗಿರುತ್ತೆ. ಈ ವಾರದ ಭವಿಷ್ಯದಲ್ಲಿ ಅಕಸ್ಮಾತ್ ಧನಲಾಭ ಎಂತಲೂ ಇದೆ. ಪ್ರೈಜ್ ಬರೋದ್ರಲ್ಲೇ ...." ನಮ್ಮಣ್ಣನ್ನ ಹೇಗೆ ಸಮಾಧಾನ ಪಡಿಸಬೇಕೊ ತಿಳಿಯಲಿಲ್ಲ. ಎಲ್ಲರ ತಲೆಯ ಮೇಲೂ ಬೆಟ್ಟದಷ್ಟು ದುಃಖವಿದೆ, ಯಾರನ್ನೇನು ... ಹ್ಞಾ!! ಇದ್ದಕ್ಕಿದ್ದಂತೆ ನನ್ನಲ್ಲೇನೊ ಆಲೋಚನೆ ಹೊಳೆಯಿತು. ಮೆಲ್ಲನೆ ನಮ್ಮಣ್ಣಗೆ ಹೇಳಿದೆ. ತುಂಬ ಸಂತೋಷಪಟ್ಟು ತಂದೆಯವರಿಗೂ ತಿಳಿಸಲು ಅವರನ್ನು ಕೂಗಿದ. "ಏನದು?" ಎಂದು ಬಂದ ತಂದೆಗೆ "ನಾವು ಈ ಮನೆಯಲ್ಲೇ ಇದ್ರೆ, ತಾನೆ ನಮಗೆ ಭಯ? ಎಲ್ಲರೂ ಚಾಮುಂಡಿ ಬೆಟ್ಟಕ್ಕೆ ಹೊರಟರೆ ಅಲ್ಲಿ ಸುರಕ್ಷಿತವಾಗಿ ಇರಬಹುದಲ್ಲ" ಎಂದೆ– ನನ್ನ ಈ ಅಮೋಘವಾದ ಆಲೋಚನೆಗೆ ನಾನೇ ಉಬ್ಬಿ ಹೋಗುತ್ತಾ. ಈ ಸಲಹೆಗೆ ನಮ್ಮ ತಂದೆಯವರೂ ಸಮ್ಮತಿಯನ್ನಿತ್ತರು. ಇದನ್ನು ಹೆಂಗಸರಿಗೂ ತಿಳಿಸೋಣವೆಂದು ಒಳಗೆ ಹೊರಟೆ. ದೇವರ ಮನೆಯಲ್ಲಿ ತುಪ್ಪದ ದೀಪ ಬೆಳಗುತ್ತಿತ್ತು. ಅಮ್ಮ ಅತ್ತಿಗೆ, ಶಾಂತೂ ವಿನಮ್ರರಾಗಿ ಕೈಮುಗಿದು ನಿಂತಿದ್ದರು. ಅಜ್ಜಿ ಕೆನ್ನೆ ಬಾರಿಸಿಕೊಂಡು "ತಂದೆ ತಿರುಮಲೇಶಾ, ಹೇಗಾದರೂ ಈ ಗಂಡಾಂತರದಿಂದ ಪಾರು ಮಾಡಿಸಪ್ಪ. ತಿರುಪತಿಯಲ್ಲಿ ಬ್ರಹ್ಮೋತ್ಸವ ಮಾಡಿಸುತ್ತೇವೆ" ಎಂದು ಬೇಡಿಕೊಂಡರು. ಒಳಗೆ ಹೋಗಿ ಅವರಿಗೆಲ್ಲ ಈ ನನ್ನ ಆಲೋಚನೆಯನ್ನು ತಿಳಿಸಿದಾಗ ಎಲ್ಲರ ಮುಖದಲ್ಲೂ ಆನಂದ, ಆಶ್ಚರ್ಯ ತಾಂಡವವಾಡಿದುವು. ನನ್ನ ಮಾತನ್ನು ಕೇಳಿ ಅಜ್ಜಿ, "ಹಾಗಾದ್ರೆ ಬೆಟ್ಟದ ಮೇಲೆ ನೀರು ಬರೋಲ್ವೇನೊ" ಎಂದು ಕೇಳಿದರು ಸಂದೇಹದಿಂದ. ನನಗೆ ನಗು ಬಂತು.



ಕ್ಲಿಯರ್‌ಟೋನ್ ಲ್ಯಾಂಪುಗಳು, ಫ್ಲೊರೆಸೆಂಟ್ ಟ್ಯೂಬುಗಳು ಮತ್ತು ಫಿಕ್ಸ್‌ಚರ್‌ಗಳು



ಕ್ಲಿಯರ್‌ಟೋನ್ ಕುಕಿಂಗ್ ರೇಂಜ್



ಕ್ಲಿಯರ್‌ಟೋನ್ ಹಾಟ್ ಪ್ಲೇಟ್



ಕ್ಲಿಯರ್‌ಟೋನ್ ಹಾಟ್ ಕಬರ್ಡ್



ಕ್ಲಿಯರ್‌ಟೋನ್ ವಾಟರ್ ಬಾಯ್ಲರ್



ಕ್ಲಿಯರ್‌ಟೋನ್ ಇಂಪೀರಿಯಲ್ ಟೋಸ್ಟರ್



ಕ್ಲಿಯರ್‌ಟೋನ್ ಇಲೆಕ್ಟ್ರಿಕ್ ಕೆಟ್ಲ್



ಕ್ಲಿಯರ್‌ಟೋನ್ ವಾಟರ್ ಹೀಟರ್



ಕ್ಲಿಯರ್‌ಟೋನ್ ಪ್ಲಾಸ್ಟಿಕ್ ಸಾಮಾನುಗಳು

## ಕ್ಲಿಯರ್‌ಟೋನ್ ತಯಾರಿಕೆ...

### ಅತ್ಯುತ್ತಮ ಕಾಣಿಕೆ

ಕ್ಲಿಯರ್‌ಟೋನ್ ಗೃಹೋಪಯೋಗೀ ಉಪಕರಣಗಳು ಎಂದರೆ ಅತ್ಯಂತ ಉಪಯೋಗಕರವಾದ ಕಾಣಿಕೆಗಳು.

ಈ ಉಪಕರಣಗಳು ವಿಶ್ವಾಸಾರ್ಹವಾಗಿವೆ; ಅವುಗಳ ಬೆಲೆಯೂ ಕಡಿಮೆ. ಅವು ನಿಮ್ಮ ಹತ್ತಿರದ ಕ್ಲಿಯರ್‌ಟೋನ್ ಮತ್ತು ನ್ಯಾಷನಲ್-ಎಕ್ಕೋ ವ್ಯಾಪಾರಿಗಳಲ್ಲಿ ಸಿಗುತ್ತವೆ.

**...ಎಂದೆಂದೂ ನೆನಪಿನಲ್ಲಿ ಉಳಿಯುವ ಅನುಪಮ ಕಾಣಿಕೆ**



ಕ್ಲಿಯರ್‌ಟೋನ್ ಮಡಿಚುವ ಕುರ್ಚಿ ಮತ್ತು ಮೇಜು



ಕ್ಲಿಯರ್‌ಟೋನ್ ಇಂಪೀರಿಯಲ್ ಇಸ್ತ್ರಿಪೆಟ್ಟಿಗೆ





ಕ್ಲಿಯರ್‌ಟೋನ್ ಥರ್ಮಲ್ ಜಾರ್



ಕ್ಲಿಯರ್‌ಟೋನ್ ಇಲೆಕ್ಟ್ರಿಕ್ ಗಡಿಯಾರ



ಕ್ಲಿಯರ್‌ಟೋನ್...
ಸುಖಮಯ ಜೀವನಕ್ಕೆ
ಸೊಗಸಾದ ಸಾಧನಗಳು



ಕ್ಲಿಯರ್‌ಟೋನ್ ಟೇಬಲ್ ಮತ್ತು ಸೀಲಿಂಗ್ ಫ್ಯಾನ್‌ಗಳು



ಜನರಲ್ ರೇಡಿಯೋ ಅಂಡ್ ಅಪ್ಲಯನ್ಸಸ್ ಲಿಮಿಟೆಡ್

ಬೊಂಬಾಯಿ • ಕಲ್ಕತ್ತ • ಪಾಟ್ನ • ಮದರಾಸು • ಬೆಂಗಳೂರು • ದೆಹಲಿ • ಸಿಕಂದರಾಬಾದು

ನಿಮ್ಮ ಮನೆಯವರಿಗೆ
ನಿಮ್ಮ ಪ್ರೀತಿಯ
ಪ್ರತೀಕವಾದ ವಿಶಿಷ್ಟ ಕಾಣಿಕೆ...

# ನ್ಯಾಷನಲ್ ಎಕ್ಕೋ

ರೇಡಿಯೋ

ಉತ್ಸವ-ಸಮಾರಂಭಗಳ ಈ ಸುದಿನಗಳಲ್ಲಿ ನಿಮ್ಮ ಅತ್ಯಂತ ಮಹತ್ವಪೂರ್ಣ ಕಾಣಿಕೆಯೆಂದರೆ ನೀವು ನಿಮ್ಮ ಮನೆಯವರಿಗೆ ಕೊಡುವ ನ್ಯಾಷನಲ್-ಎಕ್ಕೋ ರೇಡಿಯೋ! ಅದು ಅಪರಿಮಿತ ಶ್ರವಣಾನಂದವನ್ನು ನೀಡುತ್ತದೆ... ವರ್ಷಗಟ್ಟಳೆ ಬಾಳಿಕೆ ಬರುತ್ತದೆ.

ಮೇನ್ಸ್ ಸೆಟ್ಟುಗಳು ಮತ್ತು ಬ್ಯಾಟರಿ ಸೆಟ್ಟುಗಳು ಸಹಿತ ನ್ಯಾಷನಲ್-ಎಕ್ಕೋ ರೇಡಿಯೋಗಳಲ್ಲಿ 9 ಆಕರ್ಷಕ ಮಾಡೆಲುಗಳಿವೆ. ಬೆಲೆ ರೂ. 125 ರಿಂದ ಪ್ರಾರಂಭವಾಗುತ್ತದೆ.



**ಮಾಡೆಲ್ ಯು-764:**
5 ವಾಲ್ವ್‌ಗಳು, 3 ಬ್ಯಾಂಡ್‌ಗಳು. ಬಂಗಾರದ ಬಣ್ಣದ ಕೆತ್ತನೆ ಕೆಲಸ ಇರುವ ಸುಂದರ ಪ್ಲಾಸ್ಟಿಕ್ ಕ್ಯಾಬಿನೆಟ್. ರೂ. 280.75.
ಮಾಡೆಲ್ ಬಿ-764: ಡ್ರೈ ಬ್ಯಾಟರಿ ಸೆಟ್. 4 ವಾಲ್ವ್‌ಗಳು, 3 ಬ್ಯಾಂಡ್‌ಗಳು. ರೂ. 280.75



**ಮಾಡೆಲ್ ಯು-756:**
3 'ನೋವಲ್' ವಾಲ್ವ್‌ಗಳು, 2 ಬ್ಯಾಂಡ್‌ಗಳು. ಬೆಲೆ ಕಡಿಮೆಯಾದರೂ ಬೆಲೆಬಾಳುವ ಸೆಟ್‌ಗಳ ವೈಶಿಷ್ಟ್ಯಗಳು! 'ಮರೂನ್' ಬಣ್ಣದ ಪ್ಲಾಸ್ಟಿಕ್ ಕ್ಯಾಬಿನೆಟ್. ರೂ. 125.00



**ಮಾಡೆಲ್ ಬಿ-751:**
ಒಟ್ಟು 9 ವಾಲ್ವ್‌ಗಳ ಕೆಲಸ ಮಾಡುವ 3 ಟ್ರಾನ್ಸಿಸ್ಟರ್‌ಗಳು ಮತ್ತು 4 ವಾಲ್ವ್‌ಗಳು, 4 ಬ್ಯಾಂಡ್‌ಗಳು, 'ಮೋಲ್ಡೆಡ್' ಕ್ಯಾಬಿನೆಟ್. ರೂ. 430.00





**ಮಾಡೆಲ್ ಎ-744:**
4 ಬ್ಯಾಂಡ್‌ಗಳು, 9 ವಾಲ್ವ್‌ಗಳ ಕೆಲಸ ಮಾಡುವ 6 'ನೋವಲ್' ವಾಲ್ವ್‌ಗಳು, 'ಮೋಲ್ಡೆಡ್' ಕ್ಯಾಬಿನೆಟ್. ರೂ. 430.00



**ಮಾಡೆಲ್ ಬಿ-755:**
5 'ನೋವಲ್' ವಾಲ್ವ್‌ಗಳು, 3 ಬ್ಯಾಂಡ್‌ಗಳು, 'ವಿನಿಯರ್' ಕ್ಯಾಬಿನೆಟ್, ಡ್ರೈ ಬ್ಯಾಟರಿ ಸೆಟ್. ರೂ. 351.00



**ಮಾಡೆಲ್ 730:**
9 ವಾಲ್ವ್‌ಗಳ ಕೆಲಸ ಮಾಡುವ 6 'ನೋವಲ್' ವಾಲ್ವ್‌ಗಳು, 8 ಬ್ಯಾಂಡ್‌ಗಳು, ಮರದ ಕ್ಯಾಬಿನೆಟ್. ರೂ. 574.25



**ಮಾಡೆಲ್ ಯು-755:**
6 'ನೋವಲ್' ವಾಲ್ವ್‌ಗಳು, 3 ಬ್ಯಾಂಪ್‌ಗಳು, 'ವಿನಿಯರ್' ಕ್ಯಾಬಿನೆಟ್. ರೂ. 351.00

ಎಲ್ಲಾ ಬೆಲೆಗಳಲ್ಲಿ ಎಕ್ಸೈಸ್ ಡ್ಯೂಟಿ ಸೇರಿದೆ; ತೆರಿಗೆಗಳು ಪ್ರತ್ಯೇಕ

ನ್ಯಾಷನಲ್-ಎಕ್ಕೋ ರೇಡಿಯೋಗಳು ಉತ್ತಮತರ—ಅವು 'ಮಾನ್ಸೂನೈಸ್' ಮಾಡಲ್ಪಡುತ್ತವೆ

JWT-GRA 2866



ಜನರಲ್ ರೇಡಿಯೋ ಅಂಡ್ ಅಪ್ಲಯನ್ಸಸ್ ಲಿಮಿಟೆಡ್
ಬೊಂಬಾಯಿ . ಕಲ್ಕತ್ತ . ಪಾಟ್ನ . ಮದರಾಸು . ಬೆಂಗಳೂರು . ದೆಹಲಿ . ಸಿಕಂದರಾಬಾದು

ಪಾಪ! ನಮ್ಮಜ್ಜಿಗೆ ನೀರಿನ ಸಹಜ ಸ್ವಭಾವಗಳು ಗೊತ್ತಿಲ್ಲಾಂತ ಕಾಣುತ್ತೆ. "ಇಲ್ಲಜ್ಜಿ, ದೇವಿ ಭವಾನಿಗೆ ಹೆದರಿ ನೀರು ಆಕೆ ಪಾದಕ್ಕೂ ಬರೋಲ್ಲ" ಎಂದೆ.

* * *

ಹಾಗೂ ಹೀಗೂ ಮಾಡಿ ಹದಿನಾಲ್ಕನೆಯ ತಾರೀಖು ಹಲ್ಲು ಕಿರಿಯುತ್ತ ಬಂದೇ ಬಿಟ್ಟಿತು. ಬೆಳಗಿನ ಜಾವದಲ್ಲೇ ಎದ್ದು ಎಲ್ಲರೂ ನಮ್ಮ ಕೆಲಸಗಳಲ್ಲಿ ಮುಳುಗಿಬಿಟ್ಟೆವು. ಅಜ್ಜಿ ದೇವರ ಪೆಟ್ಟಿಗೆ, ಹೂಬತ್ತಿ ಡಬ್ಬಿ, ಪಾತ್ರೆ, ಸಾಮಾನು ಅಣಿಮಾಡತೊಡಗಿದ್ದರು. ನಮ್ಮ ತಾಯಿ, ಅತ್ತಿಗೆ ತಿಂಡಿ ಮಾಡುವುದರಲ್ಲಿದ್ದರು. ಶಾಂತೂ ನಮ್ಮ ಜೊತೆಗೆ ಬಂದಳು. ಫ್ಯಾನ್ಸೀ ಸಾಮಾನು, ಹಾಸಿಗೆ ಬಟ್ಟೆ ಕಟ್ಟುವುದು ನಮ್ಮ ಮೂವರ ಕೆಲಸವಾಯಿತು

ನನಗೇನೊ ಅನುಮಾನ ಬಂದಿತು. ಅದನ್ನು ಪರಿಹರಿಸಿಕೊಳ್ಳಲು ಸೂಟ್‌ಕೇಸ್‌ನಲ್ಲಿ ರೇಜರ್ ಸೆಟ್ ಇಡುತ್ತಿದ್ದ ಅಣ್ಣನ ಬಳಿಗೆ ಬಂದು ಆ ಸಂದೇಹವನ್ನು ಹೊರಹಾಕಿದೆ."ಅಣ್ಣ, ಹಿರಿಯರ ಲೆಕ್ಕದ ಪ್ರಕಾರ ನೋಡಿದರೆ ಕಲಿಯುಗ ಮುಗಿಯೋಕೆ ಇನ್ನೂ ಟೈಮಿದೆ ಅಲ್ಲ? ಈಗಲೇ ಜಲಪ್ರಳಯ ಯಾಕೆ?" ನಮ್ಮಣ್ಣಗೆ ಗೊತ್ತಾಗಿಲ್ಲಾಂತ ಕಾಣುತ್ತೆ. ಆತ ರೇಗಿಬಿಟ್ಟ. ಇಷ್ಟರಲ್ಲೇ ವ್ಯಾನಿಟೀ ಬ್ಯಾಗ್‌ನಲ್ಲಿ ರೋಸ್ ಪೌಡರ್ ರಿಬ್ಬನುಗಳು, ಇತ್ಯಾದಿಗಳನ್ನು ಹಾಕುತ್ತಿದ್ದ ಶಾಂತಾ ಓಡಿಬಂದು, "ಅಣ್ಣಾ, ಕ್ಯಾಮರಾ ಹಾಕಿದೀಯಾ?" ಎಂದಳು. ನನಗೆ ನಗು ತಡೆಯಲಾಗಲಿಲ್ಲ. ಬಿಗಿಯುತಿದ್ದ ಹೋಲ್ಡಾಲ್ ಸಡಿಲವಾಯಿತು. "ಹುಚ್ಚಿ, ನಿಂಗೆ ಈಗ ಕ್ಯಾಮರಾ ಯಾಕೆ?" ಅವಳು ಮುಖ ಸೊಟ್ಟ ಮಾಡಿ ಅಣಕಿಸಿ "ನಂಗಲ್ಲ ಹುಚ್ಚು ನಿಂಗೆ ಕೇಳು, ಹೇಳ್ತೀನಿ" ಎಂದು ಶುರುವಿಟ್ಟಳು. "ಕಲಿಯುಗಾಂತದಲ್ಲಿ ಇಡೀ ಜಗವು ಜಲಮಯವಾಗುವುದು. ಆ ಜಲಮಧ್ಯದಲ್ಲಿ ಕೃಪಾರಸವಾರಿಧಿಯಾದ ಪರಮಾತ್ಮನು ವಟಪತ್ರಶಾಯಿಯಾಗಿ ಅವತರಿಸುವನು. ಆ ತರುವಾಯ ಶೇಷಶಯನನ ನಾಭಿಯಿಂದ ಕಮಲಾಸನನು ಉದ್ಭವಿಸುವನು. ಆ ಮೇಲೆ ಸೃಷ್ಟಿ ಆರಂಭವಾಗುವುದು. ಅಂಥಾ ಸುಂದರವಾದ ದೃಶ್ಯಗಳ ಫೋಟೋಗಳನ್ನು ನಮ್ಮ ಆಲ್ಬಂನಲ್ಲಿ ಹಾಕಿಕೊಳ್ದೆ ಇದ್ರೆ ಆಲ್ಬಂ ಇದ್ದೇನು ಪ್ರಯೋಜನ?" ಎಂದಳು. ನಿಜವೇ. ನನಗೀ ಆಲೋಚನೆ ಹೊಳೆಯಲೆ ಇಲ್ಲ. ತಕ್ಷಣ ಕ್ಯಾಮೆರಾ ತೆಗೆದು ಪೆಟ್ಟಿಗೆಯಲ್ಲಿಟ್ಟೆ.

ಸಾಯಂಕಾಲಕ್ಕೆ ಎಲ್ಲಾ ಮುಗಿಯಿತು. ಇನ್ನೇನು ಹೊರಡಬೇಕು ಎನ್ನುವಷ್ಟರಲ್ಲಿ, ನಮ್ಮ ರಾಮಾಚಾರ್ಯರು ಬಂದು "ಎಲ್ಲಿಗೂ ಹೋಗ್ಬೇಡಿ. ಸಮಯ ಚೆನ್ನಾಗಿಲ್ಲ. ಪ್ರಯಾಣಕ್ಕೆ ಒಳ್ಳೇದಲ್ಲ" ಅಂದುಬಿಟ್ಟರು. ಎಲ್ಲರೂ ಹತಾಶರಾದೆವು. ನಮ್ಮ ಮನೆಯಲ್ಲಿ ಎಲ್ಲರಿಗೂ ರಾಮಾಚಾರ್ಯರ ಮಾತೆಂದರೆ ವೇದವಾಕ್ಯ.

ಸರಿ. ಎಲ್ಲಿಯವರಲ್ಲಿ ಉಸ್ಸೆಂದು ಕುಳಿತುಬಿಟ್ಟೆವು. ನಮ್ಮಜ್ಜಿ ಮತ್ತೆ ಶುರುವಿಟ್ಟರು. "ಹೇಗೂ ಹೋಗೋದು ತಪ್ಪಿದ್ದಲ್ಲ. ಭಜನೇ ನಾದ್ರೂ ಮಾಡ್ರೊ, ಪುಣ್ಯ ಬರತ್ತೆ" ಎಂದು ನುಡಿದರು. ಮುದುಕೀ ಮಾತು ಕೇಳದೆ ಇದ್ದರೆ ಆಮೇಲೆ ಎಲ್ಲೂ ದಾರಿ ತಪ್ಪದೆ ಸೀದಾ ನರಕಕ್ಕೇ ಹೋಗಬೇಕಾಗುವುದೆಂದು ಎಲ್ಲರೂ ಭಜನೆಗೆ ಕುಳಿತೆವು. ಒಂದು ಕಡೆಗೆ ನಮ್ಮ ತಂದೆ ತಾಯಿ, ಮತ್ತೊಂದು ಕಡೆಗೆ ಅಣ್ಣ ಅತ್ತಿಗೆ, ಮಧ್ಯದಲ್ಲಿ ಅಜ್ಜಿ. ಆ ಕಡೆ ಕೊನೆಗೆ ಶಾಂತೂ, ಈ ಕಡೆ ಕೊನೆಗೆ ನಾನೂ ಕುಳಿತೆವು. ಕೊನೆಗೂ ಆ ಹುಡುಗಿಯನ್ನು ನೋಡಲಾಗಲಿಲ್ಲವಲಾ ಎಂದು ಹೊಟ್ಟೆಯಲ್ಲಿ ಕಸಿವಿಸಿಯಾಯಿತು.

ಇಷ್ಟರಲ್ಲೇ ನಮ್ಮ ಪಕ್ಕದ ಮನೆಯ ಶ್ಯಾಮರಾಯರು ಬಂದು, "ನಿಮಗೆಲ್ಲಾ ಹುಚ್ಚೊ ಏನು? ಪ್ರಳಯಾನೂ ಇಲ್ಲ ಏನೂ ಇಲ್ಲ ಪೇಪರಿನಲ್ಲಿ ಬಂದಿದೆ ನೋಡಿ" ಎಂದು ಬಳಿತಾಗಿ ಛೀ ಹಾಕಿದರು. ಇದು ಕೇಳಿದ ತಕ್ಷಣ ಅಜ್ಜಿ ದೇವರ ಮನೆಗೆ ಹೋಗಿ ಮತ್ತೊಮ್ಮೆ ದೀಪ ಹಚ್ಚಿಟ್ಟು ಬಂದು, "ಚಂದ್ರಣ್ಣ, ಹೇಗೋ ದೇವರ ದಯೆಯಿಂದ ಇಂಥಾ ಗಂಡಾಂತರದಿಂದ ಪಾರಾಗಿದ್ದೀವಿ. ನಾಳೇನೇ ತಿರುಪತಿಗೆ ಹೋಗೊ ಏರ್ಪಾಟು ಮಾಡು" ಎಂದರು ನಮ್ಮ ತಂದೆಯನ್ನು ನೋಡಿ. ಮರುದಿನವೇ, ಚಾಮುಂಡಿ ಬೆಟ್ಟಕ್ಕೆಂದು ತಯಾರು ಮಾಡಿದ್ದ ಸಾಮಾನುಗಳೆಲ್ಲಾ ತಿರುಪತಿಗೆ ತಿರುಗಿಸಲ್ಪಟ್ಟವು. *

ಪುಸ್ತಕ ವಿಭಾಗ

# ಸುರಪುರದ ದುರಂತ

ಶ್ರೀನಿವಾಸ ಹಾವನೂರ್



# ಸುರಪುರದ ದುರಂತ

೧೮೫೭ ರ ಮಧ್ಯದಲ್ಲಿ ಉತ್ತರ ಹಿಂದುಸ್ತಾನದಲ್ಲಿ ಬ್ರಿಟಿಶರ ಆಳ್ವಿಕೆಯ ವಿರುದ್ಧ ಬಂಡೆದ್ದಿತ್ತಷ್ಟೇ. ದಕ್ಷಿಣ ಭಾಗವು ಮಾತ್ರ ಆ ವರ್ಷ ಬೆಚ್ಚಗೆ ನೋಡುತ್ತ ಕುಳಿತಿತ್ತು. ೧೮೫೮ ರಲ್ಲಿ ಅಲ್ಲಿ ಇಲ್ಲಿ ಕ್ರಾಂತಿಯ ಕಿಡಿಗಳು ಹಾರಿದವು. ಆದರೆ ದೊಡ್ಡ ಪ್ರಮಾಣದಲ್ಲಿ ಮತ್ತು ಎದ್ದು ಕಾಣುವಂತೆ ದಂಗೆಯಾದುದು ಕರ್ನಾಟಕದಲ್ಲಿ ಮಾತ್ರ. ಸುರಪುರ, ನರಗುಂದ ಮತ್ತು ಮುಂಡರಗಿಗಳು ಯುದ್ಧರಂಗಗಳಾಗಿ ಪರಿಣಮಿಸಿ, ಅವುಗಳ ಅಧಿಪತಿಗಳು ತಮ್ಮ ಅರಸೊತ್ತಿಗೆಗೆ ಎರವಾದರು.

ನರಗುಂದ, ಮುಂಡರಗಿ ಬಂಡಾಯಗಳ ಪರಿಚಯವಿದ್ದರೂ ನಮಗೆ ಸುರಪುರ ದಂಗೆಯ ಪರಿಚಯ ಅಷ್ಟಾಗಿ ಇಲ್ಲ. ಇಡೀ ದಕ್ಷಿಣ ಭಾರತದಲ್ಲಿಯೇ ರಾಜನೊಬ್ಬನು ಸಸೈನ್ಯನಾಗಿ ಮೊದಲಿಗೆ ದಂಗೆಯೆದ್ದವನೆಂದರೆ ಸುರಪುರದ ವೆಂಕಟಪ್ಪ ನಾಯಕನೇ. ಅವನು ಮೊದಲು ಸಿಡಿದೆದ್ದ ಮೇಲೆಯೇ ಇತರ ದಕ್ಷಿಣ ಮಹಾರಾಷ್ಟ್ರದ ಪಾಳೆಯಗಾರರು ಬಂಡೇಳಬೇಕೆಂದು ನಿರ್ಧರಿಸಿದರು. ಬ್ರಿಟಿಶರಿಗೆ ಚೆನ್ನಾದ ಪೆಟ್ಟು ಕೊಡಬೇಕಾದರೆ ಸುರಪುರದ ಬೇಡರ ಪಡೆಯೇ ಸಮರ್ಥವೆಂದು ಅವರೆಲ್ಲರ ಭಾವನೆಯಾಗಿತ್ತು. ದುರ್ದೈವದಿಂದ ಇತರ ಎಲ್ಲ ಕಡೆಗಳಂತೆಯೇ ಸುರಪುರದ ಯುದ್ಧ ಅವಸ್ತೆಯಾಯಿತು. ಆದರೆ ಇದರ ಹಿಂದೆ ರಾಜಾ ವೆಂಕಟಪ್ಪ ನಾಯಕನ ವೈಯಕ್ತಿಕ ದುರಂತವೂ ಅಡಗಿದೆ. ಕ್ರಾಂತಿಯ ಕಥನದ ಜೊತೆಗೆ ವೆಂಕಟಪ್ಪ ನಾಯಕನ ಆವಿದ್ಧ ಕಥನವೂ ಇಲ್ಲಿಯ ನಿರೂಪಣೆಯಲ್ಲಿ ಮುಖ್ಯವಾದುದಾಗಿದೆ.

ಸುರಪುರದ ಬೇಡರ ಪಡೆಯು ವಿಜಯನಗರದ ಕಾಲದಿಂದಲೂ ಪ್ರಸಿದ್ಧವಾದುದು. ಅಲ್ಲಿಯ ಬೇಡರು ಮೂಲತಃ ಮೈಸೂರಿನವರು. ವಿಜಯನಗರದ ರಾಜರ ಸೈನ್ಯದಲ್ಲಿ ಸೇರಲು ಬಂದವರು. ವಿಜಾಪುರ ರಾಜ್ಯಕ್ಕೆ ಹೊಂದಿದ್ದ ತಮ್ಮ ಗಡಿಯನ್ನು ಕಾಯಲು, ವಿಜಯನಗರದ ರಾಜರು ಇವರನ್ನು ಅವಲಂಬಿಸಿದ್ದರು. ಮುಂದೆ ವಿಜಯನಗರದ ಪತನವಾದ ನಂತರ ಬೇಡರು ವಿಜಾಪುರದವರನ್ನು ಹೊಂದಿಕೊಂಡರು. ಬೇಡರನ್ನು ಬಗ್ಗುಬಡಿಯುವುದು ಔರಂಗಜೇಬನಿಗೂ ಆಗಲಿಲ್ಲ. ಕೊನೆಗೆ ಅವನು ಸುರಪುರದ ಬೇಡರ ರಾಜರೊಡನೆ ಮಿತ್ರತ್ವವನ್ನು ಬೆಳೆಸಿಕೊಂಡು, ಅವರ ಸ್ವಾಮಿತ್ವವನ್ನು ಮಾನ್ಯ ಮಾಡಲೇಬೇಕಾಯಿತು. ಆ ಕಾಲದಲ್ಲಿದ್ದ ಗಡ್ಡದ ಬಿದನಾಯಕನು ಅತ್ಯಂತ ಪ್ರಸಿದ್ಧನಾಗಿದ್ದನು. ಅವನು ೧೭೦೭ ರಲ್ಲಿ ಸುರಪುರದ ಗುಡ್ಡಗಳ ಪ್ರದೇಶದಲ್ಲಿ ಭದ್ರವಾಗಿ ನೆಲಸಿದನು.

ಈ ನಾಯಕನ ಸಾಹಸದ ಒಂದು ಕಥೆ ಇದೆ. ವಿಜಾಪುರದಲ್ಲಿ ರಾಜಾನೆಯೊಂದು ಮದವೇರಿ, ಮನುಷ್ಯರನ್ನು ತುಳಿಯುತ್ತ, ಅಂಗಡಿ-ಮಳಿಗೆಗಳನ್ನು ಕೆಡಹುತ್ತಾ ಬೀದಿಗಳಲ್ಲಿ ಸಂಚರಿಸುತ್ತಿದ್ದಾಗ, ಅಲ್ಲಿ ಬಂದಿದ್ದ ಬಿದನಾಯಕನು ಅದನ್ನು ಕಂಡು ಎದುರಿಸಿ ಮದ್ದಾನೆಯ ಮೇಲೇರಿ ಕುಳಿತು, ತನ್ನ ಕತ್ತಿಯ ಹಿಡಿಯಿಂದ ಒಂದೇ ಸವನೆ ಏಟು ಹಾಕತೊಡಗಿದಾಗ, ಆನೆಯ ಮದವೆಲ್ಲ ಇಳಿದು ಹಾದಿಗೆ ಬಂದಿತಂತೆ.

ಸುರಪುರದ ರಾಜರು ಸಾಹಸಿಗಳೂ ಯುದ್ಧವೀರರೂ ಅಹುದು; ರಾಜಕಾರಣಿಗಳಲ್ಲ. ಒಂದು ಭಾಗದಿಂದ ಪೇಶ್ವೆಯವರೂ ಇನ್ನೊಂಬೆಡೆ ನಿಜಾಮರೂ ಇವರ ಮೇಲೆ ದಾಳಿಮಾಡ

ತೊಡಗಿದರು. ಹೀಗಾಗಿ ಒಂದು ಕಾಲಕ್ಕೆ ಕೃಷ್ಣಾ, ಭೀಮಾ ಮತ್ತು ಡೋಣಿ ನದಿ ಇವುಗಳ ವಿಸ್ತೀರ್ಣ ಬಯಲನ್ನೆಲ್ಲ ಹೊಂದಿದ್ದ ಸುರಪುರ ರಾಜ್ಯವು ಕರಗತೊಡಗಿತು. ೧೭೮೪ ರಲ್ಲಿ ನಿಜಾಮ, ಪೇಶ್ವೆಗಳು ಒಪ್ಪಂದ ಮಾಡಿಕೊಂಡು ಸುರಪುರವನ್ನು ಸದೆಬಡಿಯಲು ನಿಂತಾಗ, ಆಗಿನ ಸುರಪುರದ ರಾಜನು ಪೇಶ್ವೆಯವರಿಗೆ ಕೆಲ ಭೂಭಾಗವನ್ನು ಬಿಟ್ಟುಕೊಡಬೇಕಾಗಿಯೂ ನಿಜಾಮನಿಗೆ ವರ್ಷಕ್ಕೆ ೫೦,೦೦೦ ರೂಪಾಯಿಗಳ ಕಪ್ಪ ಕಾಣಿಕೆಯನ್ನು ಕೊಡಬೇಕಾಗಿಯೂ ಒಪ್ಪಂದವಾಯಿತು. ಆಗಿನಿಂದ ಸುರಪುರದ ಆಂತರಿಕ ಸ್ಥಿತಿ ಕೆಟ್ಟಿತು.

ನಿಜಾಮನ ಹಣವನ್ನು ಕೊಡಲಾಗದೇ, ಸುರಪುರದ ರಾಜನಾದ ಕೃಷ್ಟಪ್ಪ ನಾಯಕನು ಗೋಸಾಯಿಗಳ ಹತ್ತಿರ ಸಾಲ ಮಾಡಿ ಒದ್ದಾಡುತ್ತಿರುವಾಗ, ಇಂಗ್ಲೀಷರು ನಡುವೆ ಕೈಹಾಕಿದರು. ನಿಜಾಮನಿಗೆ ಜಾಮೀನು ಆಗಿ, ಅವನಿಗೆ ಸುರಪುರದಿಂದ ಹಣ ಮುಟ್ಟಿಸುವ ಹೊಣೆ ಹೊತ್ತರು. ಹಣ ಮುಟ್ಟಿಸುವ ಜವಾಬ್ದಾರಿಯನ್ನು ಹೊತ್ತಮೇಲೆ ರಾಜ್ಯದಾಡಳಿತೆಯಲ್ಲಿ ಕೈಹಾಕದೇ ಇರಲಿಕ್ಕಾಗುತ್ತದೆಯೇ ? ಈ ಚಂಚು ಪ್ರವೇಶ ಅಷ್ಟೇ ಸಾಕಾಯಿತು. ಇದರ ಪ್ರಾರಂಭವಾದಾಗ ೧೮೪೧ ರಲ್ಲಿ ರಾಜಾ ಕೃಷ್ಟಪ್ಪನಾಯಕನು ತೀರಿಕೊಂಡನು.

ಗತಿಸಿದ ರಾಜನಿಗೆ ಮೂವರು ಹೆಂಡಂದಿರು, ೧೫ ಜನ ಹೆಣ್ಣು ಮಕ್ಕಳು; ಕೊನೆಯವನೊಬ್ಬನೇ ಗಂಡಸು ಮಗ. ಏಳು ವರ್ಷದ ವೆಂಕಟನು ಅಲ್ಪವಯಿ. ಹಾಗಿದ್ದರೆ ರಾಜ್ಯಭಾರವನ್ನು ಅವನ ಪರವಾಗಿ ಯಾರು ನಡೆಸಬೇಕು ? ಕಂಪನಿ ಸರಕಾರವು ಕುಮಾರನ ಕಕ್ಕನಾದ ಬಿದನಾಯಕನೇ ನಡೆಯಿಸಬೇಕೆಂದು ಆಜ್ಞೆಯನ್ನು ಕಳುಹಿತು. ಆದರೆ: ರಾಣಿ ಈಶ್ವರಮ್ಮ ಇದಕ್ಕೊಪ್ಪಲಿಲ್ಲ. ಸುರುವಾಯಿತು ಒಳಜಗಳ. ಕೊನೆಗೆ ಕಂಪನಿ ಸರಕಾರವು ಮೆಡೋಸ್ ಟೇಲರನನ್ನು ಅಲ್ಲಿಗೆ ಕಳಿಸಿಕೊಟ್ಟಿತು. ಅನವಶ್ಯಕವಾಗಿ ಹೊರಗಿನವರು ಅಧಿಕಾರಕ್ಕೆ ಬರುವುದಂತೂ ರಾಣಿಗೆ ಎಳ್ಳಷ್ಟೂ ಸೇರಲಿಲ್ಲ. ಒಳನಾಡಿನಲ್ಲಿಯ ಗುಡ್ಡಗಳ ಮೇಲಿನ ಬೇಡರ ಪಡೆಗಳು ಸುರಪುರಕ್ಕೆ ಬಂದು, ಬಿಚ್ಚುಗತ್ತಿಯನ್ನು ಹಿಡಿದುಕೊಂಡು ಓಡಾಡತೊಡಗಿದವು.

ಮೆಡೋಸ್ ಟೇಲರ್ ರಾಜಕಾರಣಕ್ಕೆ ಹೊಸಬನಾದರೂ ಬುದ್ಧಿವಂತನಿದ್ದ. ಸೈನ್ಯಬಲವು ನೆರವಿಗಿದ್ದರೂ ಅದರ ಉಸಾಬರಿಗೆ ಹೋಗದೆ, ಮೊದಲು ರಾಜಕುಮಾರನೇ ಸುರಪುರಕ್ಕೆ ನಿಜವಾದ ಒಡೆಯ ಎಂಬ ಮಾತನ್ನು ಎಲ್ಲರಿಗೂ ಬಿಂಬಿಸಿ, ಅವನ ಸಿಂಹಾಸನಾರೋಹಣದ ವ್ಯವಸ್ಥೆಯನ್ನು ಮಾಡಿಸಿದ. ಗತಿಸಿದ ಕೃಷ್ಟಪ್ಪನಾಯಕನಿಗೆ ಗಂಡುಮಕ್ಕಳಾಗದೇ ಇದ್ದಾಗ, ಅವನ ತಮ್ಮ ಬಿದನಾಯಕನ ಮಗನನ್ನು ದತ್ತಕ ತೆಗೆದುಕೊಳ್ಳಬೇಕೆಂದು ನಿರ್ಧರವಾಗಿಬಿಟ್ಟಿದ್ದಿತು. ಅಷ್ಟರಲ್ಲಿ ಈ ಹುಡುಗನು ಜನಿಸಿದ್ದನು, ಆಗಿನಿಂದಲೂ ತನ್ನ ಮೈದುನನು ರಾಜ್ಯವನ್ನು ನುಂಗುವ ಹವಣಿಕೆಯಲ್ಲಿರುವನೆಂದು ರಾಣಿ ಈಶ್ವರಮ್ಮನಿಗೆ ಭಾವನೆಯಾಗಿಬಿಟ್ಟಿತ್ತು. ಅಂಥದರಲ್ಲಿ ಈ ಸಿಂಹಾಸನಾರೋಹಣದ ಏರ್ಪಾಡು ರಾಣಿಗೆ ಸಂತೋಷವನ್ನುಂಟುಮಾಡಿತು. ಬಿದನಾಯಕನು ಮನಸ್ಸಿಲ್ಲದೆಯೆ ಇದರಲ್ಲಿ ಭಾಗವಹಿಸಿದನಾದರೂ ಅವನಿಗೆ ಕಂಪನಿಯವರಿಂದ ಆಜ್ಞೆಯಾಗಿ ಬಂದಿದ್ದ ದಿವಾಣ ಪದವಿಯ ಅಧಿಕಾರ ಸಿಕ್ಕಿದ್ದಿತು. ಹೀಗಾಗಿ ಅವನ ಕಡೆಯವರೂ ಹೆಚ್ಚು ಜಗಳ ಕಾಯುವಂತಿರಲಿಲ್ಲ. ಇದ್ದುದರಲ್ಲಿಯೇ ಅವನಿಗೆ ಸಮಾಧಾನವೆಂದರೆ, ಸೊಕ್ಕಿನ ರಾಣಿಯ ರಾಜ್ಯಭಾರ ತಪ್ಪಿತಲ್ಲ ಎಂಬುದು! ಆದರೆ ತಮ್ಮಿಬ್ಬರ ಜಗಳದಲ್ಲಿ ಮೂರನೆಯವರಾದ ಬ್ರಿಟಿಶರಿಗೆ ಹೆಚ್ಚು ಅಧಿಕಾರ ಪ್ರಾಪ್ತವಾಯಿತು ಎಂಬುದರ ಅರಿವು ಅವರಿಬ್ಬರಿಗೂ ಬರಲಿಲ್ಲ ಹಿಂದುಸ್ತಾನದ ಆ ಕಾಲದ ಇತರ ರಾಜ್ಯಗಳ ಒಳಜಗಳದ ರೀತಿಗೆ ಸುರಪುರವು ಅಪವಾದವಾಗಿರಬೇಕಾಗಿದ್ದಿಲ್ಲವಷ್ಟೆ.

ಐದು ದಿನಗಳ ವರೆಗೆ ಉತ್ಸವವು ಏರ್ಪಟ್ಟಿ

ದ್ದಿತು. ಹೊಡೆದಾಟಕ್ಕೆಂದು ಬಂದಿದ್ದ ಬೇಡ ನಾಯಕರು, ರಾಜಕುಮಾರ ಹಾಗೂ ಟೇಲರನ ಪಾದಗಳಿಗೆ ತಮ್ಮ ಖಡ್ಗವನ್ನಿಟ್ಟು ವಿಧೇಯತೆಯ ಪ್ರಮಾಣವಚನವನ್ನು ಸ್ವೀಕರಿಸುವಂತಾಯಿತು.

ರಾಜಕುಮಾರನು ಏಳು ವರುಷದ ಚಿಕ್ಕ ಹುಡುಗನಾದರೂ ಉತ್ಸವದ ಕಾಲದಲ್ಲಿ ಗಾಂಭೀರ್ಯದಿಂದ ನಡೆದುಕೊಂಡ ರೀತಿಯು ಟೇಲರನಿಗೆ ಬಹಳ ಮೆಚ್ಚಿಕೆಯಾಯಿತು. ನೋಡುವುದಕ್ಕೂ ಅವನು ಮುದ್ದಾಗಿದ್ದನು. ಅವನ ಮೈದಡಹುತ್ತ ಟೇಲರನು ರಾಣಿಯ ಬಳಿಗೆ ಕರೆದುಕೊಂಡು ಬಂದನು. ಪರದೆಯ ಹಿಂದೆ ಕುಳಿತಿದ್ದ ರಾಣಿಯು ಅವನನ್ನು ಆದರದಿಂದ ಸ್ವಾಗತಿಸಿದಳು. ಅವರಿಬ್ಬರೂ ಮಾತಿನಲ್ಲಿ ಮಗ್ನರಾಗಿದ್ದಾಗ, ಟೇಲರನೊಡನೆ ಸಾಕಷ್ಟು ಸಲಿಗೆಯನ್ನು ಬೆಳೆಸಿಕೊಂಡಿದ್ದ ವೆಂಕಟನು ಟೇಲರನ ತೊಡೆಯ ಮೇಲೇರಿ ಕುಳಿತನು. ಅದನ್ನು ಕಂಡ ರಾಣಿಯು ಮಧ್ಯದಲ್ಲಿಯೇ ಮಾತನ್ನು ಬದಲಿಸಿ, "ನೋಡಿರಿ, ನನ್ನ ಮಗ ನಿಮ್ಮ ಬಳಿ ಅದೆಷ್ಟು ಸಲಿಗೆಯಿಂದ ಸೇರಿದ್ದಾನೆ! ಅವನ ಯೋಗಕ್ಷೇಮವೆಲ್ಲ ಇನ್ನುಮೇಲೆ ನಿಮ್ಮದೇ. ಅವನನ್ನು ನಿಮ್ಮ ಉಡಿಯಲ್ಲಿ ಹಾಕಿದ್ದೇನೆ. ಇಂದು ನೀವು ಅವನನ್ನು ಪಟ್ಟದ ಮೇಲೆ ಕುಳ್ಳಿರಿಸಿದ್ದೀರಿ. ಅವನ ಸ್ಥಾನ ಅಲ್ಲಿ ಭದ್ರವಾಗಿರುವಂತೆ ನೀವೇ ನೋಡಿಕೊಳ್ಳಬೇಕು."

ಅಲ್ಲಿಂದ ಸುಮಾರು ಹತ್ತು ವರುಷಗಳ ಕಾಲ ಟೇಲರನು ಸುರಪುರದ ರಾಜ್ಯಕಾರಭಾರವನ್ನು ನೋಡುತ್ತಲಿದ್ದನು. ಬಿದನಾಯಕನು ದಿವಾಣನಾಗಿದ್ದರೂ, ಆತ ಅಯೋಗ್ಯ, ಜನಬಲವಿಲ್ಲದವ ಎಂಬುದನ್ನು ತಿಳಿದುಕೊಂಡು ಟೇಲರನು ಎಲ್ಲ ಆಡಳಿತ ಸೂತ್ರಗಳನ್ನು ತಾನೇ ವಹಿಸಿದನು. ರಾಜ್ಯದ ಆರ್ಥಿಕ ಸ್ಥಿತಿಯನ್ನು ಸುಧಾರಿಸುವುದು ಮುಖ್ಯವಾಗಿದ್ದಿತು. ಭೂಕಂದಾಯದತ್ತ ಗಮನವನ್ನು ಕೊಟ್ಟು ಸುರಪುರದ ತಿಜೋರಿಯು ರೊಕ್ಕಸ್ಥವಾಗುವಂತೆ ನೋಡಿಕೊಂಡನು. ನಿಜಾಮನ ಹಣವು ಬೆಟ್ಟದಂತೆ ಏರಿ ಕುಳಿತಿದ್ದಿತು. ಅದರ ಲೆಕ್ಕಾಚಾರವನ್ನು ಮಾಡಿ, ಅನವಶ್ಯವಾಗಿ ಏರಿಸಿದ್ದ ಬಾಬುಗಳನ್ನೆಲ್ಲ ವಜಾ ಮಾಡಿಸಿ, ಹಳೆಯ ಬಾಕಿಗಳನ್ನೆಲ್ಲ ತೀರಿಸಿದನು. ರಾಣೀವಾಸದ ಮೇಲೂ ನಿಯಂತ್ರಣವನ್ನಿಟ್ಟನು. ಅವನ ಕಾಲದಲ್ಲಿ ಸುರಪುರದ ಆರ್ಥಿಕ ಸ್ಥಿತಿ ಸುಧಾರಿಸಿದರೂ ತಮ್ಮ ಎಲ್ಲ ಸ್ವಾತಂತ್ರ್ಯವನ್ನು ಕಸಿದುಕೊಂಡಿದ್ದುದು ರಾಣಿಗೆ ಬೇಸರವನ್ನು ತಂದಿತು. ಈ ವಿಷಯದಲ್ಲಿ ಅವಳಿಗೆ ಬೋಧನೆಯನ್ನು ಮಾಡುವ ಚನಬಸಪ್ಪ, ಕಾಶೀಮ ಎಂಬ ಚೇಲರು ಇದ್ದರು. ಹಾಗಾಗಿ ಆಗಾಗ ರಾಣಿ ಹಾಗೂ ಟೇಲರನ ನಡುವೆ ಚಕಮಕಿಗಳಾಗುತ್ತಿದ್ದವು.

ಅವಳಿಗೆ ಟೇಲರನ ಮೇಲೆ ಕೋಪವುಂಟಾಗುವುದಕ್ಕೆ ಆಂತರಿಕ ಕಾರಣವೆಂದರೆ ರಾಜಕುಮಾರನು ಟೇಲರನನ್ನು ಬಹಳವಾಗಿ ಹಚ್ಚಿಕೊಂಡಿದ್ದುದು. ಟೇಲರನನ್ನು ಅವನು 'ಅಪ್ಪಾ' ಎಂದೇ ಸಂಬೋಧಿಸುತ್ತಿದ್ದನು. ಅವನ ಹಾಗೂ ಅರಮನೆಯ ಇತರ ಮಕ್ಕಳ ಆಟಪಾಟಗಳೆಲ್ಲ ಟೇಲರನ ಹುಡುಗರೊಟ್ಟಿಗೆಯೇ ಹೆಚ್ಚಾಗಿ ಇರುತ್ತಿದ್ದವು. ಟೇಲರನಾದರೂ ಅತ್ಯಂತ ನಿರ್ವ್ಯಾಜ ಬುದ್ಧಿಯಿಂದ ಅವನು ಮುಂದೆ ಬರಬೇಕೆಂದು ಯತ್ನಿಸುತ್ತಿದ್ದನು. ತನ್ನ ಡಾಕ್ಟರನನ್ನು ರಾಜನಿಗೆ ಇಂಗ್ಲೀಷ್ ಕಲಿಸಲು ನಿಯಮಿಸಿದ್ದನು. ಇತರ ಭಾಷೆಗಳನ್ನು ಕಲಿಸುವುದಕ್ಕೂ ವ್ಯವಸ್ಥೆಯಾಗಿದ್ದಿತು. ಒಂದು ಸಲ ರಾಜಕುಮಾರನಿಗೆ ಆರೋಗ್ಯ ಕೆಟ್ಟಾಗ ಟೇಲರನ ಮನೆಯಲ್ಲಿಯೇ ಪಾಶ್ಚಾತ್ಯ ರೀತಿಯ ಉಪಚಾರ ನಡೆದಿದ್ದಿತು. ತನ್ನ ಮಗ ಪರದೇಶಿಯಂತೆ ಇನ್ನೊಬ್ಬರ ಮನೆಯಲ್ಲಿ ಮಲಗಿರಬೇಕೇ? ರಾಣಿಯು ಮರುದಿನವೇ ಅವನನ್ನು ಅರಮನೆಗೆ ಕರೆಸಿಕೊಂಡಳು.

ವೆಂಕಟನಾಯಕನು ದೊಡ್ಡವನಾದ ಹಾಗೆಲ್ಲ ತಾಯಿಯ ವಿಷಯಕ್ಕೆ ಅವನ ಆದರವೂ ಕಡಿಮೆಯಾಯಿತು. ಅವಳು ಗುಣಹೀನೆಯಾಗಿದ್ದುದ

ರಿಂದ, ಇತರ ಕೆಲವರೊಡನೆ ಅವಳು ವ್ಯವಹರಿಸುವ ರೀತಿಯು ಅವನಿಗೆ ಸೇರುತ್ತಿರಲಿಲ್ಲ. ಸಾಲದ್ದಕ್ಕೆ ಆಕೆ ಮಗನನ್ನು ಹೀನಾಯವಾಗಿ ಬೈಯುತ್ತಿದ್ದಳು.

ರಾಜಕುಮಾರನು ೧೫ ವರ್ಷದ ಹುಡುಗ. ಆಗ ರಾಣಿ ಈಶ್ವರಮ್ಮನಿಗೆ ದೊಡ್ಡ ಬೇನೆ ಬಂದಿತು. ಹಾಗಾಗಿ ಟೇಲರನಿಗೆ ನಸುಕಿನಲ್ಲಿಯೇ ಹೇಳಿ ಕಳುಹಿದಳು. ಬೆಳತನಕವೂ ಆಕೆ ನೋವಿನಿಂದ ಒದ್ದಾಡಿದುದರಿಂದ, ಟೇಲರನು ಬಂದಾಗ ಅದೇ ಜಂಪು ಹಿಡಿದಿದ್ದಿತು. ಅವಳು ಎಚ್ಚರಾಗುವ ವರೆಗೆ ಕಾಯಬೇಕೆಂದು ಹೊರಗೆ ಕುಳಿತಿದ್ದಾಗ ವೆಂಕಟಪ್ಪ ನಾಯಕನು ದುಃಖಿಸುತ್ತ ಅವನ ಬಳಿಗೆ ಬಂದನು. "ಆಕೆ ಸಾಯುತ್ತಾಳಂತೆ ಅಪ್ಪಾ, ನಿಜವಿರಬಹುದೇ? ನಿನ್ನೆಯೆಲ್ಲ ನನ್ನನ್ನು ಮನಸ್ವೀ ಬೈದಳು. ನನ್ನ ತಂದೆಯ ಮಗ ನಾನಲ್ಲವಂತೆ. ನನಗೆ ಅವಳ ಹತ್ತಿರ ಹೋಗಲೂ ಹೆದರಿಕೆಯಾಗುತ್ತದೆ."

ಟೇಲರನು ಅವನಿಗೆ ಸಮಾಧಾನವನ್ನು ಹೇಳುತ್ತಿದ್ದಾಗ, ರಾಣಿ ಅವನ ದನಿಯನ್ನು ಕೇಳಿ, ಅವನಿಗೆ ಒಳಬರಲು ಹೇಳಿ ಕಳುಹಿದಳು. ಕುಮಾರನನ್ನು ಅವನ ಕೋಣೆಗೆ ಕಳಿಸಿ ಟೇಲರನು ರಾಣಿಯ ಹಾಸಿಗೆಯ ಬಳಿ ಬಂದು ಕುರ್ಚಿಯಲ್ಲಿ ಕುಳಿತುಕೊಂಡನು.

"ಟೇಲರ್ ಸಾಹೇಬರೇ, ನನ್ನದೆಲ್ಲ ಮುಗಿಯಿತಿನ್ನು. ಅದಕ್ಕಾಗಿಯೇ ನಿಮಗೆ ಹೇಳಿ ಕಳುಹಿದೆ. ಬೆಂಕಿ! ಬೆಂಕಿ ಹತ್ತಿದಂತೆ ನನ್ನ ದೇಹದೊಳಗೆಲ್ಲ ಉರಿಯಹತ್ತಿದೆ. ಇನ್ನೇನು ಬದುಕುವುದಿಲ್ಲ. ಸಾಯುವುದಕ್ಕೆ ಮುಂಚೆ ನಿಮಗೆಲ್ಲ ಒಂದು ಸಂಗತಿ ಹೇಳಿ ಸಾಯುತ್ತೇನೆ. ಇಷ್ಟು ದಿನ ನಿಮ್ಮೊಡನೆ ಸಾಕಷ್ಟು ಜಗಳವಾಡಿದ್ದೇನೆ. ಈಗ ಹೇಗೂ ನೀವೇ ಆ ನೀಚನಿಗೆ ತಂದೆಯಂತಾಗಿದ್ದೀರಿ" ಎಂದು ನುಡಿದು, ಸಂಸ್ಕೃತ ಪಾಠಶಾಲೆಯ ಅಧ್ಯಾಪಕರೂ ರಾಜವಾಡೆಯ ಪು-


Estd 1943 Tel:-"Sunandafac"



ಸುಗಂಧ ಸುಮಧುರವಾದ ಸುಗಂಧ ದ್ರವ್ಯಗಳಿಗೆ ನಾಡಿನಾದ್ಯಂತ
ಪ್ರಖ್ಯಾತವಾದ

* ಸುನಂದರಾಜ ಅಗರಬತ್ತಿ
* ಸುನಂದ ರೋಸ್ ಬತ್ತಿ
* ಪೂಜಾರಿಣಿ ಬತ್ತಿ
* ಗುಲಾಬ್-ಕೆ-ಫೂಲ್ ಅಗರಬತ್ತಿ

ಸುನಂದ ಅಂಬರ್ ಬತ್ತಿ, ಅಲ್ಲದೆ ಸುನಂದ ಡೀಲಕ್ಸ ಪರ್‌ಫ್ಯೂಮ್ಡ ಬ್ಯಾಗ್,
ಮತ್ತು ಪರಿಮಳಯುಕ್ತವಾದ ದ್ರವ್ಯಗಳನ್ನೇ ಯಾವಾಗಲೂ ಉಪಯೋಗಿಸಿರಿ.

ತಯಾರಕರು:— ಕೆ. ರಾಮಕೃಷ್ಣಪ್ಪ

ಮಾಲೀಕರು:— ಸುನಂದ ಅಗರಬತ್ತಿ ಫ್ಯಾಕ್ಟರಿ
ಸಯ್ಯಾಜಿರಾವ ರಸ್ತೆ-ಬಿ, ಮೈಸೂರು.

ರೋಹಿತರೂ ಆಗಿದ್ದ ಶಾಸ್ತ್ರಿಗಳಿಗೆ ಕರೆ ಕಳುಹಿದಳು. ಶಾಸ್ತ್ರಿಗಳು ಬಂದೊಡನೆಯೇ, ತನ್ನ ಒಳ ಕೋಣೆಯಲ್ಲಿಯ ಒಂದು ಪೆಟ್ಟಿಗೆಯನ್ನು ತರಿಸಿ, ಕೊರಳಲ್ಲಿಯ ಮುತ್ತಿನ ಹಾರದಲ್ಲಿದ್ದ ಬೀಗದ ಕೈಯನ್ನು ಶಾಸ್ತ್ರಿಗಳ ಕೈಯಲ್ಲಿ ಕೊಟ್ಟು ಅದನ್ನು ತೆರೆಯಹೇಳಿದಳು.

ಬೀಗದ ಕೈಯನ್ನು ಇಸಿದುಕೊಂಡರೂ ಶಾಸ್ತ್ರಿಗಳ ಕೈ ಅಳುಕಿತು. "ಇವೆಲ್ಲ ರಾಜಮನೆತನದ ಕಾಗದ-ಪತ್ರಗಳು. ಹೊರಗಿನವರಿಗೆ ಇವನ್ನೆಲ್ಲ ಏಕೆ ತೋರಿಸುವುದು? ಗತಿಸಿದ ನಾಯಕ ದೊರೆ, ತಾವು ಮತ್ತು ನನ್ನ ಹೊರತಾಗಿ ಇನ್ನಾರಿಗೂ ಇದು ತಿಳಿದಿಲ್ಲ" ಎಂದು ನುಡಿದರು.

"ಹೇಳಿದಷ್ಟು ಮಾಡಿರಿ, ಶಾಸ್ತ್ರಿಗಳೇ" ರಾಣಿಯ ಬಿರುಸು ದನಿಯಷ್ಟೇ ಅವಳ ದೃಷ್ಟಿಯೂ ಕ್ರುದ್ಧವಾಗಿದ್ದಿತು.

ಶಾಸ್ತ್ರಿಗಳ ಕೈ ನಡುಗುತ್ತಿದ್ದಿತು. ಮಾತನಾಡದೇ ಕೀಲಿಯನ್ನು ತೆರೆದರು. ರಾಣಿಯ ಅಪ್ಪಣೆಯಂತೆ ಮೇಲೆಯೇ ಇದ್ದ ಕಾಗದವನ್ನು ಕೈಗೆತ್ತಿಕೊಂಡರು.

"ಹೂಂ. ಶಾಸ್ತ್ರಿಗಳೇ, ಅದರ ವಿವರಗಳನ್ನು ಟೇಲರರಿಗೆ ಹೇಳಿಬಿಡಿರಿ" ಎಂದು ನುಡಿದು ನೋವಿನ ಬಾಧೆಯಿಂದ ಬೇರೆಡೆಗೆ ಮಗ್ಗುಲಾದಳು.

"ಸಾಹೇಬರೇ, ಈ ವಿಷಯ ಕೇಳುವುದಕ್ಕೆ ಹಿತಕರವಾದದ್ದೇನೂ ಅಲ್ಲ. ಇದು ರಾಜಕುಮಾರರ ಜಾತಕ. ನಾನೇ ಬರೆದದ್ದು. ಅವರು ಹುಟ್ಟಿದ ಗಳಿಗೆಯ ಕಾಲಕ್ಕೆ ನಾನು ಇಲ್ಲಿಯೇ ಇದ್ದೆ. ಆಗಿನ ಗ್ರಹಗತಿಯ ಮಾನದಿಂದ ಇದನ್ನು ಗುಣಿಸಿದೆ. ಮತ್ತೂ ಒಮ್ಮೆ ಗುಣಿಸಿ ನೋಡಿದೆ. ಗ್ರಹಗತಿಯ ಫಲಿತಾಂಶ ಮಾತ್ರ ಒಳ್ಳೆಯದು ಹೊರಡಲಿಲ್ಲ."

ಕೂಡಲೇ ರಾಣಿಯು ಮತ್ತೆ ಈ ಕಡೆ ತಿರುಗಿ, "ಹೌದು, ಅತ್ಯಂತ ಕೆಟ್ಟ ಫಲ ಹೊರಟಿತು. ಆ ಹೀನ ಸುಳಿಯ ಭಂಡ ಮಗನಿಗೆ ಸಂಬಂಧಪಟ್ಟದ್ದೆಲ್ಲವೂ ಕೆಟ್ಟದ್ದೇ ಇದೆ, ಸಾಹೇಬರೇ. ಅವನ ತಂದೆ ಸತ್ತದ್ದೂ ಇವನ ಕಾಲಗುಣದಿಂದಲೇ. ಇವನೇ ಮುಂದೆ ದೊಡ್ಡವನಾಗಿ ನಿಸ್ಸಂತಾನನಾಗಿ ರಾಜ್ಯವನ್ನು ಮಣ್ಣುಗೂಡಿಸುವುದಕ್ಕೆ ಕಾರಣನಾಗುವುದಕ್ಕಿಂತ ಆಗೇ ಸತ್ತು ಹೋಗಿದ್ದರೆ ಏನು ಕೇಡಿತ್ತು, ಹೇಳಿರಿ? ಅವನು ತನ್ನ ೨೪ನೆಯ ವಯಸ್ಸಿಗೆ ಸಾಯುವವನೇ ಇದ್ದಾನೆ. ನನ್ನ ಪುಣ್ಯಕ್ಕೆ ನಾನು ಅಲ್ಲಿಯ ವರೆಗೆ ಬದುಕುವುದಿಲ್ಲ" ಎಂದು ಉದ್ವೇಗದಿಂದ ಒದರಾಡಿ, ದಮ್ಮು ಹತ್ತಲು, ಉಸಿರಿಗಾಗಿ ತಡೆದು ನಿಂತಳು.

"ಮಗನ ಗ್ರಹಗತಿ ನೋಡಿ ದೊರೆಗಳಿಗೆ ಬಹಳ ಕೆಡುಕೆನಿಸಿತು, ಸಾಹೇಬರೇ. ನಮ್ಮ ವಂಶ, ನಮ್ಮ ಕೀರ್ತಿ, ನಮ್ಮ ರಾಜ್ಯ ಇಲ್ಲಿಗೇ ನಿಲ್ಲುವಂತಾಯಿತಲ್ಲ ಎಂದು ದುಃಖಿಸಿದರು. ಅದಕ್ಕೇಯೇ ಈ ಜಾತಕವನ್ನು ನಾಸಿಕಕ್ಕೆ ಕಳುಹಿದೆವು. ಕಾಶಿಗೆ, ಎಲ್ಲೆಲ್ಲಿ ಶಾಸ್ತ್ರಪಂಡಿತರಿರುವರೋ ಅಲ್ಲೆಲ್ಲ ಕಡೆಗೂ ಕಳುಹಿದೆವು. ಸಾವಿರಾರು ರೂಪಾಯಿ ವೆಚ್ಚವಾದವು. ಎಲ್ಲೆಡೆಯಿಂದಲೂ ಒಂದೇ ಉತ್ತರ . . ." ಹೇಳುತ್ತ ಶಾಸ್ತ್ರಿಗಳು ಗದ್ಗದಿತರಾದರು.

"ಯಾವುದರಿಂದ ಈ ಮರಣ ಸಂಭವಿಸುವುದು, ಶಾಸ್ತ್ರಿಗಳೇ?"

"ಅದು ಹೇಗೆ ಮರಣ ಒದಗಿ ಬರುವುದೆಂಬುದನ್ನು ಖಚಿತವಾಗಿ ಹೇಳಲಾರೆ. ೨೪ ನೆಯ ವರುಷದ ವರೆಗೆ ಯಾವ ಯೋಚನೆಯೂ ಇಲ್ಲ. ಆದರೆ ೨೪ ನೆಯ ವರುಷವನ್ನು ಅವರು ದಾಟುವುದಿಲ್ಲವೆಂಬುದು ಖಂಡಿತವಾದ್ದರಿಂದ ವ್ಯಸನವಾಗಿದೆ."

ರಾಣಿ ಸಿಡಿದೆದ್ದು ನುಡಿದಳು: "ನಮ್ಮ ವಂಶಕ್ಕೆ ಈ ಭ್ರಷ್ಟನೇ ಕೊನೆಯವನು, ಸಾಹೇಬರೇ. ಅವನ ಹಿಂದೆಯೇ ನಮ್ಮ ರಾಜ್ಯ, ನಮ್ಮ ವೈಭವ, ನಮ್ಮ ಕೀರ್ತಿ ನಿರ್ನಾಮವಾಗಿ ಹೋಗುತ್ತದೆ."

"ರಾಜ್ಯವು ಹೋಗುವುದಕ್ಕೇನಾಯಿತೀಗ?"

"ಏನೆಂದರೆ? ದತ್ತಕ ತೆಗೆದುಕೊಂಡಾದರೂ ರಾಜ್ಯವನ್ನುಳಿಸಿಕೊಳ್ಳಲಿಕ್ಕೆ ನಿಮ್ಮ ಆಡಳಿತೆಯಲ್ಲಿ

ನೀವು ಬಹು

ಅಂದವಾಗಿ

ಕಾಣುತ್ತೀರಿ...





# ಮಫತ್‌ಲಾಲ್ ಗ್ರುಪ್

## ಪ್ರಿಂಟೆಡ್ ಪಾಪ್ಲಿನ್‌ಗಳು

ನ್ಯೂ ಶೊರ್ರೊಕ್ (ಶೊರ್ರೊಕ್) ಅಹಮದಾಬಾದ್, ನ್ಯೂ ಶೊರ್ರೊಕ್, ನಡಿಯಾಡ್. ಸ್ಟಾಂಡರ್ಡ್, ಬೊಂಬಾಯಿ. ಸ್ಟಾಂಡರ್ಡ್ (ನ್ಯೂ ಚೈನಾ), ಬೊಂಬಾಯಿ. ಸ್ಟಾಂಡರ್ಡ್, ದೇವಾಸ್. ಸಾಸ್ಸೂನ್, ಬೊಂಬಾಯಿ. ಸಾಸ್ಸೂನ್ (ನ್ಯೂ ಯೂನಿಯನ್) ಬೊಂಬಾಯಿ. ಸೂರತ್ ಕಾಟನ್, ಸೂರತ್. ಮಫತ್‌ಲಾಲ್ ಫೈನ್, ನವಸಾರಿ. ಗಗಲ್‌ಭಾಯ್ ಜೂಟ್, ಕಲ್ಕತ್ತ. ಇಂಡಿಯನ್ ಡೈಸ್ಟಫ್, ಬೊಂಬಾಯಿ.

Graphic MF 48



ಪೆಪ್ಸ್ ನಿಂದ
ಬ್ರಾಂಕೈಟಿಸ್
ಬೇಗನೆ

ನಿರ್ಮೂಲ-
ವಾಯಿತು

ಜಗತ್ ಪ್ರಸಿದ್ಧವಾದ
ಗಂಟಲು ಮತ್ತು ಎದೆಯ ಬಿಲ್ಲೆಗಳು

ಪೆಪ್ಸ್ ಗಂಟಲು ಮತ್ತು ಎದೆಯ ಬಿಲ್ಲೆಗಳಿಂದ, ಗಂಟಲು ನೋವು, ಬ್ರಾಂಕೈಟಸ್, ಕೆಮ್ಮು ಮತ್ತು ಶೀತ ಶೀಘ್ರ ಉಪಶಮನವಾಗುತ್ತದೆ. ಪೆಪ್ಸ್ ಚೀಪುವುದರಿಂದ ಅದರಲ್ಲಿ ಉದ್ಭವಿಸುವ ಗುಣಪಡಿಸುವ ಆವಿಯು ನೋವನ್ನು ಮತ್ತು ರೋಗಾಣುಗಳನ್ನು ನಿವಾರಿಸಲು ಎಷ್ಟು ಸಹಾಯಕವಾಗುವುದೆಂಬುದನ್ನು ನೀವೇ ಅನುಭವಿಸುವಿರಿ.




ಪೆಪ್ಸ್

ಗಂಟಲು ಮತ್ತು
ಎದೆಯ ಬಿಲ್ಲೆಗಳು

ಎಲ್ಲಾ ಮದ್ದಿನ
ವ್ಯಾಪಾರಿಗಳಲ್ಲಿ
ದೊರೆಯುವುದು

ಸಿ. ಇ. ಫುಲ್‌ಫೊರ್ಡ್ (ಇಂಡಿಯಾ) ಪ್ರೈವೇಟ್ ಲಿ.

FPY-56-KAN


ಅವಕಾಶವೆಲ್ಲಿದೆ ? ಅದಕ್ಕೂ ಕಲ್ಲು ಹಾಕ ತೊಡಗಿದ್ದೀರಲ್ಲ. ಈಗೇ ಅವನು ಸತ್ತುಹೋಗಿ ಬಿಟ್ಟಿದ್ದರೆ ನಾನೇ ನಿಮಗೆ, ನಿಮ್ಮ ಮಕ್ಕಳಿಗೆ ವಂಶಪಾರಂಪರ್ಯವಾಗಿ ರಾಜ್ಯವನ್ನು ಬಿಟ್ಟು ಕೊಟ್ಟು ಸಾಯುತಿದ್ದೆ," ಎಂದು ರಾಣಿಯು ಅಳತೊಡಗಿದಳು.

"ಆದದ್ದಾಯಿತು ಟೇಲರ್ ಸಾಹೇಬ, ನಿಮಗೆ ನಾನು ಬಹಳಷ್ಟು ತ್ರಾಸು ಕೊಟ್ಟಿದ್ದೇನೆ. ಅದನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಿರಿ. ಯಾರು ಯಾರೋ ರಾಜ್ಯಕ್ಕೆ ಅಧಿಕಾರಸ್ಥರಾಗುವುದು ಬೇಡ. ಈ ಹುಳವು ಸಾಯುವ ವರೆಗೆ ನೀವು ಸುರಪುರವನ್ನು ಬಿಟ್ಟುಹೋಗಬೇಡಿರಿ. ಅವನ ದೇಹವು ಪೂರ್ಣ ಸುಟ್ಟು ಹೋದ ಮೇಲೆ ಈ ರಾಜ್ಯವನ್ನು ನೀವೇ ತೆಗೆದುಕೊಳ್ಳಿರಿ. ನನ್ನ ಮಾತಿಗೆ ಈ ಶಾಸ್ತ್ರಿಗಳೇ ಸಾಕಿ."

ರಾಜಕುಮಾರನ ಅಕಾಲ ಮರಣದ ಪ್ರಸಂಗ ವೇನೂ ಬರಲಿಕ್ಕಿಲ್ಲವೆಂದೂ ರಾಜ್ಯವನ್ನು ತಾನು ಪಡೆಯುವುದು ಸಲ್ಲದೆಂದೂ ಈ ವಿಷಯವನ್ನೀಗ ಎತ್ತಲೇ ಬಾರದಿತ್ತೆಂದೂ ಟೇಲರ್ ಸಮಾಧಾನ ಹೇಳಿದನು.

"ಇಲ್ಲ ಸಾಹೇಬರೇ, ನಾನು ಇದನ್ನೆಲ್ಲ ಯೋಚಿಸಿಯೇ ಮಾಡಿದ್ದೇನೆ. ಇನ್ನು ಮೇಲೆ ಈ ಪೆಟ್ಟಿಗೆಯನ್ನೂ ನೀವೇ ಇಟ್ಟುಕೊಳ್ಳಿರಿ. ನಿಮ್ಮ ಮೇಲೆ ನನಗೆ ವಿಶ್ವಾಸವಿದೆ. ಇದರಲ್ಲಿ ನಮ್ಮ ಮನೆತನದ ಪೂರ್ವಚರಿತ್ರೆಗೆ ಸಂಬಂಧಪಟ್ಟ ಕಾಗದಗಳಿವೆ. ಅವುಗಳ ಮಹತ್ವ ನಿಮಗೇನೂ ಇಲ್ಲ. ಸಾತಾರಾ ಮತ್ತಿತರ ಕೆಲವು ಮರಾಠಾ ರಾಜರು, ಕಂಪನಿ ಸರಕಾರದ ವಿರುದ್ಧ ಬಂಡೇಳಲು ನಮ್ಮ ಯಜಮಾನರಿಗೆ ಬರೆದ ಗುಪ್ತ ಕಾಗದಪತ್ರಗಳೂ ಕೆಲವಿವೆ. ಅವರೇನೂ ಇದಕ್ಕೆ ಒಪ್ಪಲಿಲ್ಲ. ಆ ಪ್ರಕರಣ ಮುಗಿದುಹೋಗಿದೆ. ಒಂದೇ ಒಂದು ನನ್ನ ಬಿನ್ನಹವಿದೆ. ಇದರಲ್ಲಿಯ ಯಾವ ವಿಷಯವನ್ನೂ ಬಹಿರಂಗಪಡಿಸುವುದಿಲ್ಲವೆಂದು ನನ್ನ ಕೊರಳಾಣೆ ಮಾಡಿ ಹೇಳಿರಿ" ಎಂದಳು. ಟೇಲರನು ಅದರಂತೆ ಆಣೆ ಮಾಡಿದನು.

ಆಗ ಶಾಸ್ತ್ರಿಗಳು, "ರಾಜಕುಮಾರನ ವಿಷಯವನ್ನು ದಯವಿಟ್ಟು ನಿಮ್ಮ ಮೇಲಿನವರಿಗೂ ತಿಳಿಸಬಾರದು" ಎಂದು ಹೇಳಿಕೊಂಡರು. ಅವರಿಗೆ ನಂಬಿಕೆ ಹುಟ್ಟಲೆಂದು ಟೇಲರನು ಆ ಪೆಟ್ಟಿಗೆಗೆ ಶಾಸ್ತ್ರಿಗಳ ಸ್ವಂತದ, ರಾಜ್ಯದ ಮತ್ತು ತನ್ನ ಸೀಲುಗಳನ್ನು ಒತ್ತಿಸಿದನು.

ಆ ಪೆಟ್ಟಿಗೆಯನ್ನು ತೆಗೆದುಕೊಂಡು ಟೇಲರನು ರಾಜಕುಮಾರನ ಬಳಿಗೆ ಬಂದಾಗ, ಅವನು ಪರ್ಶಿಯನ್ ಪಾಠವನ್ನು ಮುನಶಿಯಿಂದ ಕಲಿಯುತ್ತಿದ್ದನು.

"ಅಪ್ಪಾ, ಆ ಪೆಟ್ಟಿಗೆಯಲ್ಲಿ ಏನಿದೆ? ಆಕೆ ಏನು ಹೇಳಿದಳು?" ಎಂದು ಆತುರದಿಂದ ಕೇಳಿದನು.

"ಏನಿಲ್ಲ, ಇದರಲ್ಲಿ ಹಳೆಯ ಕಾಗದಪತ್ರಗಳಿವೆ. ಸುರಕ್ಷಿತತೆಗಾಗಿ ನನ್ನೆಡೆಗೆ ಒಪ್ಪಿಸಿದ್ದಾರೆ. ತಾನು ಸಾಯುತ್ತೇನೆಂದು ಅವರ ಭಾವನೆಯಾಗಿದೆ."

"ಬಹಳ ಹೊತ್ತು ಬದುಕುವುದಿಲ್ಲವೆನ್ನುತ್ತೀರಾ?"

"ನನಗೇನೂ ಹಾಗೆನಿಸುವುದಿಲ್ಲ. ಆದರೆ ನೋವು ಮಾತ್ರ ಬಹಳ ಕಾಣಿಸುತ್ತದೆ."

ಆದರೆ ರಾಣಿ ಬದುಕಿ ಉಳಿದಳು. ಅವಳ ಬುದ್ಧಿಯೂ ಸ್ತಿಮಿತಕ್ಕೆ ಬಂದಿತು. ತಾನು ಟೇಲರನಿಗೆ ಹೇಳಿದ್ದೆಲ್ಲ ತಪ್ಪಾಯಿತೆಂದು ಅನಿಸಿತೋ ಏನೊ. ಆಕೆ ತನ್ನ ಕಡೆಯ ಜನರನ್ನು ಕೂಡ್ರಿಸಿ ಬಂಡೇಳುವ ಎತ್ತುಗಡೆಯಲ್ಲಿರುವುದು ಕಂಡುಬಂದಿತು. ಅದೇ ನಿಮಿತ್ತವಾಗಿ ಟೇಲರನ ವರದಿಯನ್ನನುಸರಿಸಿ, ಗವರ್ನರ್ ಜನರಲ್‌ನು ರಾಣಿಯ ಗಡೀಪಾರಿನ ಸಲುವಾಗಿ ಆಜ್ಞೆಯನ್ನು ಹೊರಡಿಸಿದನು. ರಾಣಿಯ ಸಂತಾಪ ಹೇಳತೀರದು. ಆದರೆ ಬೇರೆ ಗತಿಯಿರಲಿಲ್ಲ. ಅವಳ ಹಸ್ತಕನಾದ ಕಾಶೀಮನನ್ನು ಸೆರೆಯಲ್ಲಿಟ್ಟರು. ಸುರಪುರದ ಗಡಿಯಿಂದ ಅವಳನ್ನು ಹೊರಗೆ

ಮಲಬದ್ಧತೆ ಮತ್ತು ಮೂಲವ್ಯಾಧಿ

ನಿತ್ಯ ಮಲಬದ್ಧತೆಯಿಂದ ಮೂಲವ್ಯಾಧಿ ಉಂಟಾಗಬಹುದು. ಈ ವ್ಯಾಧಿಯಲ್ಲಿ ಗುದದ ಒಳಗಿನ ಹಾಗೂ ಸುತ್ತಲಿನ ಅಶುದ್ಧ ರಕ್ತನಾಳಗಳು ಬಾತುಕೊಳ್ಳುವುವು. ಇದರ ನೋವಿನಿಂದಾಗಿ ಮಲವಿಸರ್ಜನೆಯು ಇನ್ನೂ ಕಠಿನ ಹಾಗೂ ಕಷ್ಟವಾಗುತ್ತದೆ. ತತ್ಪರಿಣಾಮವಾಗಿ ಮಲಬದ್ಧತೆ ಅಧಿಕವಾಗುತ್ತದೆ. ನೋವಿರುವ ವ್ರಣಗಳಿಂದ ಕೂಡಿದ ಮೂಲವ್ಯಾಧಿಯು ತೀವ್ರವಾಗುತ್ತದೆ. ಮೂಲವ್ಯಾಧಿಯ ತೀವ್ರ ವೇದನೆ ಮತ್ತು ಅಸೌಖ್ಯವನ್ನು ಗುಣಪಡಿಸಿದರೆ ಮಲವಿಸರ್ಜನೆ ಸುಲಭವಾಗುವುದರಲ್ಲಿ ಸಂದೇಹವಿಲ್ಲ. ಹಡೆನ್‌ಜಾ ಈ ಕಾರ್ಯವನ್ನು ಮಾಡುವುದು ಇದು ನೋವು ಹಾಗೂ ತೊರಿಕೆಯನ್ನು ಶೀಘ್ರವಾಗಿ ಪರಿಹರಿಸುವುದು. ಇದರ ಸಂತತ ಉಪಯೋಗದಿಂದ ಮೊಳೆಗಳು ಕುಗ್ಗಿ ವ್ಯಾಧಿ ಗುಣವಾಗುವುದು. ಮೂಲವ್ಯಾಧಿಗೆ ಸುಪ್ರಸಿದ್ಧ ಜರ್ಮನ್ ಔಷಧಿಯಾಗಿರುವ ಹಡೆನ್‌ಜಾದಲ್ಲಿ ಮರಕಟ್ಟುವಂತೆ ಮಾಡುವ ಮದ್ದು ಸೇರಿಲ್ಲ. ಇದರಿಂದ ಬಟ್ಟೆಗೆ ಕರೆಕಟ್ಟುವುದಿಲ್ಲ. ಉಪಯೋಗಿಸುವ ಕ್ರಮ ಸುಲಭ. ಪ್ರತಿಯೊಂದು ಪ್ಯಾಕೇಜಿನಲ್ಲಿರುವ ಚಿಕ್ಕ ಪ್ಲಾಸ್ಟಿಕ್ ನಳಿಗೆಯಲ್ಲಿ ಉಪಯೋಗಿಸುವ ಕ್ರಮವನ್ನು ವಿವರಿಸಲಾಗಿದೆ. ನಿಮ್ಮ ಸಮಸ್ಯೆ ಮೂಲವ್ಯಾಧಿಯಾಗಿದ್ದರೆ ಹಡೆನ್‌ಜಾ ಅದಕ್ಕೆ ಉತ್ತರ. ಇಂದೇ ಹಡೆನ್‌ಜಾವನ್ನು ಉಪಯೋಗಿಸಿರಿ. ಈಗ ಇದನ್ನು ಭಾರತದಲ್ಲಿ ತಯಾರಿಸಲಾಗುತ್ತಿದೆ.

DZ- 952

ಕಳಿಸಲಾಯಿತು. ಆದರೆ ಅವಳ ದಂಗೆಯ ಬಗ್ಗೆ ವಿಚಾರಣಾಸಮಿತಿಯಲ್ಲಿ ಪುರಾವೆಗಳು ಸಾಲ-ಲಿಲ್ಲವೆಂದು, ಆಕೆ ಎರಡು ವರ್ಷಗಳ ಅವಧಿಯಲ್ಲಿ ನಿರ್ದೋಷಿಯೆಂದು ಬಿಡುಗಡೆ ಹೊಂದಿ ಮರಳಿ ಬಂದಳು. ಬಂದವಳು ಬಹಳ ದಿನ ನಿಲ್ಲಲಿಲ್ಲ. ಒಂದು ದಿನ ತೀರ್ಥ ಯಾತ್ರೆಗೆಂದು ಹೊರಟು ನಿಂತವಳು ದಾರಿಯಲ್ಲಿಯೇ ತೀರಿಕೊಂಡಳು. (೧೮೫೩).

ರಾಜಕುಮಾರ ವೆಂಕಟಪ್ಪನಾಯಕನು ದೊಡ್ಡವನಾಗುತ್ತ ಬಂದಂತೆ, ರಾಜ್ಯಭಾರದತ್ತ ಹೆಚ್ಚೆಚ್ಚು ಗಮನವನ್ನು ಕೊಡತೊಡಗಿದನು. ಅವನಿಗೆ ೧೮ ವರ್ಷಗಳು ತುಂಬುತ್ತ ಬಂದಿದ್ದುವು. ರಾಜ್ಯವನ್ನು ತಾನೇ ನಡೆಯಿಸಬೇಕೆಂಬ ಹಂಬಲ ಬೆಳೆಯುತೊಡಗಿತು. ತನ್ನ ವಿಶ್ವಾಸದ ಟೇಲರ ನೆದುರು ಹತ್ತು ಬಾರಿ ಆಡಿ ತೋರಿಸದೆ ಇರಲಿಲ್ಲ. ಟೇಲರನು ಹೈದರಾಬಾದಿನ ರೆಸಿಡೆಂಟನ ಮುಖಾಂತರ ಗವರ್ನರ್ ಜನರಲ್ಲನಿಗೆ ಈ ಬಗ್ಗೆ ವರದಿಯನ್ನು ಕಳಿಸಿದನು.

ಕೊನೆಗೊಮ್ಮೆ ಕಲಕತ್ತೆಯ ಕಚೇರಿಯಿಂದ ಅಪ್ಪಣೆ ಬಂದಿತು. ಆದರೆ ರಾಜನಿನ್ನೂ ಚಿಕ್ಕವನಿರುವುದರಿಂದ ಒಬ್ಬ ಬ್ರಿಟಿಶ್ ಪೊಲಿಟಿಕಲ್ ಏಜೆಂಟನನ್ನು ಇಟ್ಟುಕೊಳ್ಳಬೇಕು ಮತ್ತು ಅವನಿಗೆ ೨೦,೦೦೦ ರೂಪಾಯಿಗಳ ವಾರ್ಷಿಕ ವೇತನವನ್ನು ಕೊಡಬೇಕೆಂದು ಅದರಲ್ಲಿ ಸೂಚಿಸಲಾಗಿದ್ದಿತು. ಅಲ್ಲದೆ ಸರಿಯಾಗಿ ರಾಜ್ಯವ್ಯವಸ್ಥೆಯನ್ನು ನಡಸಿಕೊಂಡು ಹೋಗದಿದ್ದರೆ ಸರಕಾರವು ಸಂಸ್ಥಾನದ ಆಡಳಿತೆಯಲ್ಲಿ ಕೈಹಾಕುವುದು. ಅಗತ್ಯ ಬಿದ್ದರೆ ಅರಸನನ್ನು ಮನೆಗೆ ಕಳಿಸಲಾಗುವುದು ಎಂದೂ ಅದರಲ್ಲಿ ಕಾಣಿಸಿದ್ದರು.

ವೆಂಕಟನಾಯಕನು ಚಿಕ್ಕವನಾಗಿದ್ದರೂ ಇದರಲ್ಲಿ ತನ್ನ ಸ್ವಾತಂತ್ರ್ಯಕ್ಕೆ ಧಕ್ಕೆ ಇದೆಯೆಂಬುದನ್ನು ಅರಿತುಕೊಳ್ಳುವಷ್ಟು ಸಮರ್ಥನಿದ್ದನು. ಆ ಪತ್ರವನ್ನು ಹಿಡಿದುಕೊಂಡು ಟೇಲರನೆಡೆಗೆ ಬಂದು ಕೇಳಿದನು: "ಅಪ್ಪಾ ಪೊಲಿಟಿಕಲ್ ಎಜೆಂಟ್ ಅಂದರೇನು?"

ನಿಜವಾಗಿಯೆಂದರೆ, ಟೇಲರನ ವರದಿಯ ಮೇಲಿಂದಲೇ ಈ ರೀತಿಯ ಆಜ್ಞೆ ಹೊರಟಿತ್ತು. ರಾಜನಾಗುವವನು ಚಿಕ್ಕವನೂ ದುಂದುಗಾರನೂ ಇರುವನೆಂದು ಅವನು ತಿಳಿಸಿಯೆ, ಅವನನ್ನು ಪಟ್ಟಕ್ಕೆ ಕುಳ್ಳಿರಿಸಬಹುದೆಂದು ತನ್ನ ವರದಿಯಲ್ಲಿ ಸೂಚಿಸಿದ್ದನೆಂಬುದು ಸ್ಪಷ್ಟವಿದೆ. ಟೇಲರನಿಂದ ಸುರಪುರದಲ್ಲಿ ಉಳಿಯುವ ಪೊಲಿಟಿಕಲ್ ಎಜೆಂಟನ ಸ್ಥಾನಮಾನಗಳನ್ನು ಕೇಳಿಕೊಂಡ ಮೇಲೆ, ನಾಯಕನು ಮಾರ್ಮಿಕವಾಗಿ ಉತ್ತರ ಕೊಟ್ಟನು :

"ಅಪ್ಪಾ, ನೀವು ಹೇಳುವುದು ಸರಿ. ಆದರೆ ೨೦,೦೦೦ ರೂಪಾಯಿಗಳನ್ನು ಕೊಟ್ಟು ಒಬ್ಬ ರಾಜಕೀಯ ಸಲಹೆಗಾರನನ್ನು ಇಟ್ಟುಕೊಳ್ಳುವುದು ನಮ್ಮ ಸಂಸ್ಥಾನಕ್ಕೆ ಸಾಧ್ಯವಿದೆಯೆ ನೀವೇ ಹೇಳಿರಿ? ನಿಮಗೆ ಅರಿಯದುದು ಯಾವುದಿದೆ? ಇನ್ನು ನೀವೇ ಇಲ್ಲಿ ಉಳಿಯುತ್ತಿದ್ದರೆ ವಿಚಾರ ಮಾಡಬಹುದಿತ್ತು. ಆದರೆ ಕೊನೆವರೆಗೆ ನೀವು ಇಲ್ಲಿ ಇರುವಿರೆಂಬ ಭರವಸೆ ಎಲ್ಲಿಯದು? ಈಗ ನಾನೇನು ಈ ಪತ್ರಕ್ಕೆ ಉತ್ತರ ಬರೆಯಬೇಕು, ಹೇಳಿರಿ" ಎಂದನು.

ಎರಡು ದಿನಗಳ ನಂತರ ಉತ್ತರವನ್ನು ತಾನೇ ಬರೆದು, ಟೇಲರನಿಗೆ ಅದರ ನಕಲನ್ನು ತೋರಿಸಿದನು. ರಾಜನು ತನಗೆ ಆಡಳಿತವನ್ನು ವಹಿಸಿ ಕೊಡುವುದಕ್ಕೆ ಧನ್ಯವಾದಗಳನ್ನು ಅರ್ಪಿಸಿದ್ದನು. ರಾಜ್ಯದಲ್ಲಿಯ ಶಾಂತಿ ಸುವ್ಯವಸ್ಥೆಗಳ ಬಗ್ಗೆ ನೀವು ಏನೂ ಯೋಚನೆಗೊಳಗಾಗಬೇಡಿರಿ ಎಂದಿದ್ದನು. ಪೊಲಿಟಿಕಲ್ ಎಜೆಂಟನ ನೇಮಕದ ಬಗ್ಗೆ ಒಂದು ಅಕ್ಷರವನ್ನೂ ಬರೆಯಲಿಲ್ಲ! ಈ ಉತ್ತರದ ಒರಟಾದ ಒಕ್ಕಣೆಯು ಕಂಪನಿಯವರಿಗೆ ಎಳ್ಳಷ್ಟೂ ಹಿಡಿಸಲಿಲ್ಲ. ಹಾಗೆಂದು ಖಾಸಗಿಯಾಗಿ ಟೇಲರನಿಗೆ ಪತ್ರ ಬರೆದರು.

ಕೊನೆಗೊಮ್ಮೆ ೧೨ ವರ್ಷಗಳ ತನ್ನ ಸುರಪುರ ವಾಸ್ತವ್ಯದಿಂದ ಟೇಲರನು ಅಗಲಬೇಕಾದ ದಿನ

# ಎಷ್ಟು ರುಚಿಕರ!




## ಮನೆಗಳಿಗೆ—ಹೋಟೆಲುಗಳಿಗೆ

# ಬ್ರೂಕ್ ಬಾಂಡ್

# ಸ್ಪೆಷಲ್ ಹೋಟೆಲ್ ಬ್ಲೆಂಡ್

ಡಸ್ಟ್ ಟೀ

- ★ ಪ್ರತಿ ಪೊಟ್ಟಣ ನಿಮಗೆ ಹೆಚ್ಚು ಬಟ್ಟಲು ಉತ್ತಮ ಚಹವನ್ನು ನೀಡುವುದು
- ★ ತೇವ ತಗಲದಂತೆ ಪೊಟ್ಟಣ ಕಟ್ಟುವಿಕೆಯ ನಿಮಿತ್ತ ಅತ್ಯಂತ ಪರಿಶುದ್ಧವಾಗಿರುವುದು
- ★ ಮಿಲಿಯಗಟ್ಟಲೆ ಮನೆಗಳಲ್ಲಿ ಇದನ್ನು ಕುಡಿದು ಆನಂದ ಪಡೆಯುತ್ತಿದ್ದಾರೆ

**3 ಗಾತ್ರಗಳಲ್ಲಿ ದೊರೆಯುತ್ತದೆ**

**500 ಗ್ರ್ಯಾಮ್, 100 ಗ್ರ್ಯಾಮ್, 50 ಗ್ರಾಮ್**

JWT 386







ಸೋಲ್ ಡಿಸ್ಟ್ರಿಬ್ಯೂಟರ್ಸ್ :
ಎ. ಡಿ. ಆರ್. ಎ. & ಕಂ. ಬೊಂಬಾಯಿ-2


ಬಂದಿತು. ರಾಜನಿಗೆ ಧರ್ಮಸಂಕಟ. ಒಂದೆಡೆ ರಾಜ್ಯವನ್ನು ತಾನೇ ನಡೆಸಬೇಕು ಎಂಬ ಉತ್ಕಟವಾದ ಹಂಬಲ. ಇನ್ನೊಂದೆಡೆ ತನ್ನ ಪ್ರೀತಿಯ 'ಅಪ್ಪಾ'ನನ್ನು ಬಿಟ್ಟುಕೊಡಬೇಕು ಎಂಬ ವೇದನೆ. ಆದರೆ ಬೇರೆ ಉಪಾಯವಿರಲಿಲ್ಲ. ಸುರಪುರದಿಂದ ವರ್ಷವೂ ಕಾರಣವಿಲ್ಲದೆ ಹೇರಳ ನಜರಾಣೆಯನ್ನು ಸ್ವೀಕರಿಸುವ ನಿಜಾಮನಾಗಲೀ ಕಂಪನಿಯವರೇ ಆಗಲೀ ಪೊಲಿಟಿಕಲ್ ಎಜೆನ್ಸಿ ವೆಚ್ಚದ ಭಾರವನ್ನು ಅರ್ಧದಷ್ಟು ಹೊರುತ್ತಿದ್ದರೆ ರಾಜಾ ವೆಂಕಟನಾಯಕನು ಅಗತ್ಯವಾಗಿ ಒಪ್ಪುತ್ತಿದ್ದನೆಂದು ಟೇಲರನಿಗೆ ಅನಿಸಿತು.

ವೆಂಕಟನಾಯುನು ಟೇಲರ್ ಕಟ್ಟಿಸಿಕೊಂಡಿದ್ದ ಮನೆಯುನ್ನು ಇಮ್ಮಡಿ ಬೆಲೆ ಕೊಟ್ಟು ಕೊಂಡುಕೊಂಡನು. ಒಂದು ವಿದಾಯ ಸಭೆಯನ್ನು ನೆರವೇರಿಸಿದನು. ಟೇಲರನೂ ಇತರರೂ ಭಾಷಣ ಮಾಡಿದರು. ವೆಂಕಟನಾಯಕನು ಮಾತ್ರ ಒಂದು ಶಬ್ದವನ್ನೂ ಆಡಲಿಲ್ಲ. ಬಳಿಯಲ್ಲಿ ಕುಳಿತಿದ್ದ ಟೇಲರನ ಕಿವಿಯಲ್ಲಿ ತನ್ನ ಭಾವನೆಗಳ ಕಲಮಲವನ್ನು ಹೊರಹಾಕಿದನು ಅಷ್ಟೆ. ಮರುದಿನ ಟೇಲರನು ನಿಜವಾಗಿಯೂ ಊರು ಬಿಡುವ ಪ್ರಸಂಗವು ಬಂದಾಗಲಂತೂ ರಾಜನು ಬೇಟೆಯ ನೆವ ಮಾಡಿಕೊಂಡು ಅರಮನೆ ಬಿಟ್ಟು ಹೋಗಿಬಿಟ್ಟನು. ಮತ್ತು ತನ್ನಿಂದ ಆ ಅಗಲಿಕೆಯನ್ನು ಸಹಿಸುವುದು ಸಾಧ್ಯವಿಲ್ಲ; ಅದಕ್ಕಾಗಿ ಕ್ಷಮಿಸಬೇಕು ಎಂಬ ವಾರ್ತೆಯನ್ನು ಟೇಲರನಿಗೆ ಕಳಿಸಿದನು.

೧೮೫೩ ರಿಂದ ೧೮೫೭. ಈ ಮೂರೂವರೆ ವರ್ಷಗಳ ಕಾಲದಲ್ಲಿ ರಾಜಾವೆಂಕಟನಾಯಕನು ಸುರಪುರದ ರಾಜ್ಯಭಾರವನ್ನು ನಡೆಯಿಸಿದನು. ಅವನಿಗೆ, ಅವರ ಮನೆತನದ ಪದ್ಧತಿಯ ಪ್ರಕಾರ ಮೂವರು ಹೆಂಡಂದಿರು ಇದ್ದರು. ಎರಡನೆಯವಳು ಮಾತ್ರ ಸಾಮಾನ್ಯ ಕುಲದ ಹೆಂಗಸಾಗಿದ್ದಳು. ಈ ಮದುವೆಗೆ ಹಿರಿಯರೂ, ಅರ

ಮನೆಯವರೂ ಒಪ್ಪಿರಲಿಲ್ಲ. ಆದರೂ ರಾಜನು ತನ್ನ ಹಟವನ್ನು ಬಿಡಲಿಲ್ಲ.

೧೮೫೭ ರ ಪ್ರಾರಂಭದಿಂದಲೂ ದಕ್ಷಿಣ ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕ ಭಾಗದ ರಾಜರು ಸಂಸ್ಥಾನಿಕರೆಲ್ಲ ಸಾಮೂಹಿಕವಾಗಿ ದಂಗೆಯೇಳಲು ನಿರ್ಧರಿಸಿದರು. ಸಾತಾರೆಯ ರಂಗೋ ಬಾಪೂಜಿಯೂ ನಾನಾ ಸಾಹೇಬ ಪೇಶ್ವೆಯೂ ಇವರ ನೇತಾರರಾಗಿದ್ದರು. ಪೇಶ್ವೆ ಆಡಳಿತದಲ್ಲಿ ಪಾಳೆಯಗಾರರಾಗಿದ್ದ ಎಲ್ಲರಿಗೂ ಕರೆ ಹೋಯಿತು. ಸುರಪುರವೂ ಒಂದು ಕಾಲದಲ್ಲಿ ಪೇಶ್ವೆಯವರ ಅಧೀನದಲ್ಲಿದ್ದ ಸಂಸ್ಥಾನವಷ್ಟೆ. ಹಾಗಾಗಿ ಸುರಪುರಕ್ಕೆ ಗುಪ್ತ ಸಂದೇಶಕರು ಎಡತಾಕತೊಡಗಿದರು. ಯಾವ ರಾಜರೂ ಬಹಿರಂಗವಾಗಿ ಈ ಕ್ರಾಂತಿಯ ಕರೆಗೆ ಓಗೊಡಲು ಸಿದ್ಧರಿರಲಿಲ್ಲ. ಮುಂದಾಳ್ತನ ವಹಿಸುವುದಕ್ಕೆ ಮುಂದೆ ಬರಲಿಲ್ಲ. "ನೀವು ಮಾಡಿರಿ. ನಾವು ಇದ್ದೇವೆ." ಎಂಬ ವೃತ್ತಿಯು ಎಲ್ಲರಲ್ಲಿಯೂ ಕಂಡುಬರುತ್ತಿದ್ದಿತು.

ಸುರಪುರದ ರಾಜನು ಇದಕ್ಕೆ ಅಪವಾದವಾಗಿರಲಿಲ್ಲ. ಅವನೂ ಮೊದಲು ಇದಕ್ಕೆ ಒಪ್ಪಲಿಲ್ಲ. ಆ ಮೇಲೆ, 'ನೋಡೋಣ, ಉಳಿದವರು ಹೇಗೊ, ಹಾಗೆಯೆ ನಾನು' ಎಂದ. ಆದರೆ ಕ್ರಾಂತಿದೂತರಿಗೆ ಸುರಪುರದ ಬೇಡರ ಪಡೆಯ ಮೇಲೆ ಇನ್ನೂ ಕಣ್ಣಿದ್ದಿತು. ಮಧ್ಯಯುಗೀನ ಇತಿಹಾಸಕಾಲದಿಂದಲೂ ಇದ್ದ ಅವರ ಶ್ರೇಷ್ಠತ್ವ ಇನ್ನೂ ಹೊರಗಿನವರ ದೃಷ್ಟಿಯಲ್ಲಿ ಉಳಿದಿದ್ದಿತು. ಅವರಲ್ಲಿಯೂ ತಂಡಗಳಿದ್ದುವಷ್ಟೆ. ಮೈಸೂರು, ಹೈದರಾಬಾದ, ಆಡೂರು, ಹಡಗಲಿ ಈ ಬೇಡರೆಲ್ಲ ತಮ್ಮ ರಾಜನ ಕೈಕೆಳಗೆ ಹತು ಸಾವಿರದಷ್ಟು ಸಂಖ್ಯೆಯಲ್ಲಿ ಒಂದಾಗಿ ಬಿಟ್ಟರೆ, ಬ್ರಿಟಿಶರು ದಕ್ಷಿಣ ಹಿಂದುಸ್ಥಾನದಿಂದ ಕಾಲ್ತೆಗೆಯುವುದು ಖಂಡಿತ ಎಂಬುದು ಅವರ ವಿಚಾರವಾಗಿದ್ದಿತು. ಅಂತೆಯೇ ಸುರಪುರದಲ್ಲಿ ತಮ್ಮ ಪ್ರಯತ್ನಗಳನ್ನು ಕೇಂದ್ರೀಕರಿಸತೊಡಗಿದರು.

೧೮೫೭ ರ ಮೇ ತಿಂಗಳಲ್ಲಿ ಉತ್ತರ ಹಿಂದು


ಮೊಡಮೊಗಳು ನನ್ನ ಸಮಸ್ಯೆ ಆಗಿಬಿಟ್ಟಿತ್ತು...









ಎಲ್ಲಾ ಕೆಮಿಸ್ಟರಲ್ಲೂ ದೊರೆಯುವುದು.

DZ-929KN

ಸ್ತಾನದಲ್ಲಿ ದಂಗೆ ಎದ್ದಾಗ, ಇಲ್ಲಿ ಹೇಳಿಕೊಳ್ಳು ವಂಥ ಸಿದ್ಧತೆ ನಡೆದಿರಲಿಲ್ಲ. ಉತ್ತರ ಭಾರತ ದಲ್ಲಿ, 'ಬ್ರಿಟಿಶರು ಅಲ್ಲಿ ಸೋತರು', 'ಇಲ್ಲಿಂದ ಕಾಲ್ಕಿಗೆದರು', 'ದಿಲ್ಲಿ ಕಾನಪುರಗಳು ಕೈ-ಬಿಟ್ಟವು' 'ಮೊಗಲಶಾಹಿ ಮತ್ತೆ ದಿಲ್ಲಿಯಲ್ಲಿ ನೆಲೆಗೊಂಡಿತು' 'ಅರ್ಧದಷ್ಟು ಬ್ರಿಟಿಶರು ಹಡಗು ಹತ್ತಿ ಕಲಕತ್ತೆಯನ್ನು ತೊರೆದರು' ಎಂಬ ವಾರ್ತೆಗಳು ಒಂದೇ ಸವನೆ ಬರತೊಡಗಿದವು.

ರಾಯಚೂರು, ಆರ್ಕ್ಯಾಟ್, ಸಿಕಂದರಾಬಾದ್ ಗಳಿಂದ ಜನರು ಬಂದು, ನಿಜಾಮನು ಒಳಗೊಳಗೆ ನೆರವಾಗುತ್ತಿದ್ದಾನೆ, ಯೋಗ್ಯ ಸಮಯ ಕಾದಿದ್ದಾನೆ ಎಂಬ ವಾರ್ತೆಗಳನ್ನು ತರತೊಡಗಿದಾಗ ಸುರಪುರದ ರಾಜನು ತುಸು ಮುಂಬರಿದನು. ಒಬ್ಬ ಮೌಲ್ವಿಯಂತೂ ಕುರಾನನ್ನು ಹಿಡಿದು ಆಣೆ ಮಾಡಿದನು. ಮತ್ತು ಅರಬ್ಬೀ ಹಾಗೂ ರೋಹಿಲ ಜನರು ಬೇಕಾದರೆ ಸಹಾಯಕ್ಕೆ ತಂದುಕೊಡುವೆನೆಂದು ಹೇಳಿದನು.

ಈ ವೇಳೆಗೆ ಸುರಪುರದ ಆರ್ಥಿಕ ಸ್ಥಿತಿ ಚೆನ್ನಾಗಿರಲಿಲ್ಲ. ಬೊಕ್ಕಸವು ಬರಿದಾಗಿದ್ದಿತು. ಸ್ಥಳಿಕ ವ್ಯಾಪಾರಿಗಳು ಮತ್ತು ಗೋಸಾಯಿಗಳಲ್ಲಿ ಸಾಲ ತಂದಾಗಿದ್ದಿತು. ಒಮ್ಮೆ ಈ ಸದ್ಯದ ಬ್ರಿಟಿಶ ನೊಗವನ್ನು ತೆಗೆದೊಗೆಯುವಂತಾದರೆ ಹೊಸ ಪರಿಸ್ಥಿತಿ ಮತ್ತು ಹೊಸ ಅನುಕೂಲತೆಗಳು ಒಂದಾಗಿ ಬರುವವೆಂದು ರಾಜನು ಭಾವಿಸಿದನು. ಅವನು ಹರೆಯದವನಾದುದರಿಂದ ತನ್ನ ನೆರೆಯವರಲ್ಲಿ ನಿಜವಾಗಿಯೂ ಎಷ್ಟರ ಮಟ್ಟಿಗೆ ದೊಡ್ಡ ಪ್ರಮಾಣದಲ್ಲಿ ಹೋರಾಟದ ಸಿದ್ಧತೆ ನಡೆದಿದೆಯೆಂದು ತಿಳಿಯುವ ಮಾಗಿದ ಮುಂದಾಲೋಚನೆ ಇರಲಿಲ್ಲ. ಉತ್ತರ ಹಿಂದುಸ್ತಾನದ ಹೋರಾಟ ನಿಜವಾಗಿಯೂ ಸ್ಫೂರ್ತಿದಾಯಕವಾಗಿದ್ದಿತು. ಆದರೆ ಕೊಲ್ಲಾಪುರ, ಮಿರಜ, ಸಾತಾರಾ, ಹೈದರಾಬಾದ ಇಲ್ಲಿ ಕ್ರಾಂತಿಯ ಉತ್ಕಟತೆ ಕಂಡುಬಂದಿರಲಿಲ್ಲ. ಅವರನ್ನು ಕೂಡಿಕೊಂಡು ಮೇಲೇಳಬೇಕೆಂಬುದು ಅವನ ಬುದ್ಧಿಗೆ ತಾಕಲಿಲ್ಲ.

ಹೀಗಾಗಿ, ಅರಬ್ಬೀ ಹಾಗೂ ರೋಹಿಲರ ಸೈನ್ಯದ ಭರತಿಯು ಸುರಪುರದಲ್ಲಿ ಬಹಿರಂಗವಾಗಿಯೇ ನಡೆಯಿತು. ಬೇಡರ ಪಡೆಯಲ್ಲಿ ಹೊರಗಿನವರಿಗೇ ಹೆಚ್ಚು ವಿಶ್ವಾಸವಿದ್ದರೂ ತಮ್ಮವರಲ್ಲಿಯ ಹುಂಬತನ, ಭೂಬಣಗಳ ಬಡಿದಾಟ, ಮಧ್ಯಯುಗೀನ ಯುದ್ಧಪದ್ಧತಿ ಇವುಗಳ ಅರಿವು ರಾಜನಿಗೆ ಇದ್ದಿತು.

ದಂಗೆಯ ಸಿದ್ಧತೆಯು ದಕ್ಷಿಣ ಭಾರತದಲ್ಲಿ ಎಲ್ಲಿಯೂ ಬಹಿರಂಗವಾಗಿ ನಡೆದಿರಲಿಲ್ಲ. ಆದರೆ ಸುರಪುರದಲ್ಲಿ ಮಾತ್ರ, ಹಾಗಿದ್ದಿತು. ಪ್ರಸಂಗ ಮೈಮೇಲೆ ಬಂದರೆ, ನಿಜಾಮನ ಬೆಂಬಲವು ತನಗಿದೆಯೆಂದು ರಾಜನು ಭರವಸೆಯನ್ನು ತಾಳಿದ್ದನು. ನಿಜಾಮನ ರಾಜ್ಯದಿಂದಲೇ ಅಲ್ಲವೇ ಅರಬ, ರೋಹಿಲ, ಮುಸಲ್ಮಾನರು ತನ್ನ ಸೈನ್ಯವನ್ನು ಸೇರಿದ್ದುದು. ಇದರಿಂದಾಗಿ ಅವನ ವೆಚ್ಚ ಸಾಲಗಳು ಹೆಚ್ಚಿದವು. ತಪ್ಪೇನಿದೆ, ಬ್ರಿಟಿಶರು ಸೋತು ತಳ ಕಿತ್ತರೆ, ಒಂದು ಕಾಲದಲ್ಲಿ ಸುರಪುರದ ಅಂಕಿತದಲ್ಲಿದ್ದು ಈಗ ಬ್ರಿಟಿಶರು ಆಳುವ ಭಾಗವೂ ತನ್ನ ರಾಜ್ಯಕ್ಕೆ ಸೇರುವುದಲ್ಲವೇ ? ಈ ರಾಜ್ಯ ವಿಸ್ತಾರದ ಕಲ್ಪನೆಯೂ ಅವನಲ್ಲಿದ್ದಿತು.

ಮುಂಬಯಿ ಮತ್ತು ಹೈದರಾಬಾದಗಳಲ್ಲಿ ಕುಳಿತು, ಅಧಿಕಾರಿಗಳು ದಕ್ಷಿಣ ಭಾರತವನ್ನು ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿದ್ದರು. ದಂಗೆಯ, ಅದರ ಸಿದ್ಧತೆಯ ಲಕ್ಷಣಗಳನ್ನು ಕಂಡಕೂಡಲೇ ಅದನ್ನು ಮೂಲದಲ್ಲಿಯೇ ಚಿವುಟಿಬಿಡಬೇಕೆನ್ನುವುದು ಅವರ ಧೋರಣೆಯಾಗಿದ್ದಿತು. ಬೆಳಗಾವಿಯ ಸೈನ್ಯಠಾಣೆಯಲ್ಲಿ ಏಳಬಹುದಾದ ದಂಗೆಯನ್ನು ಮೂಲದಲ್ಲಿಯೆ ತಡೆದರು. ಕೊಲ್ಹಾಪುರ, ಮುಂಬಯಿಗಳಲ್ಲಿಯೂ ಇದೇ ಹಾಡು ಆಯಿತು. ಸುರಪುರದಲ್ಲಿ ಸೈನ್ಯ ಭರತಿ ಪ್ರಾರಂಭವಾದಾಗ ಬ್ರಿಟಿಶ ಸರಕಾರವು ಸುಮ್ಮನೆ ಕುಳಿತಿರುವುದು ಸಾಧ್ಯವಿರಲಿಲ್ಲ. ಸುರಪುರದ ಬೇಡರು ದಂಗೆಯೆದ್ದರೆ ದೊಡ್ಡ ಪ್ರಮಾಣದಲ್ಲಿ ಎದುರಿಸಬೇಕಾಗುವುದೆಂದು ಬಗೆದು ಮೂರು ಕಡೆಗಳಿಂದ ಸುರಪುರದತ್ತ ಸೈನ್ಯವನ್ನು ಕಳಿಸಲಾಯಿತು.

ಲೆ. ಕ. ಮಾಲ್ಕಮನು ಮುಂಬಯಿಯಿಂದ ಖಾಸ ಬ್ರಿಟಿಶ ಸೈನಿಕರು, ಮರಾಠಾ ಕುದುರೆಯ ಪದಾತಿಗಳು, ಹಾಗೂ ಮದ್ದು ಗುಂಡು ತೋಫುಗಳೊಡನೆ ಹೊರಟನು. ಮತ್ತು ಸುರಪುರ, ಸಾತಾರಾಗಳ ನಡುವೆ ತಳವೂರಿದನು. ಮದ್ರಾಸಿನಿಂದ ಕರ್ನಲ್ ಹ್ಯೂಸ್ ಕೈಕೆಳಗೆ ಇಂಥದೇ ಸೈನ್ಯವು ಹೊರಹೊರಟು ಸುರಪುರದ ಪೂರ್ವ ಗಡಿಯನ್ನು ತಲುಪಿತು. ಹೈದರಾಬಾದಿನಲ್ಲಿದ್ದ ಡೇವಿಡ್‌ಸನ್ನನು, ತನ್ನಲ್ಲಿಂದ ೪೦೦ ಜನರನ್ನೂ ಎರಡು ತೋಫುಗಳನ್ನೂ ಕ್ಯಾಪ್ಟನ್ ವಿಂಡ್-ಹ್ಯಾಮನ ಮುಖಾಂತರ ಕಳಿಸಿಕೊಟ್ಟನು. ವಿಂಡ್‌ಹ್ಯಾಮನು ಸುರಪುರಕ್ಕೆ ತೀರ ಹತ್ತಿರವಿದ್ದ ಲಿಂಗಸೂರಿಗೆ ಬಂದು ತಳವೂರಿದನು.

ಆದರೂ ಬ್ರಿಟಿಶರಿಗೆ ದಕ್ಷಿಣದಲ್ಲಿ ಪ್ರತ್ಯಕ್ಷ ಯುದ್ಧವು ಬೇಡವಾಗಿದ್ದಿತು. ಒಮ್ಮೆ ಯುದ್ಧದ ಕಿಡಿ ಹಬ್ಬಿತೆಂದರೆ, ಅದು ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಬೇಗೆಯಂತೆ ಹತ್ತಿಕೊಳ್ಳುವುದೆಂಬದನ್ನು ಅವರು ಉತ್ತರ ಹಿಂದುಸ್ತಾನದಲ್ಲಿ ಮನಗಂಡಿದ್ದರು. ಆದ ಕಾರಣ ಹೈದರಾಬಾದಿನಿಂದ ಕ್ಯಾಪ್ಟನ್ ಕ್ಯಾಂಪ್‌ಬೆಲ್ ಎಂಬವನನ್ನು ಸುರಪುರಕ್ಕೆ ಸಂಧಿವಿಗ್ರಹಕ್ಕಾಗಿ ಕಳಿಸಿಕೊಡಲಾಯಿತು. ರಾಜನು ಚಿಕ್ಕವನೂ ಬ್ರಿಟಿಶ ನೆರಳಿನಲ್ಲಿ ಬೆಳೆದವನೂ ಎಂಬ ಭಾವನೆ ಇದ್ದಿತು. ಆದರೆ ರಾಜನಿಗೆ ಇಷ್ಟು ಮುಂದೆ ಬಂದ ಮೇಲೆ, ಕ್ರಾಂತಿ ಪಥದಿಂದ ಹಿಂದೆ ಹೋಗುವುದು ಸಾಧ್ಯವೇ ಇರಲಿಲ್ಲ. ಕ್ಯಾಂಪ್‌ಬೆಲ್‌ನು ರಾಜನ ಸಂದರ್ಶನವನ್ನು ಪಡೆಯತೊಡಗಿದಾಗ ಕ್ರಾಂತಿದೂತರು ರಾಜನನ್ನು ಎಚ್ಚರಿಸಿದರು. ಕ್ಯಾಂಪ್‌ಬೆಲ್‌ನನ್ನು ಕೊಲೆಗೈಯಬೇಕೆಂದೂ ಪ್ರಯತ್ನಗಳು ನಡೆದವು. ಇದು ಮಾತ್ರ ರಾಜನಿಗೆ ಸರಿಬೀಳಲಿಲ್ಲ ಹಾಗಾಗಿ ತನ್ನ ಆಪ್ತ ಸೇವಕರ ಮುಖಾಂತರ, ಕ್ಯಾಂಪ್‌ಬೆಲ್ಲನಿಗೆ ಅವನ ಜೀವವು ಗಂಡಾಂತರದಲ್ಲಿದೆಯೆಂಬ ಮುನ್ಸೂಚನೆಯನ್ನು ಕಳುಹಿದನು.

ತಪ್ಪಿಸಿಕೊಂಡು ಓಡಿಬಂದ ಕ್ಯಾಂಪ್‌ಬೆಲ್ಲನು ಲಿಂಗಸೂರಿಗೆ ಬಂದು ವಿಂಡ್‌ಹ್ಯಾಮನನ್ನು ಸುರಪುರದತ್ತ ಕಳಿಸಿಕೊಟ್ಟನು. ರಾಜನಲ್ಲಿ ಪೂರ್ಣ ಸಿದ್ಧತೆ ಇಲ್ಲವೆಂದರೂ ನಗರದಲ್ಲಿ ಬಂಡಾಯದ ಕಾವು ಉಗ್ರವಾಗಿದ್ದುದನ್ನು ಅವನು ಅರಿತುಕೊಂಡಿದ್ದನು. ೭-೨-೧೮೫೮ ರಲ್ಲಿ ವಿಂಡ್‌ಹ್ಯಾಮ್ ತನ್ನ ಚಿಕ್ಕದಾದರೂ ಸುಸಜ್ಜಿತ ಸೈನ್ಯದೊಡನೆ ಸುರಪುರದ ಹತ್ತಿರಕ್ಕೆ ಬಂದನು. ಪದ್ಧತಿಯಂತೆ ರಾಜನು ಇಂಥದೊಂದು ಸ್ಥಳದಲ್ಲಿ ತಂಗಬೇಕೆಂದೂ ತಾನು ಬಂದು ಕಾಣುವುದಾಗಿಯೂ ಹೇಳಿ ಕಳಿಸಿದನು. ಆ ಜಾಗವು ಗುಡ್ಡಗಳ ಬದಿಯ ತಗ್ಗಿನ ಸ್ಥಳವಾಗಿದ್ದು, ಅಲ್ಲಿ ವಿಂಡ್‌ಹ್ಯಾಮನು ಉಳಿದಿದ್ದರೆ ಸುರಪುರದ ದಳವು ಕೆಲವೇ ತಾಸುಗಳಲ್ಲಿ ಅವನನ್ನು ನಿರ್ನಾಮ ಮಾಡಬಹುದಿತ್ತು. ಇದನ್ನರಿತ ವಿಂಡ್‌ಹ್ಯಾಮನು ಈಚೆಯ ಬದಿಯ ವಿಶಾಲ ಬಯಲಿನಲ್ಲಿ ತಳ




A Perfect non-oily Foundation Cream


Also Other Beauty - Aids

FOR FREE ADVICE ON BEAUTY PROBLEMS CONSULT:
SALONE di BELLEZZA
9, Hampton Court, Near Colaba Bus-stop, Bombay 5.
Sole Distributors for MYSORE & MADRAS STATES:
C. R. & BROS.,
AVENUE ROAD, BANGALORE 2.
MPL - E3

ವೂರಿದನು.

ಆ ರಾತ್ರಿ ರಾಜನ ಐದು ಸಾವಿರ ಕಚ್ಚಾ ಸೈನಿಕರ ಪಡೆಯು ಸುರಪುರದಿಂದ ಹೊರಬಿದ್ದು ವಿಂಡ್‌ಹ್ಯಾಮನ ದಳವನ್ನು ಎದುರಿಸಿತು. ಅದಕ್ಕೆ ಸಿದ್ಧವಾಗಿಯೇ ಇದ್ದ ವಿಂಡ್‌ಹ್ಯಾಮನು ತೋಫುಗಳನ್ನೆದುರಿಗೆ ಇಟ್ಟುಕೊಂಡು ಮದ್ದಿನ ಹೊಗೆಯನ್ನೇ ಹರಡಿದನು. ರಾತ್ರಿ ಒಂದು ಗಂಟೆಯ ಸುಮಾರಿಗೆ ಹೈದರಾಬಾದಿನಿಂದ ಹೊರಟಿದ್ದ ನೂರು ಜನರ ಒಂದು ಚಿಕ್ಕ ಪಡೆಯು ಬಂದು ವಿಂಡ್‌ಹ್ಯಾಮನನ್ನು ಕೂಡಿಕೊಂಡಿತು.

ರಾಜಾ ವೆಂಕಟನಾಯಕನು ಕೋಟೆಯ ಒಂದು ಬುರುಜಿನ ಮೇಲೆ ನಿಂತುಕೊಂಡು, ಬ್ರಿಟಿಶರ ತೋಫುಗಳ ಉರಿಯ ಬೆಳಕಿನಲ್ಲಿ ಯುದ್ಧವನ್ನು ವೀಕ್ಷಿಸುತ್ತಿದ್ದನು. ಅವನ ಬಳಿಯಲ್ಲಿದ್ದ ಹಸ್ತಕರು, ವಿಂಡಾಹ್ಯಾಮನ ಸೈನ್ಯವು ಸೋತು ದಿಕ್ಕುಪಾಲಾಯಿತು! ಎಂದೆಲ್ಲ ಹೇಳುತ್ತಿದ್ದರು. ವಿಂಡ್‌ಹ್ಯಾಮನ ಪಡೆಗೆ ಪೆಟ್ಟು ತಗಲಿದರೂ ಗಾಯಗೊಂಡವರನ್ನು ಉಪಚರಿಸಲಿಕ್ಕೆ ಡಾಕ್ಟರರೊಬ್ಬರು ಸಿದರೇ ಇದ್ದರು. ಬೆಳಗಿನ ವೇಳೆಗೆ ಮದ್ರಾಸಿನಿಂದ ಮೇಜರ ಹ್ಯೂಸನು ತನ್ನ ದಳದೊಂದಿಗೆ ವಿಂಡ್‌ಹ್ಯಾಮನನ್ನು ಕೂಡಿಕೊಂಡಾಗ, ಸುರಪುರದ ಸೈನ್ಯವು ಗುಂಡಿನ ಹೊಡೆತಗಳನ್ನು ತಾಳಲಾರದೇ ಹಿಂದೆಗೆಯತೊಡಗಿತು. ಆದರೂ ಮದ್ರಾಸಿನ ಪಡೆಯ ನ್ಯೂಬೆರಿ ಮತ್ತು ಸ್ಟೀವರ್ಟ ಎಂಬವರು ಕ್ರಾಂತಿಕಾರರ ಹೊಡೆತಕ್ಕೆ ಬಲಿಯಾದರು. ಹೊತ್ತೇರುವುದರೊಳಗಾಗಿ ಸುರಪುರ ಸೈನ್ಯವು ಹಿಂದೆ ಹಿಂದೆ ಸರಿಯುತ್ತ ಸುರಪುರ ಕೋಟೆಯೊಳಗೆ ಪ್ರವೇಶಿಸಿತು.

ಹ್ಯೂಸನೂ ವಿಂಡ್‌ಹ್ಯಾಮನೂ ಸುರಪುರ ಕೋಟೆಯನ್ನು ಮುತ್ತುವ ಬಗ್ಗೆ ಮಾತುಕತೆ

Estd : 1914

ಶ್ರೀ ಕೃಷ್ಣಾ ಮಿಲ್ಸ್ ಕಂಪೆನಿ

P 96 & 96 A    Tel : “ Krishnamils ”

Post Box No. 92

ಅನ್ಸಾರಿ ರೋಡ್, ಬಂದರ

ಮಂಗಳೂರು- ೧



ಪರಿಶುದ್ಧತೆ, ತರಗತಿ, ವಿಶ್ವಾಸಾರ್ಹತೆ ಇವುಗಳಲ್ಲಿ ಸದಾ ತನ್ನ ಪ್ರಥಮಸ್ಥಾನವನ್ನು ಕಾಯ್ದುಕೊಂಡಿರುವ, ತೆಂಗಿನೆಣ್ಣೆ ಹಾಗೂ ಎಳ್ಳೆಣ್ಣೆಗಳಿಗೆ ಪ್ರಸಿದ್ಧವಾದ ಸಂಸ್ಥೆ.

SADHANA

ನಡೆಸಿದರು. ಕೋಟೆಯು ಅತಿ ಭದ್ರವಾದುದರಿಂದ ತಕ್ಕ ಸಿದ್ಧತೆಯಿಲ್ಲದೇ ಹಾಗೆ ಮಾಡುವುದು ಸರಿಯಲ್ಲವೆಂದು ನಿರ್ಧರಿಸಿದರು. ಆದರೆ ಸ್ವಲ್ಪ ವೇಳೆಯಲ್ಲಿಯೇ ಸಾತಾರಾ ಕಡೆಯಿಂದ ವಿಶೇಷ ಸೈನ್ಯದೊಡನೆ ಕರ್ನಲ್ ಮಾಲ್ಕಮ್ಮನು ಸಂಜೆಯೊಳಗಾಗಿ ಬರುವನೆಂಬುದು ತಿಳಿದುಬಂದಿತು. ಅವನು ಬರುವ ತನಕ ಕಾಯ್ದರಾಯಿತು, ಆ ತನಕ ತಮ್ಮ ಜನರಿಗೆ ವಿಶ್ರಾಂತಿಯೂ ದೊರೆಯುವುದೆಂದು ಭಾವಿಸಿದರು.

ಇತ್ತ ರಾಜನಿಗೆ, ತನ್ನ ಸೈನ್ಯದಲ್ಲಿಯ ವಿಶ್ವಾಸವು ಹಾರಿಹೋಗಿದ್ದಿತು. ಐನೂರು ಜನರ ಸೈನ್ಯವನ್ನು ತನ್ನ ಕಡೆಯ ಐದು ಸಾವಿರ ಜನರು ಎದುರಿಸದೇ ಅದೂ ಕೆಲವೇ ತಾಸುಗಳಲ್ಲಿ ಸೋತು ಹಿಂದಿರುಗುವುದು ಅತ್ಯಂತ ಅಪಮಾನಾಸ್ಪದವಾಗಿ ಕಂಡು ಅವನು ಧೈರ್ಯಗೆಟ್ಟನು. ಕರ್ನಲ್ ಮಾಲ್ಕಮನು ಹೊರಟು ಬಂದಿರುವ ವಿಷಯ ಅವನಿಗೂ ತಿಳಿದಿತ್ತು. ತೀರ ಹತ್ತಿರ ಬಂದನೆಂದು ತಿಳಿದೊಡನೆಯೇ ರಾಜನು ಹತಾಶನಾಗಿ ಕೂಡಲೇ ತನ್ನ ಹಿರಿಯ ರಾಣಿ ರಂಗಮ್ಮನ ಬಳಿ ಹೋದನು. ಮುಂದೇನು ಮಾಡುವುದು ಎಂದು ಇಬ್ಬರೂ ಯೋಚಿಸಿದರು. ಈ ರಾತ್ರಿ ನೀವೆಲ್ಲ ನಲದುರ್ಗಕ್ಕೆ ಹೋಗಿರಿ, ಅಲ್ಲಿ ಮೆಡೋಸ್ ಟೇಲರ್ ಇದ್ದಾರೆ ಎಂದು ಆಕೆಗೆ ತಿಳಿಸಿದನು.

"ನೀವೇನು ಮಾಡುತ್ತೀರಿ? ನೀವೂ ನಮ್ಮ ಜೊತೆಗೆ ಬನ್ನಿರಿ" ಎಂದು ಗಂಡನ ಸುರಕ್ಷಿತತೆಯ ಬಗ್ಗೆ ಚಿಂತಾಕುಲಿತಳಾದ ರಾಣಿ ಹೇಳಿದಳು. ೧೭ ವರ್ಷದ ಆ ಬಾಲಿಕೆಯ ಮೇಲೆ ಇಂದು ದೊಡ್ಡ ಜವಾಬುದಾರಿಯು ಬಿದ್ದಿತ್ತು.

ಮೊದಲು ರಾಜನು ನಲದುರ್ಗಕ್ಕೆ ಹೋಗಿ, 'ಅಪ್ಪಾ' ನನ್ನು ಭೆಟ್ಟಿಯಾಗಿ ಮುಂದಿನದನ್ನು ಯೋಚಿಸಿಬೇಕೆಂದು ನಿರ್ಧರಿಸಿದನು.

ರಾಜಧಾನಿಯಲ್ಲಿ ಎಲ್ಲೆಲ್ಲಿಯೂ ಗದ್ದಲ, ಅವ್ಯವಸ್ಥೆ ತುಂಬಿದ್ದಿತು. ರಾಜನ ಕಡೆಗೆ ಅನೇಕರು ಬಂದು ಕಾಡತೊಡಗಿದರು. ವೆಂಕಟನಾಯಕನಿಗೆ ಯಾವುದೂ ಬೇಡವಾಗಿತ್ತು. ಕೋಟೆಯನ್ನು ರಕ್ಷಿಸಿಕೊಳ್ಳಿರೆಂದು ತನ್ನ ಕೈಕೆಳಗಿನ ದಳಪತಿಗಳಿಗೆ ತಿಳಿಸಿದನು. ತಾನು ೧೫-೨೦ ಜನ ನಂಬಿಗೆಯ ಜನರನ್ನು ಕರೆದುಕೊಂಡು, ಒಂದೆರಡು ದಿನಗಳಲ್ಲಿ ಮರಳಿ ಬರುವೆನೆಂದು ರಾಣಿಗೆ ಸಮಾಧಾನ ಹೇಳಿ ನಡುರಾತ್ರಿಯಲ್ಲಿ ಹೊರಟನು.

ಗುಪ್ತ ಮಾರ್ಗದಿಂದ ಹೊರಬಿದ್ದು ಬೆಳಗಿನಲ್ಲಿ ನಲದುರ್ಗ ಸೀಮೆಯ ಗಡಿಯನ್ನು ಸಮೀಪಿಸಿದಾಗ ರಾಜನಿಗೆ ಗೊತ್ತಾಯಿತು, ಟೇಲರನು ನಲದುರ್ಗವನ್ನು ಬಿಟ್ಟು ಬೀದರಕ್ಕೆ ಹೋಗಿದ್ದಾನೆಂದು. ರಾಜನಿಗೆ ದಿಕ್ಕೇ ತೋಚಲಿಲ್ಲ. ಎಲ್ಲಿಗೆ ಹೋಗಬೇಕು? ಸುರಪುರವನ್ನು, ತನ್ನ ರಾಣೀವಾಸದವರನ್ನು ಬಿಟ್ಟುಕೊಡುವುದೇ? ವೈರಿಗಳು ಸುರಪುರದಲ್ಲಿ ನುಗ್ಗಿ ಕೊಳ್ಳೆ ಹೊಡೆಯುವುದು ಖಂಡಿತ. ಮರಳಿ ಸುರಪುರಕ್ಕೆ ಹೋಗಿ ಜೀವ ಕೊಡಲೇ? ಅವನು ಅತ್ಯಂತ ಹತಾಶನಾಗಿದ್ದನು. ತನಗೆ ಕೆಲ ಕಾಲ ಆಶ್ರಯವೆಲ್ಲಿಯಾದರೂ ಸಿಗುವಂತಿದ್ದರೆ ಅದು ಹೈದರಾಬಾದಿನಲ್ಲಿ ಎಂದೆನಿಸಿತು. ಅಲ್ಲಿ ಕ್ರಾಂತಿಕಾರರ ಗುಪ್ತ ಚಟುವಟಿಕೆಗಳು ನಡೆದಿದ್ದುದು ತಿಳಿದೇ ಇದ್ದಿತು. ಅಲ್ಲಿಂದಲೇ ಅರಬ್ಬೀ, ರೋಹಿಲ ಹಾಗು ಪಠಾಣರು ಬಂದು ತನ್ನ ಸೈನ್ಯದಲ್ಲಿ ಸೇರಿದ್ದರು. ಇವರಿಗೆಲ್ಲ ಹೈದರಾಬಾದದ ಮಂತ್ರಿ ಸಾಲಾರಜಂಗನ ಆಂತರಿಕ ಬೆಂಬಲವೂ ಇದೆಯೆಂದು ಅವನಿಗೆ ತಿಳಿಸಿದ್ದರು. ಹಾಗಾಗಿ ನಾಲ್ಕೈದು ಜನರೊಡನೆ ಮಾತ್ರ ಅವನು ಹೈದರಾಬಾದಿಗೆ ಹೊರಟನು.

ಇತ್ತ ನಡುರಾತ್ರಿಯಲ್ಲಿ ರಾಜನು ನಗರವನ್ನು ಬಿಟ್ಟು ಹೊರಟಿದ್ದಾನೆಂದು ತಿಳಿದು, ಸೈನಿಕರು ಯಥಾಪ್ರಕಾರ ಕಂಗೆಟ್ಟರು. ಹೀಗೆ ಮಾಡಬೇಕು ಹೀಗೆ ಮಾಡಬಾರದು ಎಂದು ಹೇಳುವವರೇ ಇರಲಿಲ್ಲ. ಹೆದರಿದ ಬೇಡರು ಬೆಳಗಾಗುವುದರೊಳಗಾಗಿ ನಗರವನ್ನು ತ್ಯಜಿಸಿ ಬಳಿಯ-



# ಅಶ್ವತ್ಥ ಮರದ ನೆರಳಲ್ಲಿ....

ಪ್ರತಿ ದಿನದ ಕೆಲಸ ಮುಗಿದ ಮೇಲೆ, ಭಾರತದ ಹಳ್ಳಿಗರು ಹೆಚ್ಚಾಗಿ ಹಳ್ಳಿಯ ಒಂದು ಅಶ್ವತ್ಥದ ಮರದಡಿಯಲ್ಲಿ ಎಲ್ಲರೂ ಒಟ್ಟು ಕೂಡಿ ಹರಟೆ ಹೊಡೆಯುವುದು ಅವರ ಸಂಪ್ರದಾಯವಾಗಿರುವುದು. ಇಂದು ಅವರ ನಡುವೆ ಡ್ರೈಸೆಲ್ ಬ್ಯಾಟರಿಯಿಂದ ಚಲಿಸುವ ರೇಡಿಯೋಗಳನ್ನು ಕಾಣುತ್ತೇವೆ. ಇಂತಹ ರೇಡಿಯೋಗಳಿಂದ ಅವರು ವರ್ತಮಾನಗಳನ್ನೂ ಮತ್ತು ಸುಮಧುರ ಸಂಗೀತಗಳನ್ನು ಪಡೆದು ಆನಂದಿಸುವುದು ಒಂದು ಸಾಮಾನ್ಯ ದೃಶ್ಯವಾಗಿ ಇಂದು ಪರಿಗಣಿಸಲ್ಪಟ್ಟಿರುತ್ತದೆ.

ಇಂದು ಭಾರತೀಯ ಹಳ್ಳಿಗನು ಸಂಗೀತದ ಬಗ್ಗೆ ಮತ್ತು ಅದನ್ನು ಒದಗಿಸುವ ಸಾಧನಗಳ ಬಗ್ಗೆ ಅಧಿಕ ಗಮನವನ್ನೀಯುತ್ತಿದ್ದಾನೆ. ಇದರ ಪರಿಣಾಮವಾಗಿ ಆತನ ರೇಡಿಯೋ ಉತ್ತಮವಾಗಿ ಚಲಿಸಲು ಎಸ್ಟ್ರೆಲಾ ರೇಡಿಯೋ ಬ್ಯಾಟರಿಗಳನ್ನೇ ಉಪಯೋಗಿಸುತ್ತಿದ್ದಾನೆ. ದೀರ್ಘಕಾಲ ಬಾಳುವಂತೆ ತಯಾರಿಸಲ್ಪಟ್ಟ ಈ ಬ್ಯಾಟರಿ, ಡ್ರೈಸೆಲ್ ಬ್ಯಾಟರಿಯ ತಯಾರಿಕೆಯಲ್ಲಿ 20 ವರ್ಷಗಳ ಅಗಾಧ ಅನುಭವದ ಉತ್ಪಾದನೆಯಾಗಿರುತ್ತದೆ. ಎಸ್ಟ್ರೆಲಾ ಬ್ಯಾಟರಿಗಳು ಪ್ರಖ್ಯಾತವಾದ ಅಂತರರಾಷ್ಟ್ರೀಯ ಪ್ರಮಾಣಕ್ಕೆ ತಕ್ಕಂತೆ ತಯಾರಿಸಲ್ಪಟ್ಟು ಪರೀಕ್ಷಿಸಿ ಸಿದ್ಧಗೊಳಿಸಲ್ಪಟ್ಟಿವೆ. ಇಂದೇ ನಿಮ್ಮ ರೇಡಿಯೋಗೆ ಎಸ್ಟ್ರೆಲಾ ಬ್ಯಾಟರಿಯನ್ನು ಜೋಡಿಸಿರಿ ನೀವು ಬಯಸುವ ಎಲ್ಲಾ ಗುಣಗಳು ಇವಲ್ಲಿ ಕೂಡಿವೆ.

**ಎಸ್ಟ್ರೆಲಾ**

ರೇಡಿಯೋ ಬ್ಯಾಟರಿ

ನಿಮ್ಮ ರೇಡಿಯೋ ವ್ಯಾಪಾರಿಯಲ್ಲೀಗ ದೊರೆಯುತ್ತದೆ




**ಎಸ್ಟ್ರೆಲಾ ಬ್ಯಾಟರೀಸ್ ಲಿಮಿಟೆಡ್.**

ಬೊಂಬಾಯಿ • ಮದ್ರಾಸ್ • ದಿಲ್ಲಿ • ಕಲ್ಕತ್ತ • ಕಾನ್‌ಪೂರ್

ಲ್ಲಿಯ ಗುಡ್ಡದ ಪ್ರದೇಶಗಳಿಗೆ ಓಡಿದರು. ಹೊರಗಿನಿಂದ ಬಂದಿದ್ದ ಅರಬ ರೋಹಿಲರು ಸಿಕ್ಕಷ್ಟು ದೋಚಿಕೊಳ್ಳುವ ಎತ್ತುಗಡೆಯಲ್ಲಿದ್ದರು. ತುಸು ಹೊತಿನಲ್ಲಿ ಆಂಗ್ಲರು ನಗರವನ್ನು ಪ್ರವೇಶಿಸುವರೆಂದು ತಿಳಿದು ಹೌಹಾರಿದ ರಾಣಿವಾಸದವರು ನಲದುರ್ಗದತ್ತ ಸಾಗಿದರು.

ಕರ್ನಲ್ ಮಾಲ್ಕಮ್ಮನು ಯಾವ ತೊಂದರೆಯೂ ಇಲ್ಲದೇ ಮರುದಿನ ಬೆಳಿಗ್ಗೆ ಸುರಪುರವನ್ನು ಪ್ರವೇಶಿಸಿದನು. ಯಾರು ಗೆದ್ದರೇನು, ಯಾರು ಸೋತರೇನು, ಎಂಬಂತಿದ್ದ ನಗರದ ಜನತೆಯು ಅವರಿಗೆ ವಿಧೇಯವಾಗಿ ನಡೆದುಕೊಂಡಿತು. ಕ್ಯಾಂಪ್‌ಬೆಲ್ಲನು ಸುರಪುರದ ಆಡಳಿತವನ್ನು ತಾತ್ಪೂರ್ತಿಕವಾಗಿ ವಹಿಸಿಕೊಂಡನು.

ರಾಜಾ ವೆಂಕಟನಾಯಕನು ಕ್ರಾಂತಿಕಾರರ ಗುಪ್ತ ಸ್ಥಳಗಳನ್ನು ಅರಸುತ್ತ ಸಂದಿ ಮೊಹಲ್ಲಾಗಳಲ್ಲಿ ಸಂಚರಿಸುತ್ತಿದ್ದನು. ಎರಡು ಮೂರು ದಿನ ಅವನಿಗೆ ಆಶಾದಾಯಕವಾದುದೇನೂ ಕಾಣಲಿಲ್ಲ. ಪೇಟೆಯಲ್ಲಿ ಏಕಾಕಿಯಾಗಿ ಒಂದು ದಿನ ತಿರುಗಾಡುತ್ತಿದ್ದಾಗ ಸಾಲಾರ್ ಜಂಗನ ಗೂಢಚಾರರ ಕಣ್ಣಿಗೆ ಬಿದ್ದನು. ಅವನ ಪೂರ್ವಾಪರವನ್ನು ತಿಳಿಯುವುದು ಕಠಿನವಾಗಲಿಲ್ಲ. ಕೂಡಲೇ ಅವನನ್ನು ಬಂಧಿಸಿ ಸಾಲಾರ ಜಂಗನ ಕಡೆಗೆ ಒಯ್ದರು. ಆ ಮಂತ್ರಿವರ್ಯನು ರಾಜನ ಕಡೆಗೆ ಕಣ್ಣೆತ್ತಿ ನೋಡದೇ ಅವನನ್ನು ಹೈದರಾಬಾದ ರೆಸಿಡೆಂಟನ ಕಡೆಗೆ, ಕಾಗದ ಬರೆದು, ಬೇಡಿ ಹಾಕಿ ಕಳಿಸಿಕೊಟನು. ಇತರ ಕ್ರಾಂತಿಕಾರರೊಡನೆ ಸಿಕಂದರಾಬಾದಿನ ಜೇಲಿನಲ್ಲಿ ರಾಜಾ ವೆಂಕಟನಾಯಕನು ಬಂಧಿತನಾದನು.

ರಾಜನ ಭವಿತವ್ಯದ ಬಗ್ಗೆ ಆತುರನಾಗಿದ್ದ ಮೆಡೋಸ್ ಟೇಲರನು, ರೆಸಿಡೆಂಟನಿಂದ ಕರೆ ಹೋಗುತ್ತಲೂ ಸಿಕಂದರಾಬಾದಿಗೆ ಧಾವಿಸಿದನು. 'ಅಪ್ಪಾ' ತನ್ನನ್ನು ಭೆಟ್ಟಿಯಾಗಬಹುದೆಂಬ ದೂರದ ನಿರೀಕ್ಷೆ ಇದ್ದರೂ ವೆಂಕಟನಾಯಕನಿಗೆ ಅದು ಇಷ್ಟು ಬೇಗ ಘಟಿಸುವುದೆಂದು ಅನಿಸಿರಲಿಲ್ಲ.

ಅವನನ್ನು ಕಂಡೊಡನೆಯೇ, ವೆಂಕಟನಾಯಕನು ಅಪ್ಪಿಕೊಂಡು ತೆಕ್ಕೆಬಿದ್ದನು. ಆತ್ಮೀಯ ಹಿತಚಿಂತಕನೊಬ್ಬ ಭೆಟ್ಟಿಯಾದಾಗ ದುಃಖವು ಹೊರಹೊಮ್ಮಿ ಮನಸ್ಸು ಹಗುರಾಗಲಿಕ್ಕೆ ಪ್ರಯತ್ನಿಸುತ್ತದೆ.

"ಅಪ್ಪಾ, ಅಂತೂ ನೀವು ಬಂದಿರಿ! ಏನೆಲ್ಲ ಆಗಿ ಹೋಯಿತಲ್ಲ! ನನ್ನದೆಲ್ಲ ಮುಗಿದುಹೋಯಿತೆನ್ನು. ಆ ಮುಂಚೆ ನಿಮ್ಮನ್ನು ಕಾಣಬೇಕೆಂದಿತ್ತು, ಅಷ್ಟಾಯಿತು."

"ಹೀಗೇಕಾಯಿತು? ಒಂದಿಷ್ಟು ಯೋಚಿಸಬಾರದಿತ್ತೆ? ಆದದ್ದಾದರೂ ಏನು?" ಎಂದು ಟೇಲರ್ ವಿಚಾರಿಸಿದನು.

"ಅಪ್ಪಾ, ನಾನೀಗ ಏನೂ ಹೇಳಲಾರೆ. ಭಾವನೆಗಳು ಉಕ್ಕಿಬಂದ ಈ ಸಮಯದಲ್ಲಿ ಬೇಡ. ನಿಮ್ಮ ಭೆಟ್ಟಿಯಾಯಿತು. ಅಷ್ಟು ಸಾಕು. ನಾಳೆ ಬನ್ನಿರಿ. ನಿಮಗೆ ತುಂಬಾ ವಿಷಯ ಹೇಳುವುದಿದೆ. ಅದಕ್ಕಾಗಿಯೇ ನಲದುರ್ಗಕ್ಕೆ ಹೊರಟೆ. ಆದರೆ ಅಲ್ಲಿಂದ ನಿಮಗೆ ವರ್ಗವಾಗಿ ಬಹಳ ದಿನಗಳಾಗಿದ್ದರೂ ನನಗೆ ಗೊತ್ತೇ ಇರಲಿಲ್ಲ. ನಮ್ಮ ನಿಮ್ಮ ಸಂಪರ್ಕವೇ ಇಲ್ಲ ಈಚೆಗೆ. ನಾಳೆ ಬನ್ನಿರಿ ಅಪ್ಪಾ, ನಿಮಗೆ ಎಲ್ಲವನ್ನೂ ಹೇಳುತ್ತೇನೆ."

ಟೇಲರನ ಅಂತಃಕರಣವೂ ಕಲಮಲಗೊಂಡಿತ್ತು. ಹೊರಗಿದ್ದ ಜೇಲರರಿಗೂ ಈ ದೃಶ್ಯ ಕಣ್ಣಲ್ಲಿ ನೀರು ತರಿಸಿದ್ದಿತು. ಟೇಲರನು ಹೊರಗೆ ಬಂದಾಗ ಮುಖ್ಯ ಜೇಲರನು ಹೇಳಿದ, "ಸರ್, ನಿಮ್ಮನ್ನು ಅವರು ಬಹಳ ಹಚ್ಚಿಕೊಂಡಂತೆ ಕಾಣುತ್ತದೆ. ತುಂಬಾ ನಿಮ್ಮ ನೆನಪು ತೆಗೆಯುತ್ತಿದ್ದರು. ನೀವೆಲ್ಲಿ ಇದ್ದೀರಿ ಎಂದು ವಿಚಾರಿಸುತ್ತಿದ್ದರು."

ಮರುದಿನ ಟೇಲರ ಮತ್ತೆ ಬಂದನು. ಬಂಡೇಳಲು ರಾಜನಿಗೆ ಯಾರು ಪ್ರಚೋದನೆ ಕೊಟ್ಟರು ಎಂಬುದನ್ನು ತಿಳಿಯುವುದಕ್ಕಾಗಿಯೇ ಟೇಲರ

ನಿಗೆ ರೆಸಿಡೆಂಟನು ಆದೇಶವನ್ನಿತ್ತಿದ್ದನು. ಸುರಪುರದ ಕತೆಯಂತೂ ಮಗಿದುಹೋಗಿತ್ತು. ದಕ್ಷಿಣ ಭಾರತದಲ್ಲಿ ಇನ್ನೆಲ್ಲಿಯಾದರೂ ಕ್ರಾಂತಿಯ ಒಳಗುದಿಗಳಿದ್ದರೆ ಅವನ್ನು ಸದೆಬಡಿಯುವುದೇ ಅವರ ಉದ್ದೇಶವಾಗಿತ್ತು.

ಮರುದಿನ ಟೇಲರ್ ಬಂದಾಗ ರಾಜನು ಶಾಂತನಾಗಿದ್ದ. ಧೀರಗಂಭೀರನಾಗಿದ್ದ. ಅವನಿಗೆ ಟೇಲರನ ಮುಂದೆ ಎಲ್ಲ ಸಂಗತಿಯನ್ನು ನಿವೇದಿಸದೇ ಗತ್ಯಂತರವಿರಲಿಲ್ಲ.

"ಅಪ್ಪಾ, ನೀವು ನನ್ನನ್ನೇಕೆ ಬಿಟ್ಟುಹೋದಿರಿ? ಅಂದಿನಿಂದಲೇ ನನ್ನ ಸುಖ, ಶಾಂತಿಗಳು ಹೊರಟುಹೋದುವು. ನನಗೇನೂ ಈಗ ಜೀವದಾಶೆಯಿಲ್ಲ."

"ಹಾಗೇನೂ ಹೇಳಬೇಡಿರಿ. ನೀವು ಬುದ್ಧಿಪೂರ್ವಕ ಈ ವಿಷಯದಲ್ಲಿ ತಪ್ಪು ಮಾಡಿಲ್ಲವೆಂದು ನನಗೆ ಮನವರಿಕೆಯಾಗಿದೆ. ನಿಜ ಸಂಗತಿಯನ್ನು ನೀವು ಹೇಳಿದ್ದಾದರೆ ನಿಮ್ಮನ್ನು ಉಳಿಸುವುದಕ್ಕೆ ಪ್ರಯತ್ನಿಸುತ್ತೇನೆ ಆದರೆ ಈಗಿನ ಕಾವಿನ ವಾತಾವರಣದಲ್ಲಿ ನಿಶ್ಚಿತ ವಚನವನ್ನು ಕೊಡಲಾರೆ."

"ನನಗೆಲ್ಲಿ ಬದುಕುವುದು ಬೇಕಾಗಿದೆ, ಅಪ್ಪಾ? ನಾನು ನಿಜ ಸಂಗತಿಯನ್ನೇ ಹೇಳುತ್ತೇನೆ. ನಿಮ್ಮೆದುರು ಸುಳ್ಳಾಡಲೇ? ಮೊದಲಿಗೆ ನನಗೆ ಇದರಲ್ಲಿ ಭಾಗ ವಹಿಸುವುದು ಎಳ್ಳಷ್ಟೂ ಬೇಕಿರಲಿಲ್ಲ. ಅಪ್ಪಾ, ಉತ್ತರದಲ್ಲಿ ಇಂಗ್ಲೀಷರು ಸೋತಿದ್ದಾರೆ, ಎಂದು ವಾರ್ತೆಗಳು ಕೇಳಬರಹತ್ತಿದವು. ಇಂಗ್ಲಂಡಿಗೆ ಜನರನ್ನು ತುಂಬಿಕೊಂಡು ಹಡಗುಗಳು ಹೊರಡಹತ್ತಿವೆ ಎಂಬ ಸಂದೇಶವನ್ನು ಪುಣೆಯಿಂದ ಜನ ಬಂದು ಹೇಳಿದರು. ನನಗೂ ಅನಿಸಿತು, ನಾನೇಕೆ ಈ ಕ್ರಾಂತಿಕಾರರಿಗೆ ನೆರವಾಗಬಾರದು ಎಂದು. ಆದರೆ ಸುಮ್ಮನೇ ಇದ್ದೆ. ಉತ್ತರದಲ್ಲಿ ನಮ್ಮವರ ಶೌರ್ಯ, ಸಾಹಸ, ಕಷ್ಟನಷ್ಟಗಳ ಕತೆಯನ್ನು ಕೇಳಿ ನನಗೆ ತಡೆಯಲಾಗಲಿಲ್ಲ. ಇಷ್ಟರಲ್ಲಿ ಹೈದರಾಬಾದ, ಪುಣೆಗಳಿಂದ ಕ್ರಾಂತಿದೂತರು ಬರತೊಡಗಿದರು. ಎಲ್ಲ ಕಡೆಗೂ ಸಿದ್ಧತೆ ನಡೆದಿದೆ. ಸುರಪುರದಿಂದ ಮೈಸೂರು ಪ್ರದೇಶದ ವರೆಗೂ ನನ್ನ ರಾಜ್ಯ. ಅತ್ತ ಕಡೆಗೆ ಪುಣೆಯಲ್ಲಿ ಪುನಃ ಮರಾಠಾ-ಶಾಹಿಯ ಸ್ಥಾಪನೆ . . . ಹೀಗೆಲ್ಲ ವಿವರಿಸಿದರು. ಅವರ ಉತ್ಕಟತೆ, ಜೀವದ ಹಂಗುದೊರೆದು ಅವರು ಹೆಣಗುತ್ತಿರುವ ರೀತಿ ನನ್ನ ಮನದಲ್ಲಿ ನಾಟಿದುವು. ಕೊಲ್ಲಾಪುರ, ಪುಣೆ, ಸಾತಾರ, ಮಿರಜ, ನರಗುಂದ ಎಲ್ಲ ಕಡೆಗೂ ರಾಜರು ಬಂಡೇಳುವಾಗ ನಾನು ಸುಮ್ಮನೇ ಕೂಡಲೇ? ನೀವೇ ಹೇಳಿರಿ ಅಪ್ಪಾ.

"ಆದರೆ ಅಪ್ಪಾ, ನನ್ನ ಮೂರ್ಖತನಕ್ಕೆ ಪರ

THE
SADVAIDYASALA
(PRIVATE) LTD
NANJANGUD



ಮಾವಧಿಯಿಲ್ಲ. ನಮ್ಮವರನ್ನು ನಾನು ಬಹಳಷ್ಟು ನಂಬಿದೆ. ಇವರೆಲ್ಲ ಕೈಲಾಗದವರು, ಸ್ವಾರ್ಥಿಗಳು ಎಂದು ತಿಳಿದೂ ನಾನಿವರ ಮೇಲೆ ಬಹಳ ವಿಶ್ವಾಸವಿಟ್ಟೆ. ಎಳೆ ಸಿಕ್ಕರೆ ಹಚ್ಚಡ ನುಂಗುವವರಾಗಿ, ನನ್ನ ಹೆಸರಿನಲ್ಲಿ ಏನೂ ಮಾಡುವುದಕ್ಕೆ ಹಿಂದುಮುಂದೆ ನೋಡಲಿಲ್ಲ. ನನ್ನ ಸುತ್ತುಮುತ್ತಲಿನ ಭಂಡರನ್ನು ನನ್ನ ಹಿಡಿತದಲ್ಲಿಟ್ಟುಕೊಳ್ಳಲಿಕ್ಕಾಗಲಿಲ್ಲ. ಅಪ್ಪಾ, ನೀವು ಬಳಿಯಲ್ಲಿ ಇದ್ದಿದ್ದರೆ ಇವರನ್ನೆಲ್ಲ ಹತೋಟಿಯಲ್ಲಿಡುತ್ತಿದ್ದೆ. ನಿಮಗೆ ಪತ್ರವನ್ನು ಬರೆಯಬೇಕೆಂದರೆ ಸಹಿತ, ಬರೆಯಗೊಡಲಿಲ್ಲ. ಫಿರಂಗಿ ಮನುಷ್ಯನಿಗೆ ಪತ್ರ ಬರೆಯುತ್ತೀರಾ ಎಂದು ನನ್ನ ಮುಖದಮೇಲೆಯೇ ಬೈದಾಡುವ ಸಾಹಸ ಮಾಡಿದರು. ಹೈದರಾಬಾದದ ಅರಬರೂ ರೋಹಿಲರೂ ಇಂಗ್ಲೀಷರ ವಿರುದ್ಧ ಸಿದ್ಧರಾಗಿದ್ದಾರೆ, ಅವರನ್ನು ಕರೆಯಿಸಬೇಕು, ನಮ್ಮ ಬೇಡರಿಗೂ ಅವರಿಗೂ ಸೈನ್ಯ ಶಿಕ್ಷಣ ಕೊಡಬೇಕು ಎಂದರು. ದುಡ್ಡು ಬೇಕಲ್ಲ? ಖಜಾನೆಯಲ್ಲಿ ಇರಲಿಲ್ಲ. ತೆರಪಿಲ್ಲದೇ ಸಾಲವನ್ನೆತ್ತಿದರು ನನ್ನ ಹೆಸರಿನಲ್ಲಿ. ಒಮ್ಮೆ ಕ್ರಾಂತಿಯೇ ಆಗಿ, ಪರಿಸ್ಥಿತಿಯೇ ಬದಲಾಗುವುದಲ್ಲ ಎಂದು ನಾನು ಸುಮ್ಮನಿದ್ದೆ. ನನ್ನ ಮೂರ್ಖತಕ್ಕೆ ಒಂದು ಮಿತಿಯಿಲ್ಲ." ಹೀಗೆಯೇ ರಾಜನು ತನ್ನನ್ನು ಹಳಿದುಕೊಳ್ಳುತ್ತ ನೂರಾರು ಮಾತುಗಳನ್ನು ಹೇಳಿದನು. ಮಾತನಾಡಿಸಲಿಕ್ಕೆಂದು ಟೇಲರನು ಒಂದೆರಡು ದಿನ ಬಿಟ್ಟು ಮತ್ತೆ ಬಂದನು.

"ಕ್ಯಾಂಪ್‌ಬೆಲ್ ಈಗ ಎಲ್ಲಿ ಇದ್ದಾರೆ ಅಪ್ಪಾ? ಒಳ್ಳೆಯ ಮನುಷ್ಯ. ಅವರನ್ನು ಕಂಡಾಗ ನನಗೆ ನಿಮ್ಮದೇ ನೆನಪು ಬಂದಿತ್ತು. ನನ್ನ ಕಡೆಗೆ ಮಾತನಾಡಲಿಕ್ಕೆಂದು ಬಂದಾಗ, ನಾನೇನು ಅವರು ಹೇಳಿದಂತೆ ನಡೆಯುವುದಕ್ಕೆ ಸಿದ್ಧನಾಗುತ್ತಿರಲಿಲ್ಲ. ನನ್ನ ಪರಿವಾರದವರು ಅವರನ್ನು ಕಾಣುವುದರಲ್ಲಿಯೂ ಬೇರೆಯೇ ಅರ್ಥಮಾಡಿಕೊಂಡರು. ನಾನೇ ಎಲ್ಲಿ ತಿರುಗಿಬೀಳುವೆನೊ ಎಂದು ಭಾವಿಸಿ, ಇತರರಲ್ಲಿ ಅಪಪ್ರಚಾರ ಮಾಡತೊಡಗಿದರು. ಯಾವ ಸೈನ್ಯ, ಸರಂಜಾಮು ಇಲ್ಲದೇ ಬಂದಿದ್ದ ಅವನನ್ನು ಕೊಲ್ಲಿಸಬೇಕೆಂದೇ ನಿಂತರು. ಇದು ನನಗೆ ಎಳಷ್ಟೂ ಸಹಿಸಲಿಲ್ಲ. ಅಂತಾಗಿ ನಾನೇ ಗುಪ್ತವಾಗಿ ಹೇಳಿ ಕಳುಹಿದೆ. ಬೇಕಾದರೆ ಅವರನ್ನು ಕೇಳಿರಿ.

"ನಮ್ಮ ಜನಕ್ಕೆ ಬಲು ಅವಸರ. ನನಗಂತೂ ನಮ್ಮ ಸೈನ್ಯದ ಮೇಲೆ ಗೆದ್ದೇನೆಂಬ ಭರವಸೆ ಇದ್ದಿಲ್ಲ. ತುಸು ತಡೆಯೋಣ. ಇತರರ ಹಾದಿ ಕಾಯೋಣ ಎಂದು ನಾನು ಬರಿ ಬಾಯಿಂದ ನುಡಿದರೂ ಸಾಕು, ನಾನೊಬ್ಬ ಅಂಜುಗುಳಿ, ಕೈಲಾಗದವ ಎಂಬುದಾಗಿ ನನಗೆಯೇ ಅನ್ನುವವರಾಗಿದ್ದರು. ಲಿಂಗಸೂರಿಗೆ ಸೈನ್ಯ ಬಂದಿದೆಯೆನ್ನುತ್ತಲೂ ಒಂದೇ ಸವನೆ ದುಂಬಾಲು ಬಿದ್ದರು. ಯುದ್ಧವನ್ನು ಮಾಡಿಯೇ ಬಿಡಬೇಕು! ನೀಚರು ತಾವೂ ಹಾಳಾದರು, ನನ್ನನ್ನೂ ಹಾಳು ಮಾಡಿದರು."

"ಯಾರವರು? ಒಂದಿಷ್ಟು ಹೆಸರು ಹೇಳಬಾರದೆ?"

"ಹೆಸರು ತೆಗೆದುಕೊಂಡು ಏನು ಮಾಡುತ್ತೀರಿ ಅಪ್ಪಾ? ಮುಖ್ಯ ತಪ್ಪು ನನ್ನದು. ಸುಮ್ಮನೆ ಅವರನ್ನೇಕೆ ಸಿಲುಕಿಸಿ ದ್ರೋಹ ಬಗೆಯಲಿ?"

"ಅಲ್ಲ, ಸತ್ಯಸಂಗತಿಯನ್ನು ನೀವು ಹೇಳಿದರೆ ನಿಮ್ಮನ್ನು ಉಳಿಸಬಹುದು."

"ನಾನು ನಿಮಗೆ ಸತ್ಯಸಂಗತಿಯನ್ನೇ ಹೇಳಿದ್ದೇನೆ. ಆದರೆ ಈ ಹೋರಾಟದಲ್ಲಿ ದುಡಿದವರ ಹೆಸರನ್ನು ಮಾತ್ರ ಹೇಳಿ ನನ್ನ ನಾಲಿಗೆಯನ್ನು ಕೆಡಿಸಿಕೊಳ್ಳಲಾರೆ. ಸಾಯುವುದಕ್ಕೆ ಸಿದ್ಧನಾದ ನಾನು ಕೀಳು ಮನುಷ್ಯನಂತೆ, ದ್ರೋಹಿಯಂತೆ ನಡೆದುಕೊಳ್ಳಲೇನು? ಎಂದಿಗೂ ಶಕ್ಯವಿಲ್ಲ."

"ಅಲ್ಲ, ಹೊರಗಿನಿಂದ ಬಂದವರು ಯಾರು ಯಾರು? ಎಲ್ಲಿಯವರು?"

"ಹತ್ತಾರು ಕಡೆಯಿಂದ ಈ ಜನ ಸುರಪುರಕ್ಕೆ ಬರುತ್ತಿದ್ದರು, ಅಪ್ಪಾ. ಅವರ ಆವೇಶ, ಅವರ ಪ್ರಾಮಾಣಿಕತೆಗೆ ಯಾರೂ ತಲೆವಾಗಬೇಕು. ಅವರ ಹೆಸರನ್ನು ಅದು ಹೇಗೆ ನಾನು ಹೇಳಿ

ಯೇನು? ಅಪ್ಪಾ, ಹೇಡಿಯಂತೆ ಅವರ ಹೆಸರನ್ನು, ವಿವರಗಳನ್ನು ನಿಮಗೆ ಹೇಳಿ ನಾನೇನನ್ನು ಸಾಧಿಸಿಕೊಂಡೇನು? ಯಾಕೆ, ಇಂಥ ಬಲಾಢ್ಯ ಸರಕಾರಕ್ಕೆ, ಅವರನ್ನು ಹಿಡಿಯುವುದು ಸಾಧ್ಯವಿಲ್ಲವೇನು? ನೀವು ಅಷ್ಟು ಕೈಲಾಗದವರೇನು? ಇಲ್ಲ, ಅಪ್ಪಾ, ನೀವು ಅದರ ಹೆಸರನ್ನೇ ಎತ್ತಬೇಡಿರಿ."

"ನಿಮ್ಮನ್ನು ಚೆನ್ನಾಗಿ ಬಲ್ಲೆ. ನಾನೂ ಇದಕ್ಕೆ ಒಪ್ಪುತ್ತೇನೆ. ರೆಸಿಡೆಂಟನಿಗೆ ಹಾಗೆಂದು ಹೇಳುವೆ, ನೀವು ರೆಸಿಡೆಂಟರನ್ನು ಭೆಟ್ಟಿಯಾಗುವಿರಾ?"

"ರೆಸಿಡೆಂಟನಿಗೆಯೇ? ಊ.... ಯಾಕೆ? ಬೇಡ. ಭೆಟ್ಟಿಯಾದರೆ, ನಾನು ಜೀವದಾನ ಬೇಡುತ್ತೇನೆಂದು ತಿಳಿದಾನು. ಸಾಯುವುದಕ್ಕೆ ಸಿದ್ಧನೇ ಇದ್ದೇನೆ. ಆದರೆ ಅಂಜುಗುಳಿ ಎನಿಸಿಕೊಳ್ಳುವುದು ಬೇಡ. ಈಗ ಮುಂದೇನಾಗುವುದು, ಅಪ್ಪಾ?"

"ನ್ಯಾಯಮಂಡಳದಲ್ಲಿ ವಿಚಾರಣೆ ನಡೆಸತಕ್ಕವರಿದ್ದಾರೆ. ನಿಮ್ಮ ಮೇಲಿನ ಆರೋಪಗಳ ಪಟ್ಟಿ ಸಿದ್ಧಮಾಡಿದ್ದಾರೆ."

"ನಾನು ಸಾಯುವುದು ಖಂಡಿತ, ಹಾಗಾದರೆ."

"ನೀವು ಬುದ್ಧಿಪೂರ್ವಕವಾಗಿ ಇದನ್ನು ಮಾಡಿಲ್ಲವೆಂಬುದನ್ನು ನಾನು ಬಲ್ಲೆ. ರೆಸಿಡೆಂಟರಿಗೂ ಹಾಗೆ ಹೇಳಿದ್ದೇನೆ. ನೀವು ಈ ಕ್ರಾಂತಿಕಾರರ ಬಗ್ಗೆ ಹೆಚ್ಚಿನ ಮಾಹಿತಿ ಹೇಳಿದ್ದರೆ ಬಿಡುಗಡೆಯ ದಾರಿಯಿತ್ತೇನೊ. ಈ ವಿಷಯದಲ್ಲಿ ಒತ್ತಾಯಪಡಿಸಲಿಚ್ಛಿಸುವುದಿಲ್ಲ. ಆದರೂ ನನ್ನ ಶಕ್ತಿಮೀರಿ ಪ್ರಯತ್ನಿಸುತ್ತೇನೆ. ಭರವಸೆಯನ್ನು ಕೊಡಲಾರೆ."

"ಆದರೆ ಅಪ್ಪಾ, ನನಗೆ ಒಂದು ಉಪಕಾರ ಮಾಡುವಿರಾ?"

"ಏನು?"

"ನನ್ನನ್ನು ಜೀವಾವಧಿ ಶಿಕ್ಷೆ ಅಥವಾ ಕರಿನೀರಿನ ಶಿಕ್ಷೆಗೆ ಗುರಿಮಾಡಿ ಜೀವಂತ ನರಕದಲ್ಲಿ ಮಾತ್ರ ಇಡಬೇಡಿರಿ. ನನಗೆ ಬದುಕುವ ಆಶೆ ಇಲ್ಲ."

"ನಿಮ್ಮ ಮನಸ್ಸಿನ ಭಾವನೆಯನ್ನು ನಾನು ಬಲ್ಲೆ."

"ಕೊಲ್ಲುವುದಾದರೆ, ನನಗೆ ಫಾಶಿ ಶಿಕ್ಷೆ ಕೊಟ್ಟು ಗಲ್ಲಿಗೆ ಹಾಕಬೇಡಿರಿ. ಬೇಕಾದರೆ ತೋಫಿನ ಬಾಯಿಗೆ ಕೊಡಿರಿ, ಒಂದೇ ಹೊಡೆತಕ್ಕೆ ಈ ದೇಹ ವಿದೀರ್ಣವಾಗಿಬಿಡಲಿ. ಫಾಶಿಯೇಕೆ ನನಗೆ? ಕೊಲೆ ಮಾಡಿದೆನೆ? ದರೋಡೆ ಮಾಡಿದೆನೆ? ನನ್ನೆಲ್ಲ ತಪ್ಪುಗಳನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಿರಿ. ಅದೊಂದು ಉಪಕಾರ ಮಾಡಿರಿ, ಅಪ್ಪಾ."

ಟೇಲರ ಗರ ಹೊಡೆದವನಂತೆ, ಕೆಲಹೊತ್ತು ಸ್ತಬ್ಧಚಿತ್ತನಾಗಿ ಕುಳಿತಿದ್ದನು. ಆಮೇಲೆ ವಿಷಯ ಬದಲಿಸಿ ಹೇಳಿದನು.

"ಒಂದೆರಡು ದಿನದಲ್ಲಿ ಸುರಪುರಕ್ಕೆ ಹೋಗುವವನಿದ್ದೇನೆ. ವಾಡೆಯಲ್ಲಿ ಏನು ಹೇಳಲಿ?"

"ಸುರಪುರಕ್ಕೆ ಹೋಗುತ್ತೀರಾ? ಸಾಯುವುದಕ್ಕೆ ಸಿದ್ಧನಾಗಿದ್ದೇನೆ ಎಂದು ಹೇಳಿರಿ. ನನ್ನಿಂದಾಗಿ ಸಂಸ್ಥಾನವೂ ಹೋಯಿತು. ನನ್ನ ಮನೆತನವೂ ಮಣ್ಣುಗೂಡಿತು. ನನ್ನನ್ನು ಕ್ಷಮಿಸಬೇಕೆಂದು ರಂಗುವಿಗೂ ಅತ್ತೆ ಶೇಷಮ್ಮನಿಗೂ ಹೇಳಿರಿ. ಅವರ ಭಾರವನ್ನು ನಿಮಗೆಯೆ ಒಪ್ಪಿಸಿದ್ದೇನೆ. ಅವರನ್ನು ಅನ್ನಾನ್ನಗತಿಕರಾಗದಂತೆ, ಅನಾಥರಾಗದಂತೆ ನೋಡಿಕೊಳ್ಳಿರಿ. ಅಪ್ಪಾ. ಎಲ್ಲಿಂದಲೊ ನೀವು ಬಂದವರು. ಅದೇನು ನಮ್ಮ ನಿಮ್ಮ ಪೂರ್ವಜನ್ಮದ ಸಂಬಂಧವೊ. ಇಷ್ಟು ನಂಟುತನ ನಮ್ಮಲ್ಲಿ ಬೆಳೆದುಬಂದಿದೆ. ನಿಮಗಾಗಿ ನನ್ನಲ್ಲಿ ಕೊಡಲಿಕ್ಕೆ ಏನೂ ಇಲ್ಲ. ಅಪ್ಪಾ, ನನ್ನಲ್ಲಿ ಏನೂ ಇಲ್ಲ. ನನ್ನ ಮೈಮೇಲಿನ ಬಂಗಾರವನ್ನೆಲ್ಲ ತೆಗೆದುಕೊಂಡಿದ್ದಾರೆ. ಆದರೆ ಅಪ್ಪಾ, ಸುರಪುರಕ್ಕೆ ಹೋದಾಗ ನಿಮಗೆ ಏನು ಬೇಕೋ, ಅದೆಲ್ಲವನ್ನೂ ತೆಗೆದುಕೊಳ್ಳಿರಿ. ಅದಕ್ಕೆ ನನ್ನ ಸಂಪೂರ್ಣ ಅನುಮತಿ ಇದೆ. ನಾನಿನ್ನೂ ಸುರಪುರದ ರಾಜನಿದ್ದೇನೆ."

ಸುರಪುರಕ್ಕೆ ಹೊರಡುವುದಕ್ಕೆ ಮುಂಚೆ ರೆಸಿಡೆಂಟನಿಗೆ ಟೇಲರ್ ಸಾದ್ಯಂತವಾಗಿ ಮಾತುಕತೆ

# ನಿಮ್ಮ ಮನೆಯಿಂದ ನೋವನ್ನು ನಿವಾರಿಸಲು...










## ಸಾರಿಡಾನ್ ಉಪಯೋಗಿಸಿರಿ

ತಲೆನೋವು, ಮೈಕೈನೋವು, ಹಲ್ಲುನೋವು, ಮೈಬಿಸಿ ಯಾಗುವುದು, ಅಸ್ವಸ್ಥತೆ ಇತ್ಯಾದಿಗಳಿಂದ ನಿಮ್ಮ ಮನೆಯವರು ಯಾರಾದರೂ ಕಷ್ಟ ಪಡುವಾಗ ಅವರಿಗೆ ಸಾರಿಡಾನ್ ಕೊಡಿರಿ... ಅವರಿಗೆ ಶೀಘ್ರವಾಗಿ, ನಿರಪಾಯಕರವಾಗಿ ಮತ್ತು ನಿಶ್ಚಯವಾಗಿ ಉಪಶಮನವುಂಟಾಗುವುದು. ಸಾರಿಡಾನ್ ವಿಶ್ರಾಂತಿಯನ್ನು ಮತ್ತು ಉಲ್ಲಾಸವನ್ನು ಕೂಡ ನೀಡುತ್ತದೆ!

ದೊಡ್ಡವರಿಗೆ ಒಂದು ಮಾತ್ರೆ ಮತ್ತು ಮಕ್ಕಳಿಗೆ ¼ ರಿಂದ ½ ಮಾತ್ರೆ ಸಾಕು.







**ಒಂದೇ ಒಂದು ಮಾತ್ರೆ ಸಾಕು**

ಒಂದು ಮಾತ್ರೆಗೆ 13 ನಯೆ ಪೈಸೆ

'ರೋಶ್' ಉತ್ಪಾದನ    ಸೋಲ್ ಡಿಸ್ಟ್ರಿಬ್ಯೂಟರ್ಸ್: ವೋಲ್ಟಾಸ್ ಲಿಮಿಟೆಡ್

ಗಳನ್ನೆಲ್ಲ ವಿವರಿಸಿದ. ರೆಸಿಡೆಂಟನಿಗೂ ರಾಜನ ಧೀರವೃತ್ತಿಯು ಮನವರಿಕೆಯಾಗಿದ್ದಿತು.

ಟೇಲರನು ಸುರಪುರಕ್ಕೆ ಬಂದಕೂಡಲೇ ಶಾಸ್ತ್ರಿಗಳಿಗೆ ಕರೆ ಕಳುಹಿದನು. ಶಾಸ್ತ್ರಿಗಳು ಬಂದ ಕೂಡಲೇ ಕೇಳಿದನು: "ರಾಜನಿಗೆ ತನ್ನ ಜಾತಕದ ವಿಷಯವೇನಾದರೂ ತಿಳಿದಿತೆ ?"

"ಇಲ್ಲ, ಹೇಗೆ ಗೊತ್ತಾಗಬೇಕು ?"

"ನಾವಂತೂ ಅವರನ್ನು ಬದುಕಿಸುವ ಹಟ ತೊಟ್ಟಿದ್ದೇವೆ, ಶಾಸ್ತ್ರಿಗಳೇ."

"ಅವಶ್ಯವಾಗಿ ನಡೆಯಲಿ. ನಮ್ಮ ರಾಜರು ಬದುಕಿ ಉಳಿದರೆ ನಮಗೆ ಸಂತೋಷವೇ. ಆದರೂ ನಿಮ್ಮ ಪ್ರಯತ್ನ ಫಲಿಸುವುದೆಂಬ ಭರವಸೆ ನನಗಿಲ್ಲ, ಸಾಹೇಬರೆ."

"ಈ ನನ್ನ ಪತ್ರದ ಸಾರಾಂಶವನ್ನು ನಿಮಗೆ ಓದಿ ತೋರಿಸುತ್ತೇನೆ. ರೆಸಿಡೆಂಟ ಸಾಹೇಬರೂ ಅದನ್ನು ಅನುಮೋದಿಸುತ್ತಾರೆ" ಎಂಬುದಾಗಿ ಹೇಳಿ, ಟೇಲರನು ದಂಗೆಯೆದ್ದ ಹಿನ್ನೆಲೆಯನ್ನು ವಿವರಿಸಿದ, ಸ್ಥಳಿಕ ಕೆಲವು ಪ್ರಚೋದಕರ ಹೆಸರುಗಳನ್ನೊಳಗೊಂಡ, ಮತ್ತು ರಾಜನು ಸಂಪೂರ್ಣ ದೋಷಿಯಲ್ಲ ಎಂಬರ್ಥದ ಒಕ್ಕಣಿಕೆಯನ್ನೊ ಸ್ವಲ್ಪದರಲ್ಲಿ ವಿವರಿಸಿದನು.

"ನೀವು ಏನೇ ಹೇಳಿರಿ. ನನ್ನ ಲೆಕ್ಕದ ಕೊನೆಯ ಗಳಿಗೆಯು ವರೆಗೆ ನಾನು ಇದನ್ನು ನಂಬಲಾರೆ. ಮುಂದಿನ ತಿಂಗಳಂತೂ ನಾಯಕರ ಗ್ರಹಗತಿ ಅನಿಷ್ಟವಾದದ್ದಿದೆ."

ಕೆಲವೇ ದಿನಗಳಲ್ಲಿ ವಿಚಾರಣಾ ಮಂಡಳವು, ರಾಜನಿಗೆ ಮರಣದಂಡನೆಯನ್ನು ವಿಧಿಸಿತು. ರೆಸಿಡೆಂಟನು ತನ್ನ ಕೈಯಲ್ಲಿ ಅಧಿಕಾರವಿರುವ ಮಟ್ಟಿಗೆ ಅದನ್ನು ಜೀವಾವಧಿ ಶಿಕ್ಷೆಗೆ ಇಳಿಸಿ, ಗವರ್ನರ್ ಜನರಲ್ಲನಿಗೆ ವರದಿಯನ್ನೊಪ್ಪಿಸಿದನು; ಮತ್ತು ಟೇಲರನ ವರದಿಯನ್ನೂ ಜೊತೆಗೆ ಇಟ್ಟು ಶಿಕ್ಷೆಯನ್ನು ಇನ್ನೂ ಕಡಿಮೆ ಮಾಡಬೇಕು ಎಂಬುದಾಗಿ ಸೂಚಿಸಿದನು. ತಮ್ಮವನೇ ಆದ ಅಧಿಕಾರಿಯೊಬ್ಬನು ಆಗಿನ ದಿನಗಳಲ್ಲಿ ವಿರೋಧಿಗೆ ಅನುಕೂಲಾತ್ಮಕವಾಗಿ ಬರೆದ ವರದಿಯೂ ಸುರಪುರ ಯುದ್ಧದಲ್ಲಿ ಬ್ರಿಟಿಶರಿಗೆ ಏನೂ ನಷ್ಟವಾಗಿರಲಿಲ್ಲವೆಂಬ ಸಂಗತಿಯೂ ಒಳ್ಳೆಯ ಪರಿಣಾಮವನ್ನುಂಟುಮಾಡಿದುವು. ಗವರ್ನರ್ ಜನರಲ್ಲನು ಆ ಶಿಕ್ಷೆಯನ್ನು ನಾಲ್ಕು ವರ್ಷಗಳಿಗೆ ಇಳಿಸಿದನಲ್ಲದೆ ಹೆಂಡಂದಿರು, ಸೇವಕರೊಡನೆ ಬಂಧಿತ ಸ್ಥಳದಲ್ಲಿ ಇರಬಹುದೆಂದೂ ಹೇಳಲಾಗಿತ್ತು. ಅಲ್ಲದೆ ಒಳ್ಳೆಯ ಹಾಗೂ ವಿಧೇಯ ವರ್ತನೆ ಕಂಡುಬಂದರೆ ರಾಜ್ಯವನ್ನು ಮರಳಿ ಪಡೆಯಬಹುದೆನ್ನುವ ಆಶ್ವಾಸನವೂ ಇದ್ದಿತು.

ಈ ಆಜ್ಞೆಯ ಪ್ರತಿ ಕೈಸೇರಿದೊಡನೆಯೇ ಟೆಲರನು ಶಾಸ್ತ್ರಿಗಳಿಗೆ ಕರೆಕಳುಹಿದನು. "ನೋಡಿರಿ ಶಾಸ್ತ್ರಿಗಳೆ, ಯಾರ ಮಾತು ಸತ್ಯವಾಯಿತು ? ಈ ಹಿಂದೆ ನೀವು ಅನವಶ್ಯಕವಾಗಿ ಹಿಂದಿನ ರಾಜನ ಹಾಗೂ ರಾಣಿಯ ಮನಸ್ಸನ್ನು ಗಾಸಿಗೊಳಿಸಿದಿರಿ. ಎಲ್ಲಿ ಹೋಯಿತು ನಿಮ್ಮ ಭವಿಷ್ಯ! ನಿಮ್ಮ ರಾಜರು ಬದುಕಿ ತಮ್ಮ ೨೪ನೆಯ ವಯಸ್ಸನ್ನು ದಾಟುವರಲ್ಲದೆ, ಇಲ್ಲಿಯೇ ಮತ್ತೆ ರಾಜ್ಯಭಾರವನ್ನು ನಡೆಯಿಸುವರು" ಎಂದು ಉತ್ತೇಜಿತನಾಗಿ ಹೇಳಿದನು.

ಶಾಸ್ತ್ರಿಗಳು ಕೆಲ ಹೊತ್ತು ಮೌನವಾಗಿದ್ದರು. "ಇಂಥ ಪ್ರಸಂಗದಲ್ಲಿ ನಾನೇನು ಹೇಳಲಿ? ಜ್ಯೋತಿಃಶಾಸ್ತ್ರವು ವಂಶಪಾರಂಪರ್ಯವಾಗಿ ನಮ್ಮಲ್ಲಿ ಉಳಿದುಕೊಂಡ ಶಾಸ್ತ್ರವಾಗಿದೆ. ನನ್ನ ಲೆಕ್ಕ ತಪ್ಪಿಲ್ಲವೆಂದು ನನಗೆ ಈಗಲೂ ಅನಿಸುತ್ತದೆ. ಭಗವಂತನು ದುಷ್ಟಗ್ರಹಗಳನ್ನು ದೂರ ಮಾಡುವ ಪ್ರಸಂಗವೇನೋ ಇರುತ್ತದೆ. ಆದರೂ ಸಾಹೇಬರೇ, ಈ ತಿಂಗಳಂತೂ ರಾಜಕುಮಾರರ ಗ್ರಹಗತಿ ತೀರ ಅನಿಷ್ಟಕರವಿದೆಯಲ್ಲ! ನಾನೇ ಹೋಗಿ ರಾಣಿಗೆ ಬಿಡುಗಡೆಯ ಸುದ್ದಿಯನ್ನು ತಿಳಿಸುತ್ತೇನೆ."

ಸುದ್ದಿ ತಿಳಿದ ರಾಣಿ ರಂಗಮ್ಮನು ಟೇಲರನೆಡೆಗೆ ಓಡಿಬಂದು ಸಣ್ಣ ಮಗುವಿನಂತೆ ಮುತ್ತಿಕೊಂಡಳು. ಗಂಡನ ಮರಣ ವಾರ್ತೆಯನು

ನಿರೀಕ್ಷಿಸಿದ್ದ ಆಕೆಗೆ ಈ ಸುದ್ದಿಯಿಂದಾದ ಆನಂದಕ್ಕೆ ಪಾರವೇ ಇರಲಿಲ್ಲ.

ಯಾರು ಯಾರು ರಾಜನ ಜೊತೆಗೆ ಹೋಗಿ ಇರಬೇಕೆಂಬ ಬಗ್ಗೆ ಆಲೋಚನೆ ನಡೆಯಿತು. ರಂಗಮ್ಮನೂ ಇನ್ನೊಬ್ಬ ಹೆಂಡತಿಯೂ ಹೊರಡುವ ಸಿದ್ಧತೆ ಮಾಡಿಕೊಂಡರು. (ಮೂರನೆಯವಳು ಅವನಿಗೆ ಅಷ್ಟು ಮೆಚ್ಚಿನವಳಾಗಿರಲಿಲ್ಲ) ಸಿಕಂದರಾಬಾದದಿಂದ ಕರ್ನೂಲಿಗೆ ಹೊರಟಿದ್ದ ರಾಜನನ್ನು ಮರುದಿನ ಕೂಡಿಕೊಳ್ಳುವವರಿದ್ದರು. ಹೊರಡಬೇಕೆಂದು ಗೊತ್ತುಮಾಡಿಕೊಂಡಿದ್ದ ಸಂಜೆಗೆ ಅಂಚೆಯನ್ನು ಹಿಡಿದುಕೊಂಡು ದೂತನೊಬ್ಬನು ಟೇಲರನಲ್ಲಿಗೆ ಬಂದನು. ಅಕಸ್ಮಾತ್ ಶಾಸ್ತ್ರಿಗಳು ಅಲ್ಲಿಯೇ ಇದ್ದರು. ಆ ಪತ್ರವನ್ನು ಒಡೆದು ಓದುತ್ತಿದ್ದ ಟೇಲರನ ಮುಖವನ್ನೇ ನೋಡುತ್ತಿದ್ದರು.

"ಏನಾದರೂ ಕೆಟ್ಟ ಸುದ್ದಿಯೆಂದು ಕಾಣುತ್ತದೆ" ಎಂದರು.

"ಹೌದು, ರೆಸಿಡೆಂಟರ ಸಂದೇಶ ಬಂದಿದೆ. ರಾಜನು ದಾರಿಯಲ್ಲಿ ಗುಂಡು ಹೊಡೆದುಕೊಂಡು ಮಡಿದಿದ್ದಾನೆ."

ಕುಳಿತಲ್ಲಿಂದ ಶಾಸ್ತ್ರಿಗಳು ಜಿಗಿದೆದ್ದು ಟೇಲರನ ಕುತ್ತಿಗೆಯನ್ನೇ ಹಿಡಿಯುವಂತೆ ಧಾವಿಸಿ ಹತ್ತಿರ ಬಂದರು. "ಶಾಸ್ತ್ರ ಸುಳ್ಳಾಗಲಿಲ್ಲ ಸಾಹೇಬರೇ! ಕೊನೆಗೂ ಗ್ರಹಗತಿಗಳು ತಮ್ಮ ಬಲವನ್ನು ತೋರಿಸಿದವು. ಈಗೇನು ಹೇಳುತ್ತೀರಿ?"

ಟೇಲರ್ ಮೌನಿಯಾಗಿದ್ದ. ೨೪ ವರ್ಷಗಳು ತುಂಬುತ್ತಿರುವ ಸರಿಯಾದ ಸಮಯಕ್ಕೆಯೆ ಈ ದುರ್ಘಟನೆ ಜರುಗಿತ್ತು. ೨೪ ವರ್ಷಗಳ ಹಿಂದೆ ಬರೆದ ಜಾತಕದ ನುಡಿ ಕೊನೆಗೂ ಸತ್ಯವಾಗಿ ಪರಿಣಮಿಸಿತ್ತು.

ನಡೆದದ್ದು ಇಷ್ಟೇ. ಅವನನ್ನು ಸಿಕಂದರಾಬಾದದಿಂದ ಕರೆದುಕೊಂಡು ಹೊರಟಿದ್ದ ಸಾರ್ಜೆಂಟನು, ನಡುದಾರಿಯಲ್ಲಿ ತಂಗಿದ್ದನು. ನಿಸರ್ಗದ ಕರೆಗೆ ಓಗೊಡಲೆಂದು, ಟೊಂಕಕ್ಕೆ ಕಟ್ಟಿದ್ದ ಪಿಸ್ತೂಲಿನ ಪಟ್ಟಿಯನ್ನು ಬಿಚ್ಚಿ ಅಲ್ಲಿಯೆ ಇಟ್ಟು ಹೊರಗೆ ಹೋಗಿದ್ದನು.

ತುಸು ದೂರ ಹೋಗುವಷ್ಟರಲ್ಲಿ ಗುಂಡಿನ ಸಪ್ಪಳ ಕೇಳಿಸಿತು. ದಡಬಡನೆ ಮರಳಿ ಬರುವನಿತರಲ್ಲಿ ರಾಜನು ಹೊಟ್ಟೆಯಿಂದ ರಕ್ತ ಕಾರುತ್ತ ನೆಲದ ಮೇಲೆ ಬಿದ್ದಿದ್ದುದನ್ನು ಕಂಡನು. ಯಾವ ರಾಜಮರ್ಯಾದೆಗಳೂ ನಡೆಯಲಿಲ್ಲ.

ರಾಜನು ಆತ್ಮಹತ್ಯೆಯನ್ನೇಕೆ ಮಾಡಿಕೊಂಡನೆಂಬ ಬಗ್ಗೆ ಇದುವರೆಗೂ ಖಚಿತವಾಗಿ ತಿಳಿದಿಲ್ಲ. ಟೇಲರನಂತೂ ಅದು ಆತ್ಮಹತ್ಯವಲ್ಲ ಆಕಸ್ಮಿಕ, ಹೊಸಬಗೆಯ ಆ ಪಿಸ್ತೂಲನ್ನು ಪರೀಕ್ಷಿಸಲೆಂದು ಹೋಗಿ ಹಾಗಾಗಿರಬೇಕು ಎಂದೇ ಭಾವಿಸಿದನು. ಅದು ಏನಿದ್ದರೂ ಗಂಡನನ್ನು ಕೂಡಿಕೊಳ್ಳಲೆಂದು ಹೊರಟಿದ್ದ ರಾಣಿಗೆ ಏನು ಸಮಾಧಾನ ಹೇಳಬೇಕೆಂದು ಅವನಿಗೆ ತಿಳಿಯಲಿಲ್ಲ. ಅವಳ ತಂದೆಯನ್ನು ಕರೆಯಿಸಿ ಮಗಳಿಗೆ ಸುದ್ದಿ ಮುಟ್ಟಿಸಲು ಸೂಚಿಸಿದ

ಹೀಗೆ ರಾಜಾ ವೆಂಕಟನಾಯಕನ ಅಂತ್ಯವಾಯಿತು. ಸುರಪುರದ ಸಂಸ್ಥಾನವು ಕೊನೆಗಂಡಿತು. ಸುರಪುರದ ಬೇಡರ ಅಸ್ತಿತ್ವವೂ ನಿರ್ನಾಮವಾಯಿತು. ಕರ್ನಾಟಕದಲ್ಲಿ ಮೊಟ್ಟಮೊದಲಿಗೆ ನಡೆದ ಸ್ವಾತಂತ್ರ್ಯ ಯುದ್ಧದ ಫಲ ಈ ರೀತಿಯಾಗಿ ಪರಿಣಮಿಸಿತು.

ಇಪ್ಪತ್ನಾಲ್ಕು ವರ್ಷಗಳ ವರೆಗೆ ಕೊಟ್ಟ ಭವಿಷ್ಯವನ್ನು ಘಂಟಾಘೋಷವಾಗಿ ಸಾರಿದ ಆ ಜಾತಕದ ಪ್ರತಿ ಈಗಲೂ ಮೆಡೋಸ್ ಟೇಲರನ ಮೊಮಗಳ ಪೆಟ್ಟಿಗೆಯಲ್ಲಿ ಜೀವಂತವಾಗಿ ಇದೆ. *



ರುಚಿಗೆ! ಗುಣಕ್ಕೆ!! ತೃಪ್ತಿಗೆ!!!

ಪ್ರತಿದಿನ ಒಂದಕ್ಕೆ

## ಎರಡು ಕೋಟಿಗೂ

ಮೇಲ್ಪಟ್ಟು ಬೀಡಿಗಳ ತಯಾರಿಕೆಯಿಂದ ದಕ್ಷಿಣ ಭಾರತದಲ್ಲಿ

**ಮೊದಲನೆಸ್ಥಾನವನ್ನು ಗಳಿಸಿರುವ ಭಾರತದ ಬೃಹತ್ ಉದ್ಯಮದ ಉತ್ಪನ್ನಗಳು**




ಪ್ರಧಾನ ಕಚೇರಿ:

# ಮಂಗಳೂರು ಗಣೇಶ ಬೀಡಿ ವರ್ಕ್ಸ್

ಸಂತೆಪೇಟೆ, ಮೈಸೂರು

TELEGRAM "AROMA" TELEPHONE 421

This Magazine owned by The Loka Shikshana Trust, Hubli is printed and published by Shri H. R. Purohit at the Samyukta Karnatak Press, Koppikar Road, Hubli

ಹಿಮಾಲಯ ದರ್ಶನ

ಲೇ : ಭಾರತ ಸಂಚಾರಿ ಬೆಲೆ : ೭-೫೦

ಅಧ್ಯಾತ್ಮ ಕಾರ್ಯಾಲಯ ಹುಬ್ಬಳ್ಳಿ ಹಾಗೂ ೨. ರೆಸಿಡೆನ್ಸಿರೋಡ ಬೆಂಗಳೂರು-೧




SRIMILLS







ತಯಾರಕರು:- ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್. ಮಂಗಳೂರು.

Regd. No. B



KASTU

A KANNAD
MONTHLY D

*Circulates thro*
*the Mysore*
*and outside wh*
*Kannada is sp*

*Command*
*the highest nu*
*of reader*

*Caters to all t*

75nP.

A Loka Shiks
Trust Public